# ನಿಷ್ಕಾಮ ಪ್ರೇಮ




ಗ್ರಂಥಕರ್ತ

**ಉಳ್ಳಾಲ ಮಂಗೇಶರಾವ್**





ಬಾಲಸಾಹಿತ್ಯ ಮಂಡಲ, ಲಿಮಿಟೆಡ್, ಮಂಗಳೂರು

ಇವರಿಂದ ಪ್ರಕಟಿಸಲ್ಪಟ್ಟಿತು.





(ಪ್ರಥಮ ಮುದ್ರಣ)





***All Rights reserved by the Publishers***





[Price 0–12–0



ಸರಸ್ವತೀ ಪ್ರಿಂಟಿಂಗ್ ವರ್ಕ್ಸ್, ಲಿಮಿಟೆಡ್, ಮಂಗಳೂರು.



[illegible] ಭಾಂಡಾರ

# ಎರಡು ಮಾತು.

ಈ ಗ್ರಂಥವು **ಮೇರಿ ಕೊರಿಲ್ಲಿ** ಎಂಬ ಪ್ರಸಿದ್ಧ ಸ್ತ್ರೀಯ 'ದಿ ಟ್ರೆಜರ್ ಒಫ್ ಹೆವನ್' ಎಂಬ ಕಾದಂಬರಿ ಗ್ರಂಥದ ಆಧಾರದಿಂದ ಬರೆದಿದೆ. ಮೇರಿ ಕೊರಿಲ್ಲಿಯವರ ಹಲವು ಕಾದಂಬರಿಗಳಲ್ಲಿ ಹೇಳುವ ತಾತ್ವಿಕ ವಿಚಾರಗಳಿಗೂ ನಮ್ಮ ಪ್ರಾಚೀನ ತಾತ್ವಿಕ ವಿಚಾರಗಳಿಗೂ ವಿಶೇಷ ವ್ಯತ್ಯಾಸವಿಲ್ಲದ್ದರಿಂದ ಕ್ರೈಸ್ತಧರ್ಮಾಭಿಮಾನಿಯಾಗಿದ್ದು ಇವರು ಬರೆದ ಹಲವು ಗ್ರಂಥಗಳನ್ನು ಇದೇ ರೀತಿಯಲ್ಲಿ ನಮ್ಮ ದೇಶೀಯ ಚಿತ್ರಗಳಿಗೆ ಮಾರ್ಪಡಿಸಲು ಸಾಧ್ಯವಿದೆ. ಇದರಲ್ಲಿ ಮನುಷ್ಯನ ಧ್ಯೇಯವು ಬರೀ ಧನಸಂಗ್ರಹವಲ್ಲ, ಅತುಲಧನಸಂಗ್ರಹದಿಂದಲೂ ಸಿಗಲಾರದ ಸುಖವೂ ಶಾಂತಿಯೂ ನಿಷ್ಕಾಮಪ್ರೇಮದಲ್ಲಿ ಕಾಣುತ್ತವೆಂದು ಚಿತ್ರಿಸಿದೆ.

ಇಂಗ್ಲಿಷ ಗ್ರಂಥಗಳನ್ನು ದೇಶಿಯ ರೂಪಕ್ಕೆ ತರುವುದರಲ್ಲಿ ಇದು ಎರಡನೆ ಪ್ರಯತ್ನ. 'ಕೌಂಟ್ ಒಫ್ ಮೊಂಟೆ ಕ್ರಿಸ್ಟೊ' 'ವಿಧಿಯ ವೈಚಿತ್ರ್ಯ'ವಾಗಿ ಪರಿಣಮಿಸಿದ್ದು ಮೊದಲನೆದು. ಇದು ವಾಚಕರ ಮೆಚ್ಚಿಗೆಗೆ ಪಾತ್ರವಾದರೆ ಮೂರನೆದಾಗಿ ತಯಾರಾಗಿದ್ದ ಇನ್ನೊಂದು ಗ್ರಂಥವು ಬೇಗನೆ ಅಚ್ಚಿಗೆ ಬರಲಿರುವುದು.

**ಉಳ್ಳಾಲ ಮಂಗೇಶರಾವ್**
ಗ್ರಂಥಕರ್ತ

# ನಿಷ್ಕಾಮ ಪ್ರೇಮ

## ೧ನೆ ಅಧ್ಯಾಯ

ಶರತ್ಕಾಲದ ಸಾಯಂಕಾಲ. ಮುಂಬಯಿಯ ಮಲಬಾರುಹಿಲ್ಲದಲ್ಲಿ ವಾಯುಸೇವನೆಗೆ ಹೋಗುವವರ ಮೋಟರುಗಳ 'ಪೊಂ ಪೊಂ' ಧ್ವನಿ. ಅಗಲವಾದ ರಸ್ತೆಯ ಇಕ್ಕಡೆಗಳಲ್ಲಿರುವ ಹೂದೋಟ ಮತ್ತು ಬಂಗಲೆಗಳ ಮೇಲೆ ತನ್ನ ಶುಭ್ರಪ್ರಕಾಶವನ್ನು ಬೀರುತ್ತ ಚಂದ್ರನು ಆಕಾಶದಲ್ಲಿ ಮೇಲೇರಿಕೊಂಡು ಬರುತಿದ್ದನು. ರಸ್ತೆಗಳಲ್ಲಿ ಹೊತ್ತಿಸಿದ ವಿದ್ಯುದ್ದೀಪಗಳ ಕಾಂತಿಯು ಚಂದ್ರನ ಕಾಂತಿಯನ್ನು ಪ್ರತಿಭಟಿಸುವಂತೆ ಇದ್ದು ರಾತ್ರಿಯನ್ನು ಹಗಲಿನಂತೆ ಬೆಳಗಿಸುತಿತ್ತು. ಪ್ರತಿಯೊಂದು ಕಂಪೌಂಡಿನಲ್ಲಿ ಹೊರಡುತ್ತಿರುವ ಕಾರಂಜಿಗಳ ನೀರಹನಿಗಳು ಕೆಳಕ್ಕೆ ಬೀಳುವಾಗ ಈ ಎರಡು ಪ್ರಕಾಶಗಳ ಲೇಪನದಿಂದ ಮಳೆಬಿಲ್ಲಿನ ಕಾಂತಿಯನ್ನು ಹೊಂದಿದ್ದವು. ಪ್ರತಿಯೊಂದು ಕಂಪೌಂಡಿನ ಹೂದೋಟದಲ್ಲಿ ಬಗೆಬಗೆಯ ಬಳ್ಳಿಗಳು, ಸುವಾಸನೆಯ ಹೂವುಗಳು ಆನಂದವನ್ನು ಕೊಡುತ್ತಿದ್ದುವು. ಇಂಥದೊಂದು ಕಂಪೌಂಡಿನಲ್ಲಿ 'ರೋಲ್ಸ್ ರೋಯ್ಸ್' ಮೋಟರ ಕಾರೊಂದು ಬಂಗಲೆಯ 'ಪೊರ್ಟಿಕೊ' ಒಳಗೆ ಬಂದು ನಿಂತಿತು. ಡ್ರೈವರನು ಕೆಳಗಿಳಿದು ಬಾಗಿಲನ್ನು ತೆರೆದನು. ಆಗ ಒಬ್ಬರ ಹಿಂದೆ ಒಬ್ಬರಾಗಿ ಇಬ್ಬರು ವ್ಯಕ್ತಿಗಳು ಹೊರಬಿದ್ದರು; ಜಗಲಿಯಿಂದ ಉಪ್ಪರಿಗೆಗೆ ಹತ್ತುವ ಮೆಟ್ಟಿಲುಗಳನ್ನು ಹತ್ತಿಕೊಂಡು ಬಂದರು. ಅನಂತರ ಉಪ್ಪರಿಗೆಯ ದೊಡ್ಡ ಹೋಲಿಗೆ ಎದುರಾಗಿರುವ ಬೋಳುಮಾಳಿಗೆಯಲ್ಲಿ ನಿಂತರು. ಅಷ್ಟರೊಳಗೆ ಜವಾನರಿಬ್ಬರು ಎರಡು 'ಈಜಿಚೆಯರು'ಗಳನ್ನು ಅಲ್ಲಿ ತಂದು ಇಟ್ಟರು. ಮತ್ತು ಅವುಗಳ ನಡುವೆ ಒಂದು ಚಿಕ್ಕ ಮೇಜನ್ನು ಇಟ್ಟು ಹಿಮುಗಡ್ಡೆಯ ಚೂರನ್ನು ಹಾಕಿದ ಶರಬತ್ತು ತುಂಬಿಸಿದ ಎರಡು ಟಂಬ್ಲರುಗಳನ್ನು ಒಂದು ತಟ್ಟೆಯಲ್ಲಿ ತಂದಿಟ್ಟರು. ಆ ವ್ಯಕ್ತಿಗಳು ಅದನ್ನು ಕುಡಿಯುವಷ್ಟರಲ್ಲಿ ಎರಡು ಹುಕ್ಕೆಗಳು ತಯಾರಾದುವು. ಇಬ್ಬರೂ ಹುಕ್ಕೆಯ ನಳಿಗೆಗಳನ್ನು ಬಾಯಲ್ಲಿಟ್ಟುಕೊಂಡು ತುಸು ಹೊತ್ತು ಸುಮ್ಮನೆ ಈಜಿಚೆಯರುಗಳಲ್ಲಿ ಒರಗಿದರು.

ಈಗ ಈ ಇಬ್ಬರ ಪರಿಚಯುವನ್ನು ಮಾಡೋಣ-ಮೊದಲು ಬಂದವನು ಪ್ರಸಿದ್ಧ ಗಿರಣಿಯೊಂದರ ಮ್ಹಾಲಿಕನು. ಅವನ ಹೆಸರು ಜಗಜೀವನ ದಾಸ ಸೇಟ್. ಅವನು ದೊಡ್ಡ ಶ್ರೀಮಂತನು. ಮುಂಬಯಿಯ ಗಿರಣಿ ಮ್ಹಾಲಿಕರ ಸಂಘದ ಅಧ್ಯಕ್ಷನು. ತೆಳುವಾದ ಮೈ, ಚಂಚುಮೂಗು, ತೀಕ್ಷ್ಣವಾದ ಕಣ್ಣುಗಳು, ಅಗಲವಾದ ಹಣೆ, ಪೊಳ್ಳುಬಿದ್ದ ಕೆನ್ನೆಗಳು; ಕಾಲಿಗೆ ಬಿಳಿ ಇಜಾರು; ಉದ್ದವಾದ ಕಪ್ಪು ಕೋಟು. ತಲೆಗೊಂದು ಪಾಗೋಟಿ; 'ಪೇಟೆಂಟ್ ಲೆದರ್ ಬೂಟ್ಸ'ನ್ನು ಮೆಟ್ಟಿದ್ದನು. ಇನ್ನೊಬ್ಬನು ಇವನ ಪರಮಮಿತ್ರನಾದ ಜಹಂಗೀರ್ ಅರ್ದೆಸೀರ್ ಎಂಬ ಫಾರ್ಸಿ 'ಸೊಲಿಸಿಟರ'ನು. ಇವನು ಅದೇ ರೀತಿಯ ಪೋಷಾಕನ್ನು ಧರಿಸಿದ್ದನು. ಆದರೆ ತಲೆಗೆ ಮಾತ್ರ ಯುರೋಪಿಯನರ ಹೇಟನ್ನು ಧರಿಸಿದ್ದನು. ಮೈಬಣ್ಣ ಬೆಳ್ಳಗೆ, ಬಲಿತ ಕೊಬ್ಬಿದ ಮೈ, ನಸುಕೆಂಪಾದ ಚಪ್ಪಟೆ ಮೂಗು, ಕೆನ್ನೆಗಳ ಪ್ರದೇಶದಲ್ಲಿ ಚಾಚಿಕೊಂಡಿರುವ ರೋಮಾವಳಿ; ಕ್ರೊಪ್ ಮಾಡಿದ ತಲೆ, ಇವನ ಮುಖದ ಮೇಲೆ ಕಾಣುವ ನಸುನಗು, ಇವೆಲ್ಲ ಇವನು ತನ್ನ ವೃತ್ತಿಯಲ್ಲಿ ತುಂಬಾ ಹಣ ಮಾಡಿ ಸುಖದಲ್ಲಿದ್ದಾನೆಂದು ಭಾಸವಾಗುತ್ತ ಲಿತ್ತು.

ಹುಕ್ಕೆಯನ್ನು ಸ್ವಲ್ಪ ಸೇದುತ್ತ ಕುಳಿತ ಮೇಲೆ ಜಹಂಗೀರನು 'ಸೇಟಜೀ, ನನ್ನ ಪ್ರಶ್ನೆಗೆ ನಿಮ್ಮ ಉತ್ತರ ಸಿಗಲಿಲ್ಲವಲ್ಲಾ?' ಎಂದನು.

**ಜಗಜೀವನದಾಸ ಸೇಟ್**:—ನಿಮಗೆ ನನ್ನ ಮಾತುಗಳು ತೀರಾ ಕ್ಷುಲ್ಲಕವಾಗಿ ಕಾಣಬಹುದು. ಆದರೆ ನನ್ನ ಅಂಬೋಣವು ನಿಜವಾದದ್ದೇ ಎಂದು ನನಗೆ ಖಂಡಿತವಿದೆ.

**ಜಹಂಗೀರ್**:—ನಿಜವಾಗಿರಬಹುದು! ಆದರೆ ಸತ್ಯವಾದುದನ್ನು ಅತೀ ಚಾಣಾಕ್ಷದೃಷ್ಟಿಯಿಂದ ನೋಡಿ ಟೀಕಿಸಲು ಚರ್ಚಿಸಲು ಬರುವುದಿಲ್ಲ. ನಾವು ಎಂದಾದರೂ ವೃದ್ಧರಾಗಲೇ ಬೇಕು, ಒಂದಾನೊಂದು ದಿನ ಸಾಯಲೇ ಬೇಕು. ಆದರೆ ಎಂದೋ ಸಾವು ಬರುವ ದಿನವು ಅನಿಶ್ಚಿತ ವಾಗಿದ್ದಾಗ ನಿರ್ಲಕ್ಷ್ಯರಾಗಿರುವುದು ವಿಚಾರಶೀಲರ ಲಕ್ಷಣವಲ್ಲ.

**ಜಗಜೀವನ:**—ಆದ್ದರಿಂದಲೇ ತರುಣರಿರುವಾಗಲೇ ಇನ್ಶೂರು ಮಾಡಬೇಕು, ನಡುಪ್ರಾಯ ದಾಟಿದೊಡನೆ ವೀಲು ಮಾಡಿ ಇಡಬೇಕು ಎಂದು ನೀವು ಅನೇಕರಿಗೆ ಬೋಧಿಸುತ್ತೀರಾ?

**ಜಹಂಗೀರ್:**—ಮನುಷ್ಯನು ವೀಲು ಮಾಡದೆ ಥಕ್ಕನೆ ಬಿದ್ದು ಹೋದರೆ ಅವನ ಆತ್ಮೀಯರಾದ ನೆಂಟರಿಷ್ಟರು ಕೂಡಾ ಎಂಜಲೆಲೆಯ ಮೇಲಿನ ನಾಯಿಗಳಂತೆ ಕಚ್ಚಾಡಿಕೊಂಡು ಕೋರ್ಟುಕಚೇರಿಗಳಲ್ಲಿ ಹಣ ದುರ್ವ್ಯಯ ಮಾಡುತ್ತಾರೆ, ಅಲ್ಲವೇ ಸೇಟಜಿ!

**ಜಗಜೀವನ:**—ಅದು ನಿಜ. ಆದರೆ ನನಗೀಗ ವೃದ್ಧಾಪ್ಯ ಬಂದಿದೆ ಯೆಂಬುದು ಚಿಂತೆಗೆ ಕಾರಣವಾಗಿಲ್ಲ. 'ಜಾತಸ್ಯ ಮರಣಂ ಧ್ರುವಂ.' ಬರುವ ಮರಣವನ್ನು ತಪ್ಪಿಸಲಾರೆವು. ನನ್ನ ಜೀವನಕಾಲವನ್ನೆಲ್ಲಾ ಸವೆಯಿಸಿ ಸಂಪಾದಿಸಿದ ಈ ಹೇರಳ ಸಂಪತ್ತು ನನ್ನ ಅನಂತರ ಏನಾಗ ಬೇಕು ಎಂಬುದೇ ನನಗೆ ಚಿಂತೆ!

**ಜಹಂಗೀರ್:**—ನೋಡುವುದಕ್ಕೆ ಕ್ಷೀಣಪ್ರಕೃತಿಯವರಾದರೂ ನಿಮ್ಮಲ್ಲಿ ಚಟುವಟಿಕೆ ತುಂಬಾ ಇದೆ. ನೀವು ಶ್ರೀಮಂತರು, ಸುಖದಲ್ಲಿ ಓಲಾಡುತ್ತ ಇದ್ದೀರಿ ಎಂದರೂ ನಿಮ್ಮ ಕರ್ತವ್ಯ ನೀವು ಮಾಡಲೇ ಬೇಕಲ್ಲ!

**ಜಗಜೀವನ:**—(ನಸುನಗುತ್ತಾ) ಸುಖವು ತೀರಾ ಶ್ರೀಮಂತ ಮತ್ತು ರಾಜರ ಹಕ್ಕಿನದು ಎಂದು ತಿಳಿಯಬೇಡಿರಿ. ಇದು ನಿಮ್ಮ ಅನುಭವ ದಲ್ಲಿರಬಹುದು. ನನ್ನ ಸ್ವಂತ ವಿಚಾರವಾಗಿ ಹೇಳುವುದಾದರೆ ನನ್ನ ತಾರುಣ್ಯದಿಂದಲೂ ಸುಖವು ನನ್ನ ಪಾಲಿಗೆ ಬಂದಿಲ್ಲ.

**ಜಹಂಗೀರ್:**—ವಿಷಯಸುಖದ ಮಾತೆನ್ನುವಿರಾ?

**ಜಗಜೀವನ:**—'ನೀವು ಹಾಗೆನ್ನುವಿರೆಂದು ನಾನು ತಿಳಿದಿದ್ದೆ. ಆದರೆ ಹಲವು ಸಲ ಚಿಂತೆಯು ಮುಪ್ಪಿನವರಂತೆ ತರುಣರ ಮೇಲೆಯೂ ಬೀಳುತ್ತದೆ.' ಹೀಗೆಂದು ಹೇಳಿ ಆಕಾಶವನ್ನು ನೋಡುತ್ತಾ ಏನನ್ನೋ ಚಿಂತಿಸುತ್ತಿರುವ ವನಂತೆ ಸುಮ್ಮಗಾದನು. ಆ ಮೇಲೆ 'ಇನ್ನೂ ಹೇಳಲೆ?' ಎಂದನು.

**ಜಹಂಗೀರ್:**—ಬೇಕಾದ್ದು ಹೇಳಿ! ನಾಲಗೆಯನ್ನು ಬಿಗಿಹಿಡಿಯ ಬೇಡಿ. ಆದರೆ ನೀವು ಎಷ್ಟು ಹೇಳಿದರೂ ನಿಮ್ಮಂಥ ಶ್ರೀಮಂತರಿಗೆ ಮನೋ ವ್ಯಥೆಯಿದೆ ಎಂಬುದನ್ನು ಮಾತ್ರ ನಾನು ನಂಬಲಾರೆ! ಅದು ಬರಿ ಕಲ್ಪನೆಯ ಮಾತು.

**ಜಗಜೀವನ:**—ಅದು ಕಲ್ಪನೆಯ ಮಾತಿರಲಿ! ನೀವು ನನ್ನ ಮೇಲೆ ಅನುತಾಪ ತೋರಿಸಬೇಕೆಂದು ನಾನು ಹಾರೈಸುವುದೂ ಇಲ್ಲ! ಅನುತಾಪ! ಸ್ತ್ರೀಯರು ಕೂಡಾ ತಮ್ಮ ಪತಿಗಳ ಕಡೆಗೆ ಈಗಿನ ಕಾಲದಲ್ಲಿ ಸಾಕಷ್ಟು ಅನುತಾಪವನ್ನು ತೋರಿಸುವುದಿಲ್ಲ. ಅಷ್ಟೇಕೆ! ಧೀರನಾದವನು ಅದನ್ನು ಬಯಸುವುದೂ ಇಲ್ಲ. ಆದರೆ ಒಂದೊಂದು ಸಲ—

**ಜಹಂಗೀರ:**—ಏನು? ಅಲ್ಲಿಯೇ ಮಾತು ತಡವರಿಸಿದಿರಿ!

**ಜಗಜೀವನ:**—ಇಷ್ಟೆ! ಒಂದೊಂದು ಸಲ ನಮ್ಮ ಪ್ರಯತ್ನದ ಫಲ ವನ್ನೆಲ್ಲಾ ಅನುಭವಿಸುವುದಕ್ಕೆ ಮುಂದೆ ಯಾರೊಬ್ಬರಿಗೊ ಒಪ್ಪಿಸಿಕೊಟ್ಟಾಗ, ಅವನು ಮೂರ್ಖನೋ ಅವಿವೇಕಿಯೋ ಆದರೆ ಅವನೇನು ಮಾಡಿಯಾನು? ಎಂಬ ವಿಚಾರ ಬಂದಾಗ—

ಇಗೊಳ್ಳಿ! ನಾನಿನ್ನು ಹುಡುಗನಿದ್ದಾಗ ನನಗೆ ಎಲ್ಲಾದರಲ್ಲಿಯೂ ವಿಶ್ವಾಸ. ದೇವರ ರಚನೆಯ ಮೇಲೆಯೂ ವಿಶ್ವಾಸ. ನನ್ನ ಹುಟ್ಟು ಊರಾಗಿದ್ದ ರತ್ನಾಗಿರಿಯಲ್ಲಿ ಇದ್ದಾಗ ಅಲ್ಲಿಯ ಶುದ್ಧ ಹವೆ, ಜನರ ಪ್ರಾಮಾಣಿಕತೆ, ಸೌಜನ್ಯ, ಇವುಗಳನ್ನೆಲ್ಲಾ ನೋಡಿ ನನಗೆ ತುಂಬಾ ಸುಖ ವಾಗುತ್ತಿತ್ತು. ಆ ಊರನ್ನು ಬಿಟ್ಟನಂತರ ನಾನಿಲ್ಲಿ ಎಷ್ಟೋ ಧನಸಂಪಾ ದನೆ ಮಾಡಿದೆನು. ನನ್ನ ಆಯುಷ್ಯಾಲದಲ್ಲಿ ಈಗ ಸಾಯಂಕಾಲ ನಾಲ್ಕು ತಾಸಾಯಿತು. ಆದರೆ ಆ ಬಾಲ್ಯದ ಸುಖವನ್ನು ನಾನು ಅಲ್ಲಿಯೇ ತೊರೆದು ಬಂದಂತೆ ಕಾಣುತ್ತದೆ.

**ಜಹಂಗೀರ:**—ಸರಿ ಸರಿ! ಕೆಲವರಿಗೆ ಇಂದ್ರಲೋಕವೇ ಸಿಕ್ಕಿದರೂ ತೃಪ್ತಿ ಇಲ್ಲ.

**ಜಗಜೀವನ:**—ಅಯ್ಯೋ, ಇಂದ್ರಲೋಕವು ಪುರಾಣಿಕರ ವರ್ಣನೆ ಯಂತೆ ಇರುವುದಾದರೆ ಅದು ಎಂದೋ ಸಿಗುವುದೆಂಬ ಆಸೆಯಿಂದ ಇಲ್ಲಿ

ಆಜನ್ಮಕಷ್ಟವನ್ನು ಸಹಿಸಲಿಕ್ಕೆ ತೀರಾ ಬಡವನು ಕೂಡಾ ಸಮ್ಮತಿಸಲಾರನು. ಅದೆಲ್ಲಾ ಪುರಾಣದ ಬದನೆಕಾಯಿ. ಕಷ್ಟಪಡುವವರಿಗೆ ಬೋಧಿಸಿ ಅದರ ತಾಪವನ್ನು ತಗ್ಗಿಸುವುದಕ್ಕೆ ಒಂದು ತಂತ್ರ. ಒಮ್ಮೆ ಪ್ರಸಿದ್ಧ ಪುರಾಣಿಕನೊಬ್ಬನಿಗೆ ನಾನೊಂದು ಪ್ರಶ್ನೆಯನ್ನು ಹಾಕಿದೆ. 'ದೊಡ್ಡ ಶ್ರೀಮಂತನೊಬ್ಬನಿಗೆ ಹೇರಳ ದ್ರವ್ಯವಿದೆ. ಉತ್ತರಾಧಿಕಾರಿಗಳು ಯಾರೂ ಇಲ್ಲ, ಅಂಥವನು ಆ ದ್ರವ್ಯವನ್ನು ಹೇಗೆ ಸದ್ವಿನಿಯೋಗಮಾಡಬಹುದು?' ಎಂದೆ. ಆ ಪುರಾಣಿಕನಿಗೆ ಆ ಶ್ರೀಮಂತನು ನಾನೇ ಎಂದು ಹೊಳೆಯಿತೋ ಏನೊ! 'ಆ ಹಣವನ್ನೆಲ್ಲ ನನಗೆ ಕೊಟ್ಟುಬಿಡಲಿ! ನಾನು ಅವನಿಗಾಗಿ ಸಾರ್ವದಾ ದೇವರೊಡನೆ ಬೇಡಿಕೊಳ್ಳುವೆನು' ಎಂದನು. ಈ ಪುರಾಣಿಕರ, ಹರಿದಾಸರ, ಧರ್ಮಬೋಧಕರ ಪರಿಸ್ಥಿತಿಯೆಲ್ಲ ಹೀಗೆ. ನಾವು ಎಲ್ಲಿಂದಲೋ ಆರಂಭಿಸಿ ಎಲ್ಲಿಗೋ ಹೋದೆವು; ಅದಿರಲಿ. ಈಗ ನಾನು ವೀಲು ಬರೆಯಬೇಕೆಂದು ನಿಮ್ಮ ಅಂಬೋಣವು ನ್ಯಾಯವಾದದ್ದೆ. ಯಾಕಂದರೆ ನನಗೆ ಉತ್ತರಾಧಿಕಾರಿಗಳು ಯಾರೂ ಇಲ್ಲ. ನನ್ನ ಕೈ ಹಿಡಿದ ಹೆಂಡತಿಗೂ ನನಗೂ ನನ್ನ ಮನೆಗೆ ಅವಳು ಬಂದಂದಿನಿಂದ ಅನ್ಯೋನ್ಯವಿದ್ದಿಲ್ಲ. ಅವಳೂ ಮಡಿದಳು. ಹುಟ್ಟಿದ ಎರಡು ಮಕ್ಕಳು ಕೂಡಾ ಅಕಾಲಮರಣ ಹೊಂದಿದುವು. ನನ್ನ ಸ್ವಂತ ಸಂಪಾದನೆಯಾದ ಈ ಸಂಪತ್ತಿನ ವ್ಯವಸ್ಥೆ ಈಗಲೇ ನಾನು ಮಾಡಬೇಕು ಎಂದು ನಿಮ್ಮ ಅಂಬೋಣವು. ಈ ಸ್ಥಿತಿಯು ನನ್ನ ಪ್ರಾರಬ್ಧ. ಈಗ ಇದನ್ನು ಯಾರ ಹೆಸರಿನಲ್ಲಿ ವೀಲು ಬರೆಯಬೇಕು ಎನ್ನುತ್ತೀರಿ?

**ಜಹಂಗೀರ:**— ಈಗ ನೀವು ವೀಲು ಬರೆಯದಿದ್ದರೆ ನಿಮ್ಮ ಸಂಪತ್ತೆಲ್ಲಾ ನಿಮ್ಮ ಅನಂತರ ಸರಕಾರದ ಬೊಕ್ಕಸಕ್ಕೆ ಸೇರುವುದಲ್ಲಾ?

**ಜಗಜೀವನ:**— ಸರಿ. ಸರಕಾರದಷ್ಟು ಯೋಗ್ಯವಾದ ಉತ್ತರಾಧಿಕಾರಿ ಯಾರು? ಸರಕಾರವಾದರೂ ಆ ಹಣದ ಸದ್ವಿನಿಯೋಗ ಮಾಡಬಹುದು. ಆದರೆ ಸ್ವಂತ ಮಕ್ಕಳುಮರಿಗಳು ಹಾಗೆ ಮಾಡಿಯಾವು ಎಂಬ ಭರವಸೆ ಇಲ್ಲ. ಆಗ ನನ್ನ ಸಂಪತ್ತಿನ ಮೇಲೆಯೇ ದೃಷ್ಟಿ ಇಟ್ಟು ನಾನು ಎಂದಿಗೆ ಇಹಲೋಕವನ್ನು ತೊರೆಯುವೆನು ಎಂದು ಹಾತೊರೆಯುತ್ತಿರುವ ಸಾಕುಮಗನಾದರೂ ಅಯಾಚಿತವಾಗಿ ದೊರಕುವ ಹಣವನ್ನು ಸದ್ವಿನಿಯೋಗ ಮಾಡಿಯಾನು ಎಂಬ ಭರವಸೆ ಏನು?

**ಜಹಂಗೀರ:**— ಹಾಗಿದ್ದರೆ ದತ್ತಸ್ವೀಕಾರಕ್ಕೂ ನಿಮಗೆ ಆಕ್ಷೇಪ ಇದೆ ಎಂದಾಯಿತು! ಹಾಗನ್ನುವಾಗ ಇಷ್ಟು ಹಣ ಸಂಪಾದಿಸುವ ಹವ್ಯಾಸ ಕ್ಕಾದರೂ ಏಕೆ ಹೋದಿರಿ?

**ಜಗಜೀವನ:**— ಇಗೊಳ್ಳಿ! ಸೊಲಿಸಿಟರ್ ಸಾಹೇಬರೇ! ನಾನು ಗಳಿಸಿಟ್ಟ ದ್ರವ್ಯದ ಒಂದು ಕಾಸಾದರೂ ದ್ರವ್ಯಲೋಭದಿಂದ ಇತರರ ಮೈಬೆವರನ್ನು ನೆತ್ತರಂತೆ ಹೀರಿ ಮಾಡಿದುದಲ್ಲ. ಏನೂ ನನ್ನ ನಿಪುಣತೆಯಿಂದ, ನನ್ನ ಕಾರ್ಯಶಕ್ತಿಯಿಂದ ಅದು ಬೆಳೆಯಿತು. ಅಷ್ಟೆ. ಎಲ್ಲರಿಗಿಂತಲೂ ಮಜೂರರಿಗೆ ನಾನು ಹೆಚ್ಚಿನ ಸಹಾನುಭೂತಿ- ಭೂತದಯೆಗಳನ್ನು ತೋರಿಸು ತ್ತೇನೆಂದು ನನ್ನ ಎದೆಯ ಮೇಲೆ ಕೈ ಇಟ್ಟು ಧೈರ್ಯವಾಗಿ ಹೇಳಬಲ್ಲೆನು. ನನ್ನ ಇತರ ಸಿಬಂದಿಗೂ ಅವರು ತಿಂದು ತೇಗುವಷ್ಟು ಸಂಬಳವಿದೆ. ಇಷ್ಟೊಂದಿದ್ದರೂ ಅವರಲ್ಲಿ ಎಷ್ಟು ಮಂದಿ ನಿಜವಾಗಿಯೂ ನನ್ನ ಮೇಲೆ ಶುದ್ಧಾಂತಃಕರಣದಿಂದ ಪ್ರೀತಿಯುಳ್ಳವರು ಎಂದು ಹೇಳಲು ಬರುವುದಿಲ್ಲ. ನನ್ನ ಎದುರಿಗೆ ಅವರು ಬೇಕಾದ ಹಾಗೆ ನಗುತ್ತಾರೆ, ಓಡಾಡುತ್ತಾರೆ. ಆದರೆ ಥಕ್ಕನೆ ನಾನು ಬಿದ್ದುಹೋದರೆ ಇವರಲ್ಲಿ ನನಗಾಗಿ ಅಳುವವರು ಎಷ್ಟು ಮಂದಿ? ಅಷ್ಟೇಕೆ? ನಾನು ಅನೇಕ ಸಲ ಅನಾಮಿಕವಾಗಿ ದಾನಧರ್ಮ ಗಳನ್ನು ಮಾಡುತಿದ್ದೇನೆ. ಎಷ್ಟೊ ಸಂಸ್ಥೆಗಳಿಗೆ ಅನಾಮಿಕವಾಗಿ ದ್ರವ್ಯ ಸಹಾಯ ಮಾಡುತಿದ್ದೇನೆ. ಆದರೆ ಜನರು ಅದನ್ನು ಗೊತ್ತುಹಚ್ಚಿದಾಗ ಏನನ್ನುತ್ತಾರೆ? ಗುಪ್ತದಾನ ಮಾಡಿ ಆ ಮೇಲೆ ಇತರರು ನನ್ನನ್ನು ಕೊಂಡಾಡ ಬೇಕೆಂಬ ಭ್ರಮೆ ನನ್ನಲ್ಲಿ ತುಂಬಿದೆ ಎನ್ನುತ್ತಾರೆ. ಹೀಗಾಗಿ ನನ್ನ ದಾನಗಳ ಕಡೆಗೂ ಒಂದು ಬಗೆಯ ಗುಪ್ತ ತಿರಸ್ಕಾರವಿದೆ. ಇದು ಬರೆ ಮತ್ಸರದ ಪರಿಣಾಮವಲ್ಲವೇ? ಇದಕ್ಕೆ ಏನೆನ್ನುವಿರಿ?

**ಜಹಂಗೀರ:**—ಆದ್ದರಿಂದ ನಿಮ್ಮ ಸಂಪತ್ತು 'ನಂದಿರಾಯನ ಬದುಕು' ಆಗಬೇಕೆನ್ನುತ್ತೀರಾ? ಹಾಗಾದರೆ ಎಲ್ಲವನ್ನು ಸರಕಾರಕ್ಕೆ ದಾನವಾಗಿ ಮಾಡಿ ದಂಟೆ ಹಿಡಿದು ಕಾಶಿ- ಬದರಿನಾಥಗಳ ಕಡೆಗೆ ವೈರಾಗಿಯಾಗಿ ಯಾತ್ರೆ ಮಾಡುವುದು ಒಳ್ಳೇದಲ್ಲವೆ?

**ಜಗಜೀವನ:**— ಈ ರೀತಿಯಲ್ಲಿ 365 ದಿನಗಳೂ ಯಾತ್ರೆ ಮಾಡುತಲಿರುವ ವೈಗಳ್ಳರನ್ನು ನಾವು ಇಲ್ಲಿ ಮುಂಬಾದೇವಿ ದೇವಸ್ಥಾನದ ಸುತ್ತಲೂ ನೋಡುತ್ತಲಿಲ್ಲವೇ? ಈ ಯಾತ್ರೆಯಿಂದ ಅವರಲ್ಲಿ ಯಾವ ಸುಪರಿಣಾಮವಾಗಿದೆ? ಏನು ಹೊಲಸು ಮಾತುಗಳು, ಏನು ಜಗಳ, ಏನು ಬೈಗಳು ಅವರ ಬಾಯಿಂದ ಹೊರಡುತ್ತವೆ? ದೇವರ ಸಾನ್ನಿಧ್ಯವನ್ನು ಹೊಂದಬೇಕಾದರೆ ಯಾತ್ರೆಯೇ ಬೇಕೇ? ದ್ರವ್ಯದ ಬಲವಿಲ್ಲದಿದ್ದರೂ— ಏನು ನನ್ನ ಒಣ ಹರಟೆಯಿಂದ ನಿಮಗೆ ಬೇಸರವಾಯಿತೇ?

**ಜಹಂಗೀರ:**—ಇಲ್ಲ, ಇಲ್ಲ, ನಿಮ್ಮ ಮಾತುಗಳ ವಿಚಾರಸರಣಿ ವಿಚಿತ್ರವಾಗಿದೆ. ಕೊನೆಗೆ ಎಲ್ಲಿಗೆ ನನ್ನ ಮನಸ್ಸನ್ನು ವೈಯ್ಯುಕ್ತೀರಿ ಎಂದು ಕಾಯುತ್ತೇನೆ.

**ಜಗಜೀವನ:**—ದ್ರವ್ಯದ ಬಲವಿಲ್ಲದಿದ್ದರೂ ಮನಸ್ಸಿಗೆ ತೃಪ್ತಿ, ಶಾಂತಿ ಯಿದ್ದವರು ಎಷ್ಟು ಮಂದಿ ಇಲ್ಲ! ನಾನು ಇಷ್ಟು ಸಂಪತ್ತಿನ ಒಡೆಯ ನಾಗಿದ್ದರೂ, ಇಡೀ ಮುಂಬಯಿಯ ಊರನ್ನೆ ಕೊಂಡುಕೊಳ್ಳುವಷ್ಟು ಸಂಪತ್ತು ನನ್ನ ಬೊಕ್ಕಸದಲ್ಲಿ ಇದ್ದರೂ, ನನ್ನ ಮನಸ್ಸಿಗೆ ಮಾತ್ರ ಶಾಂತಿ ಸುಖವು ಏಕೆ ಇಲ್ಲ? ನಾನು ತೀರಾ ಬಡವನಾಗಿದ್ದರೆ ಒಂದು ವೇಳೆ ಅಂಥ ಸುಖವು ನನ್ನ ಪಾಲಿಗೆ ಬರುತಿತ್ತೊ ಏನೊ?—

ಹೀಗೆ ತುಸು ಹೊತ್ತು ಮಾತು ನಿಲ್ಲಿಸಿ ಇಬ್ಬರೂ ತಟಸ್ಥರಾಗಿ ಕುಳಿತರು. ಅನಂತರ ಜಗಜೀವನನು "ಹೇಗೂ ಇರಲಿ, ಸೊಲಿಸಿಟರ ಸಾಹೇಬರೇ! ನಾನು ಹಿಂದೆ ಅಂದಂತೆ ದತ್ತಸ್ವೀಕಾರ ಮಾಡಿ ಯಾರದೊ ಮಗುವಿನ ಪ್ರೇಮವಿಶ್ವಾಸಗಳನ್ನು ಬೆಲೆಕೊಟ್ಟು ಕೊಂಡುಕೊಳ್ಳಲು ನನಗೆ ಇಷ್ಟವಿಲ್ಲ. ಮಕ್ಕಳನ್ನು ಮಾರುವವರು ಎಷ್ಟೊ ಮಂದಿ ಇದ್ದಾರು. ನನಗೆ ಬೇಕಾದುದು ನಿಷ್ಕಾಮ ಪ್ರೇಮ.

**ಜಹಂಗೀರ:**—ಹಾಗಿದ್ದರೆ ನೀವು ಇನ್ನೊಮ್ಮೆ ವಿವಾಹವಾಗಬಾರ ದೇಕೆ? ನೀವು ಅಷ್ಟೊಂದು ವೃದ್ಧರಲ್ಲ. ನಿಮ್ಮಲ್ಲಿ ಮುಂದೆ ಮಕ್ಕಳು ಹುಟ್ಟಬಾರದೆಂದಿಲ್ಲ.

**ಜಗಜೀವನ:**—ಹಾ! ಹಾ! ಹಾ! ಈ ಹಣ್ಣುಮುದುಕನಿಗೆ ಇನ್ನೂ ವಿವಾಹವೇ? ನನ್ನ ಮೊಮ್ಮಗಳ ಪ್ರಾಯದವಳೊಬ್ಬಳನ್ನು ಮಾರಿಗೆ ಬಲಿ ಕೊಡುವಂತೆ—

**ಜಹಂಗೀರ:**—ಹಾಗಿದ್ದರೆ ಪ್ರೌಢ ಅವಿವಾಹಿತೆಯೊಬ್ಬಳನ್ನು—

**ಜಗಜೀವನ:**—ಸರಿ, ನನ್ನ ವಿಷಯಾಂಧತೆಯಿಂದ ಇಂಥದ್ದೊಂದು ವಿವಾಹಮಾಡಿಕೊಂಡೆನೆಂದು ನನ್ನ ಜಾತಿವರ್ಗದ ತಾತ್ಸಾರಕ್ಕೆ ಈಡಾಗ ಬೇಕೇ?

**ಜಹಂಗೀರ:**—ಹಾಗಿದ್ದರೆ ನೀವು ಮನೆಯಲ್ಲಿ ಈಗ ಸಾಕುತ್ತಿರುವ ವಿಮಲೆಯನ್ನು ಆ ಉದ್ದೇಶದಿಂದಲೇ—

**ಜಗಜೀವನ:**—ತಂದಿರಿಸಿದೆನೆಂದು ಜನರು ಅನ್ನುವರು ಎಂದೊ! ಸರಿ. 'ಅಂಡೆ ಬಾಯಿ ಕಟ್ಟಬಹುದು, ದೊಂಡೆ ಬಾಯಿ ಕಟ್ಟಕೂಡದು.' ಆದರೆ ವಿಮಲೆಯನ್ನು ನಾನು ಸಾಕಿದ ಕಾರಣವೇ ಬೇರೆ. ಅದು ನನ್ನಿಂದಲೇ ಹೇಳಬರುವುದಿಲ್ಲ. ನನ್ನ ವ್ಯಾಪಾರನಿಮಿತ್ತವಾಗಿ ಒಳಸೀಮೆಗೆ ಒಮ್ಮೆ ಹೋಗಿದ್ದೆ. ಆಗ ಒಂದೂರಿನಲ್ಲಿ ರಸ್ತೆಯಲ್ಲಿ ನಾನು ಕಾರಿನಲ್ಲಿ ಹೋಗು ತ್ತಿರುವಾಗ ಒಂದು ಚಿಕ್ಕ ಮಗು ಕೈ ಎತ್ತಿ ನನ್ನ ಕಡೆಗೆ ನೋಡಿ 'ನನ್ನನ್ನೂ ಕಾರಿನಲ್ಲಿ ಎತ್ತಿಕೊ' ಎನ್ನುವಂತೆ ಕೈ ಚಾಚಿತು. ಮಗು ಸುಲಕ್ಷಣ ವಾಗಿತ್ತು. ನನ್ನ ಮನಸ್ಸಿನಲ್ಲಿ ಕನಿಕರವುಂಟಾಯಿತು. ಅವಳ ತಾಯಿ ದೂರದಿಂದ ಅವಳನ್ನು ಗದರಿಸುತಿದ್ದಳು. ಅವಳನ್ನು ಸಮದಾಯಿಸಿ ನಾನು ಮಗುವನ್ನು ಎತ್ತಿಕೊಂಡು ನನ್ನ ಬಳಿ ಕುಳ್ಳಿರಿಸಿ ಪೇಟೆಯ ಒಂದು ಸುತ್ತು ಸುತ್ತಿದೆ. ಆ ಮೇಲೆ ಹಿಂದೆ ಬಂದು 'ನಿಮಗೆಲ್ಲಿ?' ಎಂದು ತಾಯಿ ಯೊಡನೆ ಕೇಳಿದೆ. ಅವಳೊಬ್ಬ ಬಡ ವಿಧವೆಯೆಂದು ಗೊತ್ತಾಯಿತು. 'ಈ ಮಗುವನ್ನು ಕರಕೊಂಡು ನಮ್ಮ ಮನೆಗೆ ಬಂದು ವಾಸಮಾಡುವಿರಾ? ಈ ಮಗುವಿನ ಮೇಲೆ ನನ್ನ ಮನಸ್ಸು ಅಂಟಿಕೊಂಡಿದೆ. ನನಗೆ ಮನೆಯಲ್ಲಿ ಮಕ್ಕಳಿಲ್ಲ. ನೀವು ಬರುವುದಾದರೆ ನಿಮ್ಮಿಬ್ಬರನ್ನೂ ಸಾಕುವೆನು' ಎಂದೆನು. ಅದನ್ನು ಕೇಳುತಿದ್ದ ನಮ್ಮ ದಲಾಲನು 'ತಾಯಿ! ನೀವು ಸೇಟರ ಮನೆಯಲ್ಲಿ ಸುಖವಾಗಿರಬಹುದು. ಅವರು ಮುಂಬಯಿಯ ದೊಡ್ಡ ಶ್ರೀಮಂತರು.

ನಿಮ್ಮ ಮಗಳನ್ನು ವಿದ್ಯೆ ಕಲಿಸಿ ಯೋಗ್ಯ ವರನಿಗೆ ಮದುವೆ ಮಾಡಿಕೊಡು ವರು. ನಿಮ್ಮ ಬಡತನವು ನೀಗುವುದು' ಎಂದನು. ಆ ಬಡ ತಾಯಿಯು ಒಪ್ಪಿದಳು. ಹಾಗೆಯೇ ಅವರನ್ನು ಮರ್ಯಾದೆ ಕಾಪಾಡಿ ನನ್ನ ಮನೆ ಯೊಳಗೆ ಇರಿಸಿದೆನು. ಆ ಮಗಳು ಪೂನೆಯಲ್ಲಿ ಸ್ಕೂಲ್ ಫೈನಲ್ ಪರೀಕ್ಷೆ ಕಲಿತು ಈಗ ರಜಾದಲ್ಲಿ ಇಲ್ಲಿ ಬಂದಿದ್ದಾಳೆ. ಅಂದರೆ ಒಂದು ಬಗೆಯಲ್ಲಿ ನನ್ನ ಮಗಳಂತಿದ್ದಾಳೆ.

**ಜಹಂಗೀರ:**—ಹಾಗಿದ್ದರೆ ನಿಮ್ಮ ಸಂಪತ್ತನ್ನೆಲ್ಲ ಅವಳಿಗೆ ದಾನ ಮಾಡಬಹುದಲ್ಲವೇ?

**ಜಗಜೀವನ:**—ಸರಿ ಸರಿ. ಆದರೆ ಅದು ಹೆಣ್ಣುಮಗು. ಅವ ಳಿಗೆ ಕೆಲವು ಕಾಲದೊಳಗೆ ವಿವಾಹವಾಗಲೇ ಬೇಕು. ಅವಳಿಗೆ ಸಿಗುವ ಗಂಡನು ನಾಳೆ ದುಂದುಗಾರನಾಗಿ ನನ್ನ ಹೆಸರಿಗೆ ಕಲಂಕವನ್ನು ತಂದರೆ—

**ಜಹಂಗೀರ:**—ಹಾಗಾದರೆ ನೀವೇ ಅವಳನ್ನು ಮದುವೆಯಾಗಿರಿ ಎಂದರೆ ನೀವು ಒಪ್ಪುತ್ತಿಲ್ಲವಲ್ಲ!

**ಜಗಜೀವನ:**—ನನ್ನ ಮೂರ್ಖತನಕ್ಕೆ ಸಿಟ್ಟಾಗಿ ನನಗೆ ಹಾಗೆನ್ನು ತ್ತೀರಾ?

**ಜಹಂಗೀರ:**—ಅಲ್ಲ, ವಿಮಲೆಯ ತಾಯಿಯು ಆ ಆಸೆಯನ್ನು ತೊಟ್ಟಿರುವಳಂತೆ! ನಾನು ಹಾಗೆ ತಿಳಿದೆನು. ಅವಳಿಗೂ ನಿರಾಶೆಯಾದೀತಲ್ಲ!

**ಜಗಜೀವನ:**—ಇಗೊಳ್ಳಿ; ನನಗೆ ವಿಮಲೆಯ ತಾಯಿಯ ಪೂರ್ವ ಕಥೆ ಚೆನ್ನಾಗಿ ತಿಳಿದಿದೆ. ಅವಳ ಗಂಡನೂ ಅವಳೂ ಒಳ್ಳೆ ಕುಟುಂಬದವ ರಂತೆ. ಗಂಡನು ದುಂದುವೆಚ್ಚಮಾಡಿ ತನ್ನ ಸಕಲ ಆಸ್ತಿಯನ್ನು ಕಳೆದು ಕೊಂಡು ಕ್ಷಯರೋಗಕ್ಕೆ ತುತ್ತಾದನಂತೆ. ಹೆಂಡತಿಯು ತನ್ನ ದಾಯಾದ್ಯರ ಮನೆಯಲ್ಲಿ ಕಷ್ಟದಿಂದ ಜೀವನ ಸಾಗಿಸುತ್ತಿದ್ದಳು. ಅಂಥವಳಿಗೆ ಈ ಹೇರಳ ಧನದ ಅಧಿಕಾರ ಸಿಕ್ಕಿತೆಂದರೆ 'ಭಿಕ್ಷುಕನ ತಲೆಗಿಂಬಿನ ಅಡಿಯು ಹೋಳಿಗೆ' ಎಂಬಂತಾಗಲಿಕ್ಕಿಲ್ಲವೇ?

**ಜಹಂಗೀರ:**—ನಿನ್ನೊಡನೆ ಚರ್ಚಿಸಲು ನಾನು ಸಮರ್ಥನಲ್ಲ. ಅಂತೂ ಇನ್ನೊಮ್ಮೆ ವಿಚಾರಿಸಿರಿ, ಕೆಲವು ದಿನಗಳಲ್ಲಿ ಪುನಃ ಬಂದು ಕಾಣುವೆನು.

**ಜಗಜೀವನ:**—ಅಷ್ಟರೊಳಗೆ ನಾನು ಸತ್ತರೆ ನನ್ನ ಸಂಪತ್ತು ಸರಕಾರಕ್ಕೆ ಸೇರಲಿ. ಇಲ್ಲವಾದರೆ ನನ್ನ ಅಭೀಷ್ಟವೇನೆಂದು ನಿಮಗೆ ತಿಳಿಸುವೆನು.

ಹೀಗೆಂದುಕೊಂಡು ಇಬ್ಬರೂ ಎದ್ದರು. ರಾತ್ರಿ 10 ಗಂಟೆಯಾಯಿತೆಂದು ಹೇಳಿ ಸೊಲಿಸಿಟರನು ತನ್ನ ಸ್ವಂತ ಮನೆಗೆ ಹೋದನು. ಸೇಟಜಿಯೂ ಊಟಕ್ಕೆ ತೆರಳಿದನು.

---

## ೩ನೆ ಅಧ್ಯಾಯ

## 'ಟೀ ಪಾರ್ಟಿ'

ಹಿಂದಿನ ಸಂಭಾಷಣೆಯಾಗಿ ಮೂರು ನಾಲ್ಕು ದಿನಗಳು ಕಳೆದಿದ್ದುವು. ಇಂದು ಸೇಟಜೀಯ ಬಂಗಲೆಯಲ್ಲಿ ದೊಡ್ಡ ಟೀಪಾರ್ಟಿ, ವಿಮಲೆಯು ಸ್ಕೂಲ್ ಫೈನಲ್ ಪರೀಕ್ಷೆ ಪಾಸುಮಾಡಿದ ಸಂತೋಷಕ್ಕಾಗಿ. ಈ ಸೇಟಜಿಯ ಬಂಗಲೆಯಲ್ಲಿ ಯಾವುದೊಂದು ಉತ್ಸವದಿನವೆಂದರೆ ಮಹಾವೈಭವದಿಂದ ಜರಗಬೇಕು. ಅನೇಕ ಸ್ತ್ರೀಪುರುಷರು ತಂಡತಂಡವಾಗಿ ಮೋಟರ ಬಂಡಿಗಳಲ್ಲಿ ಬಂದಿದ್ದರು. ಬಂಗಲೆಯ ಹೂದೋಟದಲ್ಲೆಲ್ಲ ವಿದ್ಯುದ್ದೀಪಗಳ ಸಾಲು ಮಿರುಗುತಿತ್ತು. ಅಲ್ಲಲ್ಲಿ ಒಂದೊಂದು ಚಿಕ್ಕ ಮೇಜು. ಮೇಜಿನ ಸುತ್ತಲೂ ನಾಲ್ಕು ಕುರ್ಚಿಗಳು. ಮೇಜಿನ ಮೇಲೆ ಶುಭ್ರವಾದ ಬಿಳಿ ಬಟ್ಟೆ ಹಾಸಿ ಬಗೆಬಗೆಯ ಹಣ್ಣುಹಂಪಲುಗಳನ್ನು ಬೆಳ್ಳಿಯ ಪ್ಲೇಟುಗಳಲ್ಲಿ ಇರಿಸಿದ್ದರು. ಮತ್ತು ಅವುಗಳ ಸುತ್ತಲೂ ಒಬ್ಬೊಬ್ಬರಿಗೆ ಒಂದೊಂದರಂತೆ ಚಾಕಪ್ಸ್ ಮತ್ತು ಸೋಸರ್; ಒಂದು ಚಾದಾನಿಯಲ್ಲಿ ಬಿಸಿ ಚಾ, ಸಮೀಪದಲ್ಲಿ ಸಕ್ಕರೆಯ ಪಾತ್ರೆ. ಎಲ್ಲರಿಗೂ ಮೊದಲಲ್ಲಿ ಚಾಸೇವನೆಯಾಯಿತು. ಅನಂತರ ಒಂದು ಹೂದೋಟದ ನಡುವೆ ಇರುವ ಒಂದು ಮಂಟಪದಲ್ಲಿ ಹಲವು ಗಾಯಕರು ವಾದಕರು ಬಂದು ಕುಳಿತರು. ಆದರ ಸುತ್ತಲೂ ಇರಿಸಿದ ಕುರ್ಚಿಗಳಲ್ಲಿ ಆಮಂತ್ರಿತರೆಲ್ಲ ಬಂದು ಸೇರಿ

ದರು. ಒಡನೆ ಗಾಯನಕ್ಕೆ ಆರಂಭ. ಕೆಲವರು ಮಾತ್ರ ಅಲ್ಲಲ್ಲಿ ಸಣ್ಣ ಸಣ್ಣ ಗುಂಪುಗಳಾಗಿ ದೂರದಲ್ಲಿ ನಿಂತು ಚುಟ್ಟಾ ಸಿಗರೇಟುಗಳನ್ನು ಸೇದುತ್ತಾ ಊರಿನ ಸಮಾಚಾರಗಳನ್ನು ಚರ್ಚಿಸುತ್ತಲಿದ್ದರು. ವಿಮಲೆಯ ತಾಯಿಯು ಬಂದವರಿಗೆ ಉಪಚಾರದ ಮಾತುಗಳನ್ನು ಹೇಳುತ್ತಾ ಅವರ ಅಭಿನಂದನವನ್ನು ಪಡೆಯುತ್ತ ಪ್ರತಿಯೊಂದು ಗುಂಪಿನಲ್ಲಿ ಒಂದೊಂದು ನಿಮಿಷ ತಡೆದು ಬರುವಾಗ ಒಂದು ಮೂಲೆಯಲ್ಲಿ ನಿಂತು ಈ ಸಮಾರಂಭವನ್ನು ನೋಡುತ್ತಲಿದ್ದ ಸೇಟಜಿಯನ್ನು ಕಂಡು:—

'ಸೇಟಜೀಯವರೇ! ನೀವು ಬಹಳ ದಣಿದವರಂತೆ ಕಾಣುತ್ತೀರಿ! ಒಂದಿಷ್ಟು ಚಾ ತರಿಸಲೇ? ಒಂದು ಕಡೆ ಕುಳಿತು ತುಸು ವಿಶ್ರಮಿಸಬಾರದೇ? ನಿಮ್ಮ ಉಪಕಾರದಿಂದಲ್ಲವೆ ನಾವು ಒಂದು ಆಳಾದದ್ದು!'

**ಸೇಟ:**—ಅಂಥ ಆಯಾಸವೇನೂ ಇಲ್ಲ. ನನ್ನ ಯೋಚನೆ ಮಾಡಬೇಡಿ. ಅತಿಥಿಗಳ ಉಪಚಾರ ಸಾಂಗವಾಗಿ ನೆರವೇರಲಿ!

**ವಿ. ತಾಯಿ:**—ವಿಮಲೆಯು ಈಗ ಚೆನ್ನಾಗಿ ಬೆಳೆದಿರುವಳಲ್ಲವೇ? ತೊಡೆಯ ಮೇಲೆ ಆನೆಮಾಡಿಕೊಂಡು ಆಡಿಸಿದ್ದು ಮೊನ್ನೆ ತಾನೆ ಎಂಬಂತೆ ಕಾಣುತ್ತದೆ.

**ಸೇಟ:**—ಸರಿ ಸರಿ. ಚೆನ್ನಾಗಿ ಬೆಳೆದಿದ್ದಾಳೆ. ಅವಳ ಅಲಂಕಾರವೂ ಅವಳ ಅಂಗೋಪಾಂಗಗಳಿಗೆ ಸರಿಯಾಗಿ ಒಪ್ಪುತ್ತದೆ. ಈಗ ಇನ್ನೂ ಅವಳ ವಿವಾಹದ ಯೋಚನೆ ನೀವು ಮಾಡಬೇಕು.

ಆಗ ವಿಮಲೆಯೂ ಆ ಕಡೆಗೆ ಬಂದು ಸೇಟಜಿಯೊಡನೆ 'ನೀವು ಚಾ ಕುಡಿದಿರಾ? ಒಂದಿಷ್ಟನ್ನು ತರಿಸಲೇ?' ಎಂದು ಹತ್ತಿರ ಬಂದು ವೈಯ್ಯಾರದ ಬೆಡಗಿನಿಂದ ನುಡಿದಳು.

**ಸೇಟಜೀ:**—ನನಗೆ ಈಗೇನೂ ಬೇಡ. ನಿನ್ನ ತಾಯಿಯೂ ನಾನೂ ನಿನ್ನ ವಿಷಯವಾಗಿಯೇ ಮಾತನಾಡುತಿದ್ದೆವು. ನಿನ್ನನ್ನು ಇಲ್ಲಿಗೆ ಕರತಂದು ಈಗ ಸುಮಾರು 12 ವರ್ಷಗಳು ದಾಟಿಹೋದವು. ಆದರೂ ಅದು ನಿನ್ನೆಯೊ ಎಂಬಂತೆ ಕಾಣುತ್ತದೆ. ನಾನು ಅಂದು ಮೋಟರಿನಲ್ಲಿ ಹೋಗುತಿದ್ದೆ. ಆಗ ನೀನು ಎರಡೂ ಕೈಗಳನ್ನು ಎತ್ತಿ ಮೋಟರಿನಲ್ಲಿ—

**ವಿಮಲೆ:—** ಹೌದು ಆ ದಿನವನ್ನು ಈಗಲೂ ನಾನು ಮರೆಯಲಿಲ್ಲ. ನಿಮ್ಮ ಮೋಟರಿನಲ್ಲಿ ಊರಿನ ಒಂದು ಸುತ್ತು ಸುತ್ತಿ ಆ ಮೇಲೆ ನನ್ನನ್ನೂ ನನ್ನ ತಾಯಿಯನ್ನೂ ಇಲ್ಲಿ ಕರೆದುಕೊಂಡು ಬಂದು ನನ್ನನ್ನು ಸಾಕಿದಿರಿ. ನನಗೆ ವಿದ್ಯೆ ಕೊಡಿಸಿದಿರಿ. ನನ್ನ ಬಾಳುವೆಯೇ ಹೊಸ ರೀತಿಯಾಯಿತು.

ಇಷ್ಟು ಮಾತುಗಳು ನಡೆಯುವಷ್ಟರಲ್ಲಿ ತಾಯಿಯು ಅಲ್ಲಿಂದ ಯಾರನ್ನೊ ಮಾತನಾಡಿಸಲು ಹೋದಂತೆ ಹೋಗಿಬಿಟ್ಟಳು. ಆಗ ಅವಳ ಪರಿಚಯಸ್ಥಳಾದ ಒಬ್ಬ ಸೇಟಜೀಯ ಹೆಂಡತಿಯು ಅವಳ ಕೈ ಹಿಡಿದು ಆಚೆಗೆ ಕರೆದುಕೊಂಡು ಹೋಗಿ—

**ಪ. ಹೆಂಡತಿ:—** ಏನಮ್ಮಾ! ನಿಮ್ಮ ಮಗಳ ವಿವಾಹದ ಯೋಚನೆ ಇನ್ನೂ ಮಾಡಿಲ್ಲವೇ? ಅವಳು ದೊಡ್ಡ ಹೆಂಗಸಿನಂತೆ ಕಾಣುತ್ತಾಳೆ. ಜಾತಿಯವರು ಏನಂದಾರು?

**ವಿ. ತಾಯಿ:—** ಅಯ್ಯೊ ನಾನೇನು ಮಾಡಲಿ! ಬಡವರಾದ ನಮ್ಮನ್ನು ಇಲ್ಲಿರಿಸಿ ಸಾಕಿದ್ದೆ ಸೇಟಜಿಯವರ ಮಹದುಪಕಾರ. ಈಗ ಮಗಳ ಮದುವೆ ಬೇಗನೆ ಮಾಡಿಸಿರೆಂದು ಅವರಿಗೆ ಪೀಡಿಸಲೆ? ಅವರು ಲೋಕಾಚಾರವನ್ನು ಬಲ್ಲವರು. ಅವರಿಗೆ ನಾನು ಎಚ್ಚರಕೊಡಬೇಕೇ?

**ಪ. ಹೆಂಡತಿ:—** ಹಾಗಲ್ಲ ನೋಡಮ್ಮಾ! ಕಲಿಯೋದು ಕಲಿಯೋದು ಎಂದು ಎಷ್ಟು ವರ್ಷಗಳ ವರೆಗೆ ದೂರ ಇರಿಸಿಬಿಡುವಿರಿ? ಹೆಣ್ಣುಮಕ್ಕಳ ಮೇಲೆ ಹಾಗೆ ವಿಚಾರ ಇಲ್ಲದಿದ್ದರೆ ಯುರೋಪಿಯನ ಜನರ ಇಲ್ಲಸಲ್ಲದ ಚಾಳಿಗಳನ್ನು ಕಲಿಯುತ್ತಾರೆ. ಅಷ್ಟಕ್ಕೇ ಹೇಳಿದೆ.

**ವಿ. ತಾಯಿ:—** ಅದು ಅಲ್ಲವೆನ್ನಲಿಲ್ಲ. ಆದರೆ ಅವಳನ್ನು ಸಾಕುವ ಭಾರ ವಹಿಸಿದವರಿಗೆ ಅಷ್ಟು ಗೊತ್ತಾಗುವುದಿಲ್ಲವೇ? ನನ್ನಂಥವಳು ಹೇಳಬೇಕೆ?

**ಪ. ಹೆಂಡತಿ:—** ಹಾಗಲ್ಲ, ಸೇಟಜೀಯವರೇ ಅವಳನ್ನು ವಿವಾಹ ಮಾಡಿಕೊಳ್ಳುತ್ತಾರೆ ಎಂಬ ವರ್ತಮಾನ ನಿಜವೇ? ಈ ಸುದ್ದಿ ಊರಲ್ಲೆಲ್ಲ ಆಡಿಕೊಳ್ಳುತ್ತಾರೆ.

**ವಿ. ತಾಯಿ:**—ಅಯ್ಯೊ ಸೇಟಜೀಯವರು ನಮ್ಮ ವಿಮಲೆಗೆ ಸಾಕುತಂದೆಯಂತೆ ಇದ್ದಾರೆ. ಅವರನ್ನು—

**ಪ. ಹೆಂಡತಿ:**–'ಸಾಕುತಂದೆ-ಕೋಟ್ಯಾಧೀಶ-ಹುಂ, ಹುಂ! ಈಗ ತಂದೆ—ನಾಳೆ ಗಂಡ. ಇದು ಚಲೊ ಮಾತು. ಇಂಥವರೆ ಎಷ್ಟು ಮಂದಿ ಮದುವೆಯಾಗಿ ಸುಖದಿಂದ ಬಾಳಿಲ್ಲ!' ಹೀಗೆ ಹೇಳುತ್ತಾ ಅವಳು ಮುಂದೆ ಹೋದಳು. ಇಂಥವರ ನಾಲಗೆಯ ಹರಿತವನ್ನು ತಿಳಿಯದವರು ಬಹಳ ಕಡಿಮೆ. ಸಮಾಜದಲ್ಲಿ ಇಂಥ ಸ್ತ್ರೀಯರ ನಾಲಿಗೆಯೇ ಮನೆಜಗಳಗಳಿಗೆ ಕಾರಣ. ಇವರು ಗಾಯ ಇಲ್ಲದಲ್ಲಿ ನೊಣವಿರಿಸಿ, ವ್ರಣವೆಬ್ಬಿಸುವರು. ಇಂಥ ಸಮಾಜಕೀಟಗಳ ಸಂಖ್ಯೆ ಹೆಚ್ಚುತಿದ್ದುದರಿಂದ ಅನೇಕಾನೇಕ ಮನೆಗಳು ಶಾಂತಿ ತೊಲಗಿ ಸ್ಮಶಾನಗಳಾಗಿವೆ. ಕಾಡಿನ ತೋಳಗಳಿಗಿಂತಲೂ ಸಮಾಜದ ಈ ತೋಳಗಳ ಕಡಿತವು ಬಹಳ ಭಯಂಕರವಾಗಿದೆ. ಇವಳನ್ನು ನೋಡುತ್ತ ವಿಮಲೆಯ ತಾಯಿಯು ಬೆರಗಾಗಿ ಅಲ್ಲಿಯೇ ನಿಂತುಬಿಟ್ಟಳು.

ಅಷ್ಟರಲ್ಲಿ ಜಗಜೀವನ ಸೇಟನೂ ವಿಮಲೆಯೂ ಹಾಗೆಯೇ ಮುಂದೆ ನಡಿಯುತ್ತ ಒಂದು ಬಳೆಮನೆಯ ಕಡೆಗೆ ಹೋದರು.

**ವಿಮಲೆ:**—ನೀವು ನನಗೆ ಈ ವರೆಗೆ ಮಾಡಿದ ಉಪಕಾರವನ್ನು ಎಷ್ಟು ವರ್ಣಿಸಿದರೂ ಸಾಲದು. ನನ್ನ ಮೈತೊಗಲನ್ನು ನಿಮ್ಮ ಹಾವಿಗೆಗಳಾಗಿ ಮಾಡಿದರೂ ಆ ಋಣ ತೀರದು.

**ಸೇಟಜೀ:**—ಅಯ್ಯೋ! ಅಂಥ ಮಾತುಗಳು ಬೇಡ. ಅವುಗಳಿಂದ ನನಗೆ ವೇದನೆಯಾಗುತ್ತಿದೆ.

**ವಿಮಲೆ:**—'ನೀವು ಏನೇ ಹೇಳಿ. ನೀವು ಈ ದಿನ ಬೆಳಗ್ಗೆ ನನಗೆ ಉಡುಗೊರೆಯಾಗಿ ಕಳುಹಿಸಿದ ಮುತ್ತಿನ ಸರ-ಅದರ ಬೆಲೆ ಎಷ್ಟೊ-ಬಡತನದ ಕೂಪದಿಂದ ನಮ್ಮನ್ನು ಎತ್ತಿ ಈ ಸುಖದ ನೆಲೆಗೆ ತಂದಿರಿಸಿದ ನಿಮ್ಮ ಉದಾರಗುಣವನ್ನು ಕೊಂಡಾಡದಿದ್ದರೆ ನನ್ನ ನಾಲಗೆಗೆ ಹುಳಬಿದ್ದೀತು' ಎಂದು ಗಳಗಳನೆ ಕಣ್ಣೀರು ಸುರಿಸಿದಳು.

**ಸೇಟಜೀ:**—ನನ್ನ ಉಡುಗೊರೆಯು ನಿನ್ನ ಮನಸ್ಸಿಗೆ ತುಷ್ಟಿಯನ್ನು ಕೊಟ್ಟಿತಲ್ಲ! ಅದೇ ಸಾಕು. ಎಳೆ ಹೆಣ್ಮಕ್ಕಳಿಗೂ ಮುತ್ತುಗಳಿಗೂ ನಿಕಟ ಸಂಬಂಧವಿದೆ. ಎರಡೂ ಎಷ್ಟು ಕಲಂಕರಹಿತವೊ ಅಷ್ಟು ಹೆಚ್ಚು ಬೆಲೆ ಬಾಳುತ್ತವೆ.

**ವಿಮಲೆ:**—ಎಲ್ಲಾ ಹೆಣ್ಮಕ್ಕಳು ಹೀಗೆ ಇದ್ದಾವೆನ್ನುವಿರಾ?

**ಸೇಟಜೀ:**—'ಇಲ್ಲ. ಆದರೆ ಅಧಿಕ ಮಂದಿ ಹೀಗಿದ್ದಾರೆ. ಅವರ ನಿಷ್ಕಳಂಕ ಮನಸ್ಸೆ ಅವರಿಗೂ ಅವರ ಕೈಹಿಡಿದವರಿಗೂ ಸುಖ ದಾಯಕವಾಗುತ್ತಿದೆ.' ಹೀಗೆಂದು ತನ್ನ ದೃಷ್ಟಿಯನ್ನು ಅವಳ ಮೇಲೆ ಬೀರಿ ತುಸು ಹೊತ್ತಿನ ವರೆಗೆ ಹಾಗೆಯೇ ನಿಂತನು. ಆಗ ಅವಳ ಬಾಲ್ಯದಲ್ಲಿದ್ದ ನಿಷ್ಕಳಂಕಬುದ್ಧಿಯಿಂದ ಅವಳ ಚೆಲ್ವಿಕೆಗೆ ಕೊಡುತಿದ್ದ ಒಪ್ಪೆಯು ಈಗ ತಗ್ಗಿದೆ ಎಂಬಂತೆ ಏನೊ ಭಾಸವಾಯಿತು. ಆ ಮೇಲೆ ಫಕ್ಕನೆ ಎಚ್ಚತ್ತವ ನಾಗಿ 'ಮಗೂ ನಿನಗೆ ಇಂದಿನ ಸಮಾರಂಭದಲ್ಲಿ ಸಂತೋಷವಾಯಿತಲ್ಲ! ಯಾವುದಕ್ಕೂ ಲೋಪವಾಗಲಿಲ್ಲವಲ್ಲ!'

**ವಿಮಲೆ:**—ಅದಕ್ಕಾಗಿ ನಿಮ್ಮ ಉಪಕಾರವನ್ನು ಆಗಲೇ ಸ್ಮರಿಸಿದೆ ನಲ್ಲ! ಆದರೆ ವಾಸ್ತವವಾಗಿ ಹೇಳುವುದಾದರೆ ಇಂಥ ಸಮಾರಂಭಗಳ ಮೇಲೆ ನನಗೇನೋ ಜುಗುಪ್ಸೆಯುಂಟಾಗಿದೆ. ಒಬ್ಬಳು ಒಳ್ಳೆ ಶೀರೆಯನ್ನು ಉಟ್ಟಿದ್ದಾಳೆ, ಒಳ್ಳೆ ಮೌಲ್ಯದ ಹತ್ತುಕುಡುಕು ಸರಗಳನ್ನು ಧರಿಸಿದ್ದಾಳೆ, ಎಂದರೆ ಹಲವರಿಗೆ ಅಂತರ್ಯದಲ್ಲಿ ರೋಷಮತ್ಸರಗಳು ಉಕ್ಕಿ ಬರುತ್ತವೆ. ಬಾಹ್ಯದಲ್ಲಿ ಮಾತ್ರ ನಿರ್ವಾಹವಿಲ್ಲದ ಹುಸಿನಗು. ಬಂದಲ್ಲಿ ಎಲ್ಲರೂ ಒಟ್ಟುಕೂಡಿ ಸಂತೋಷಪಡುವ ಬದಲಾಗಿ ಅಲ್ಲಲ್ಲಿ ಚಿಕ್ಕ ತಂಡಗಳಾಗಿ ಕೂಡಿ ಇತರರ ಅವಹೇಳನೆ. ಅಂಥ ಸಂಭಾಷಣೆಗಳನ್ನು ಕೇಳಿದರೆ ಹೊಟ್ಟೆ ಯಲ್ಲಿ ಮರಕಳಿಸುತ್ತದೆ. ಅವರ ಮಾತುಗಳ ವಿಷವಾಯುವು ಸಾರ್ವ ತ್ರಿಕ ಹಬ್ಬುವುದಕ್ಕೆ ಇಂಥ ಸಮಾರಂಭಗಳೇ ತಕ್ಕ ಕ್ಷೇತ್ರ.

**ಸೇಟಜೀ:**—ಸರಿಸರಿ. ಅದಕ್ಕಾಗಿಯೇ ದೊಡ್ಡ ಟೀಪಾರ್ಟಿಗಳೆಂದರೆ ನನಗೂ ಒಗ್ಗುವುದಿಲ್ಲ. ನಾನು ಇತರರ ಬಂಗಲೆಗಳಿಗೆ ಹೋಗುವುದೂ ಇಲ್ಲ.

**ವಿಮಲೆ:**—'ಅದು ನಿಮ್ಮಂಥವರಿಗೆ ಸಾಧ್ಯ. ಆ ಶ್ರೀಮಂತರೇ ನಿಮ್ಮ ಕಾಲು ನೆಕ್ಕುವುದಕ್ಕೆ ಬರುತ್ತಾರೆ; ಮೊಳಕೈಸವರಿಸಿಕೊಂಡು ತಂಡ ತಂಡವಾಗಿ ಬರುತ್ತಲಿದ್ದಾರೆ. ಸಂಪತ್ತಿನ ಮೂಗುದಾಣವು ನಿಮ್ಮ ಕೈಯಲ್ಲಿದೆ ಎನ್ನುತಿದ್ದಾರೆ. ಆದ್ದರಿಂದ ನಿಮ್ಮನ್ನು ಆಶ್ರಯಿಸದೆ ಆ ಶ್ರೀಮಂತರಿಗೆ ನಿರ್ವಾಹವಿಲ್ಲ. ನಿಮ್ಮಂಥವರಿಗಿದ್ದ ಸುಖವು ಇತರ ಸಾಮಾನ್ಯರಿಗೆ ಇಲ್ಲ. ಅವರು ಪಾರ್ಟಿಗಳಿಗೆ ಹೋಗದಿದ್ದರೆ ಗರ್ವದಿಂದ ಉಬ್ಬಿದ್ದಾರೆ ಎನ್ನುವುದು, ಬಂದರೆ ಅವರನ್ನು ನಖಶಿಖಾಂತವಾಗಿ ಟೀಕಿಸುವುದು, ಇದೇ ಮುಖ್ಯ ಧೋರಣೆ' ಎಂದು ಹೇಳುತ್ತ ತನ್ನೆದುರಿನಲ್ಲಿ ಒಂದು ಪಾತ್ರೆಯಲ್ಲಿದ್ದ ಗುಲಾಬಿಯ ಹೂವನ್ನು ಎತ್ತಿ ಅದರ ಎಸಳುಗಳನ್ನು ಒಂದೊಂದಾಗಿ ಕೀಳತೊಡಗಿದಳು. ಅದನ್ನೆ ನೋಡುತ್ತಿದ್ದ ಸೇಟಜೀಯು:-

'ನಿನ್ನ ಮಾತಿನಲ್ಲಿ ನಾನು ನಿರಂಕುಶನಾಗಿ ಸುಖದ ಉಯ್ಯಾಲೆಯಲ್ಲಿ ತೂಗುತಿದ್ದೇನೆ ಎಂಬ ಭಾವನೆಯಿರಬಹುದು. ಆದರೆ ನೀನು ಕೈಯಲ್ಲಿ ಎತ್ತಿ ಕೀಳುತಿದ್ದ ಗುಲಾಬಿಹೂ ಎಷ್ಟು ಛಿದ್ರವಾಯಿತೊ ಹಾಗೆಯೇ ನನ್ನ ಹೃದಯವೂ ದಾರುಣವಾದ ದುಃಖದಿಂದ ಛಿದ್ರವಾಗಿದೆ.

**ವಿಮಲೆ:**—ಗುಲಾಬಿಹೂವಿನ ಸುದ್ದಿಯೇ? ಇಲ್ಲಿ ಬೇಕಾದ್ದಕ್ಕಿಂತ ಹೆಚ್ಚು ಹೂಗಳು ಇದ್ದವು. ಆದ್ದರಿಂದ ಅವಿಚಾರದಿಂದ ಒಂದನ್ನು ಕಿತ್ತೆನು.

**ಸೇಟಜೀ:**—ಅದು ನಿನ್ನ ತಪ್ಪಲ್ಲ. ಬೇಕಾದ್ದಕ್ಕಿಂತಲೂ ಹೆಚ್ಚಾಗಿ ಒದಗಿಸಿದವರ ತಪ್ಪು. ಆದರೆ ಇದೊಂದು ಗುಲಾಬಿಯ ಹೂ ಕಳೆದು ಹೋದುದಕ್ಕಾಗಿ ನಾನು ಮರುಗುವುದಿಲ್ಲ. ಇದಕ್ಕಿಂತಲೂ ಸ್ತ್ರೀಯರ ಹೃದಯದಲ್ಲಿ ಅತಿ ಸುವಾಸನೆಯ ಹೂ ಅರಳುತ್ತದೆ. ಅದು ಹಾಳಾಗದಿದ್ದರೆ ಸರಿ. ಅದೇ ಸ್ತ್ರೀಯ ಹೃದಯದಲ್ಲಿ ಅಂಕುರಿಸುವ ನಿಷ್ಕಾಮ ಪ್ರೇಮ.

**ವಿಮಲೆ:**—ಅಂಥ ಮಾತುಗಳನ್ನು ನಾನು ಇಂಗ್ಲಿಷ್ ನೊವೆಲ್ ಕಾದಂಬರಿಗಳಲ್ಲಿ ಕಂಡಿದ್ದೇನೆ. ಆದರೆ ನನಗೆ ಅಂಥ ಪ್ರೇಮವೊಂದು ಇದೆ ಎಂದು ವಿಶ್ವಾಸವಿಲ್ಲ.

ಸೇಟಜೀಯ ಮೋರೆಯು ಇದನ್ನು ಕೇಳಿದೊಡನೆ ತುಸು ಗಂಭೀರ ವಾಗಿ ಕಪ್ಪಿಟ್ಟಿತು. 'ಹಾಗಾದರೆ ನಿನ್ನ ಅಂಬೋಣವೇನು?' ಎಂದನು.

**ವಿಮಲೆ:**— ಹಳೆ ಸಂಪ್ರದಾಯದಲ್ಲಿ ವಿವಾಹವಾದನಂತರ ವಧು ವರರಲ್ಲಿ ಪ್ರೇಮ ಬೆಳೆಯುತ್ತಿದೆ ಎಂಬ ಅಭಿಪ್ರಾಯವಿದೆ. ಈಗಿನವರು ಪ್ರೌಢವಿವಾಹವು ಇದಕ್ಕೆ ಸುಗಮವಾಗಿ ದಾರಿ ಕಡಿದುಕೊಡುತ್ತದೆ ಎಂದು ಪ್ರತಿಪಾದಿಸುತ್ತಾರೆ; ಪ್ರೌಢವಿವಾಹವನ್ನು ಪ್ರೋತ್ಸಾಹಿಸುತ್ತಾರೆ. ಆದರೆ ನಾನು ಕಂಡ ಈ ಎರಡು ವಿಧದ ದಂಪತಿಗಳಲ್ಲಿ ಅನೇಕರಲ್ಲಿ ಅಂಥ ಪ್ರೇಮದ ನೆರಳು ಕೂಡ ಇಲ್ಲ. ಅದು 'ದೂರದಿಂದ ಬೆಟ್ಟ ನುಣ್ಣಗೆ'. ಮನೆಯ ಅಂತಃಕಲಹಗಳ ಸುದ್ದಿಯನ್ನು ಕೇಳಿದರೆ ಅಂಥ ವಿವಾಹಗಳೆ ಬೇಡವೆನಿಸುತ್ತದೆ. ನನ್ನ ಸ್ವಂತ ತಾಯಿಗೆ ಬಾಲ್ಯವಿವಾಹವಾಗಿತ್ತು. ಆದರೆ ನನಗೆ ಬುದ್ಧಿ ತಿಳಿದಂದಿನಿಂದ ನಮ್ಮ ಮನೆಯಲ್ಲಿ ಒಂದು ದಿನವಾದರೂ ಜಗಳವಿಲ್ಲದೆ ಇಲ್ಲ. 'ಇದಕ್ಕೆ ಹಣವಿಲ್ಲ ಅದಕ್ಕೆ ಹಣವಿಲ್ಲ' ಎಂದು ಯಾವಾಗಲೂ ನನ್ನ ತಂದೆತಾಯಿಗಳಿಗೆ ಜಗಳ. ನನ್ನ ತಾಯಿಯ ಕಣ್ಣುಗಳಲ್ಲಿ ನೀರು. ಹೀಗಾಗಿ ನಮ್ಮ ಮನೆಯೊಂದು ಸುಡುಗಾಡಿನಂತೆ ಇತ್ತು. ಸುಖ ವೆಂದರೆ ನನಗೆ ಇಲ್ಲಿ ಬಂದ ಮೇಲೆಯೇ, ತಮ್ಮ ಆಶ್ರಯದಲ್ಲಿಯೆ!

**ಸೇಟಜೀ:**— ಹಾಗಾದರೆ ನಿನ್ನ ಅಂಬೋಣದಲ್ಲಿ ಪ್ರೇಮಕ್ಕೆ ಸ್ಥಾನ ವಿಲ್ಲ. ಸುಖ ಸಿಗಬೇಕು, ಅದಕ್ಕೆ ಬೇಕಷ್ಟು—

**ವಿಮಲೆ:**— ಹಣವಿರಬೇಕು. ಇದೇ ರೀತಿಯಲ್ಲಿ ನೀವು ನನ್ನನ್ನು ಬಳೆಯಿಸಿದ್ದೀರಿ. ಅಂಥ ಹಣದ ಸೌಕರ್ಯವೆ ತಪ್ಪಿಹೋದರೆ ನನ್ನ ಗತಿ ಏನಾದೀತು ಎಂಬದೇ ನನ್ನ ದಿಗಿಲು.

**ಸೇಟಜೀ:**— ಆದರೆ ಬಾಯಿಬಾರದ ಪಶುಗಳು ಕೂಡಾ ತಮ್ಮ ಮರಿ ಗಳನ್ನು ತಮ್ಮ ತೆಕ್ಕೆಯೊಳಗಿಟ್ಟು ಅತೀ ಪ್ರೇಮದಿಂದ ನೋಡಿಕೊಳ್ಳುತ್ತಿವೆ ಯಲ್ಲ!

**ವಿಮಲೆ:**— ನಿಜ, ಅದೆಲ್ಲವೂ ಆ ಮರಿಗಳಿಗೆ ಸ್ವಂತವಾಗಿ ಆಹಾರ ಸಂಪಾದನೆ ಮಾಡಲು ಶಕ್ತಿ ಬರುವ ವರೆಗೆ ಮಾತ್ರ; ಆ ಮೇಲೆ ಆ ಪರಸ್ಪರ ಪ್ರೇಮವು ಮಾಯವಾಗುವುದಿಲ್ಲವೇ? ಅದರ ಅಣುವಾದರೂ ಕಂಡುಬರುವು

ದಿಲ್ಲವಲ್ಲ! ಹಾಗಿದ್ದರೆ ಬುದ್ಧಿಶಕ್ತಿ ಬಲವಾಗಿ ಬೆಳೆಯುತ್ತಿರುವ ಮನುಷ್ಯ ವರ್ಗದಲ್ಲಿ ಅದು ಎಲ್ಲಿ ಉಳಿಯಬೇಕು? ಮನುಷ್ಯನು ಸ್ವಾತಂತ್ರ್ಯಪ್ರಿಯನು. ಅದೇ ಬಗೆಯ ಸ್ವಾತಂತ್ರ್ಯಕ್ಕಾಗಿ ಸ್ತ್ರೀಯರೂ ಈಗ ಬಹಿರಂಗವಾಗಿ ಸಭೆ ಜರಗಿಸಿ ಗುಲ್ಲೆಬ್ಬಿಸುತ್ತಾರೆ.

**ಸೇಟಜೀ:**— ಈಗ ನೀನು ಇನ್ನೂ ಒಂದಲ್ಲ ಒಂದು ದಿನ ವಿವಾಹ ವಾಗುವ ಪ್ರಾಯವು ಬಂದಿದೆ. ಈ ವಿಚಾರದಲ್ಲಿ ಈ ನಿಷ್ಕಾಮ ಪ್ರೇಮಕ್ಕೆ ನಿನ್ನ ಹೃದಯದಲ್ಲಿ ಅವಕಾಶವಿಲ್ಲವೇ?

**ವಿಮಲೆ:**— ನಿಷ್ಕಾಮ ಪ್ರೇಮವೆಂಬದು ತೀರಾ ಪುರಾಣದ ಬದನೆ ಕಾಯಿ. ಕವಿಗಳ ಕಾವ್ಯದಲ್ಲಿ, ಕಲಾವಿದರ ಚಿತ್ರಗಳಲ್ಲಿ, ಕಾದಂಬರಿಕಾರರ ಕಾದಂಬರಿಗಳಲ್ಲಿ ಅಲ್ಲದೆ ಮತ್ತೆ ಬೇರೆ ಇಲ್ಲ. ಸಂಸಾರದಲ್ಲಿ ಅದೆಲ್ಲವೂ ಬರಿಯ ಮಾಯೆ.

ಇಷ್ಟು ಮಾತುಗಳು ನಡೆಯುವಷ್ಟರಲ್ಲಿ ಆಮಂತ್ರಿತರೆಲ್ಲರೂ ರಾತ್ರಿ ಯಾಯಿತೆಂದು ಸೇಟಜಿಯು ಅಪ್ಪಣೆ ಪಡಕೊಳ್ಳಲು ಆತನನ್ನು ಹುಡುಕಿ ಬಂದರು. ಸೇಟಜಿಯನ್ನು ಕಂಡು ಹಸ್ತಲಾಘವ ಕೊಟ್ಟು ಬಂಗಲೆಯಿಂದ ತಂತಮ್ಮ ವಾಹನಗಳಲ್ಲಿ ಹೊರಟುಹೋದರು. 'ನಿನ್ನೊಡನೆ ಇನ್ನೂ ಕೆಲವು ವಿಷಯಗಳನ್ನು ಮಾತಾಡಲಿಕ್ಕಿದೆ. ನನ್ನ ಆಫೀಸುಕೋಣೆಗೆ ಇನ್ನೊಂದು ತಾಸಿನಲ್ಲಿ ಬಾ' ಎಂದು ಸೇಟಜಿಯು ವಿಮಲೆಗೆ ಹೇಳಿ ತನ್ನ ಆಫೀಸು ಕೋಣೆಯ ಕಡೆಗೆ ಹೋದನು. ದೂರದಲ್ಲಿ ಅವರಿಬ್ಬರು ಮಾತನಾಡುತ್ತಿದ್ದು ದನ್ನು ಗೋಣೆತ್ತಿ ಕಿವಿಗಳನ್ನು ನಿಗುರಿಸಿ ನೋಡುತಿದ್ದ ವಿಮಲೆಯ ತಾಯಿಯು ಮನಸ್ಸಿನಲ್ಲಿ ಆನಂದದ ಮಂಡಿಗೆ ತಿನ್ನುತ್ತ ನಿಂತಿದ್ದು ವಿಮಲೆಯು ಬಂದೊಡನೆ 'ಏನು ಬಹಳ ಮಾತುಕಥೆ ನಡಿಯುತಿತ್ತು?' ಎಂದು ಪ್ರಶ್ನಿಸಿದಳು. 'ಲೋಕದ ಸಮಾಚಾರ, ಅದರ ವಿಮರ್ಶೆ, ಅಷ್ಟೆ! ಆದರೆ ಇನ್ನೊಂದು ತಾಸಿನಲ್ಲಿ ತನ್ನನ್ನು ಆಫೀಸುಕೋಣೆಯಲ್ಲಿ ಕಾಣ ಬೇಕೆಂದು ಹೇಳಿದ್ದಾರೆ. ಅದೇನೆಂದು ಗೊತ್ತಾಗಲಿಲ್ಲ.' ಎಂದಳು. 'ಸಮಾಚಾರವೇನು? ನಿನ್ನನ್ನು ವಿವಾಹಮಾಡಿಕೊಳ್ಳುತ್ತೇನೆ ಎಂದು ಸೂಚಿಸು ವುದೇ! ಹೇಗೂ ಆ ಮುದಿ ಗೂಬೆ— ಆ ರತನಲಾಲ ಸೇಟಜೀಯ ಹೆಂಡ

ತಿಯು ಆ ಕುರಿತು ನನ್ನನ್ನು ಒಂದು ಬಗೆಯಿಂದ ತನಿಖೆಮಾಡಿದಳು. ಅದು ಒಮ್ಮೆಗೆ ನಿಜವಾದರೆ ಅವಳ ಮೂಗಿಗೆ ಮಸಿ ಹಚ್ಚಿದಂತಾಗುವುದು' ಎಂದು ಮಗಳ ಬೆನ್ನನ್ನು ಸವರುತ್ತ ಅಡಿಗೆಮನೆಗೆ ಮಗಳನ್ನು ಕರೆದು ಕೊಂಡು ಹೋಗಿ ಅವಳಿಗೆ ಊಟಮಾಡಿಸಿ ಸೇಟಜೀಯ ಆಫೀಸು ಕೋಣೆಯ ಬಳಿಗೆ ಕಳುಹಿಸಿ, ತಾನು ಹೊರಗಿನ ಕೋಣೆಯಲ್ಲಿ ಅರೆ ಮುಚ್ಚಿದ ಬಾಗಿಲ ಎಡೆಯಲ್ಲಿ ಕಿವಿಕೊಟ್ಟು ನಿಂತು ಮಾತುಕಥೆಯನ್ನು ಕೇಳತೊಡಗಿದಳು.

---

## ೩ನೆ ಅಧ್ಯಾಯ

## ಹೃದಯಪರೀಕ್ಷೆ

ಸೇಟಜೀಯು ತನ್ನ ಆಫೀಸು ಕೋಣೆಯಲ್ಲಿ 'ಈಜಿಚೆಯರಿ'ನಲ್ಲಿ ಕುಳಿತು ಕಾಲು ಚಾಚಿ ಸಾಯಂಕಾಲದ ವರ್ತಮಾನಪತ್ರಿಕೆಯನ್ನು ಓದ ತೊಡಗಿದ್ದನು. ಆದರೆ ಅವನ ಮನಸ್ಸು ಪತ್ರಿಕೆಯಲ್ಲಿರಲಿಲ್ಲ. ತನ್ನ ಸಂಪತ್ತು, ತನ್ನ ಕಾರ್ಯಗೌರವ, ವರ್ತಕವೃಂದದ ಮೇಲೆ ಹರಡಿರುವ ತನ್ನ ವರ್ಚಸ್ಸು, ಇವುಗಳ ಕಡೆಗೆ ಉಂಟಾದ ತಾತ್ಸಾರದೊಂದಿಗೆ ಅಂದಿನ ಸಾಯಂಕಾಲದ ಸಂಭಾಷಣೆಯಿಂದ ತನ್ನ ಹೃದಯದ ಮೇಲೆ ಇನ್ನೊಂದು ಬರೆ ಎಳೆದಂತಾಗಿತ್ತು. ತಾನು ಎಲ್ಲಿಂವಲೊ ಎತ್ತಿ ತಂದು ಇಷ್ಟು ಪ್ರೇಮ ಲಾಲಸೆಗಳಿಂದ ಸಾಕಿದ ಮಗುವಿನ ಮನಸ್ಸಿನಲ್ಲಿ ವಿಚಿತ್ರವಾದ ಭಾವನೆ ಗಳು ತಲೆದೋರಿದುದು ಅವನಿಗೆ ತೀರಾ ಆಶ್ಚರ್ಯಕರವಾಗಿತ್ತು. ಇದು ಈಗಿನ ಸ್ತ್ರೀವಿದ್ಯಾಭ್ಯಾಸದ ಪರಿಣಾಮವೇ, ಅಥವಾ ಶಾಲೆಯಲ್ಲಿ ಅವಳ ಒಡನಾಡಿಗಳಾಗಿದ್ದವರ ಸಂಸರ್ಗದೋಷವೇ, ಅಥವಾ 'ಬೇವಿನ ಬೀಜದಿಂದ ಮಾವಿನ ಗಿಡ ಹುಟ್ಟದು' ಎಂಬಂತೆ ಈಗ ವಿಕಸಿತವಾಗಿದ್ದ ಹುಟ್ಟುಗುಣವೇ ಎಂಬದು ಅವನಿಗೆ ಬೋಧೆಯಾಗಲಿಲ್ಲ. ಅವಳು ಪೂನೆಯಲ್ಲಿ ಮೂರು ವರ್ಷಗಳ ಕಾಲ ಕಲಿಯುತಿದ್ದಾಗ 'ಬೋರ್ಡಿಂಗ ಹೌಸಿ'ನಲ್ಲಿದ್ದುದರಿಂದ ಸೇಟಜೀಯು ಅವಳನ್ನು ಆಗಾಗ ಕಾಣಲಾಗುತಿದ್ದಿಲ್ಲ. ಬರಿ ಬಾಲಿಕೆ ಯಾಗಿ ಹೋದವಳು ಈಗ ನವತರುಣಿಯಾಗಿದ್ದಳು. ಆದರೆ ಅವಳ ಆಕೃ

ತಿಯು ಅರಳಿ ಬಂದ ಹಾಗೆ ಅವಳ ಮನಸ್ಸು ಸರಿಯಾಗಿ ಅರಳುವ ಬದ
ಲಾಗಿ ಪರಿಮಳದ ಹೂವಿನೊಳಗೆ ಕೀಟವು ಹುದುಗಿದೆ ಎಂಬದನ್ನು ತೋರಿ
ಸಿತಲ್ಲ ಎಂದು ಸೇಟಜಿಗೆ ಬಲು ಚಿಂತೆ ಆವರಿಸಿತ್ತು. ತನ್ನ ಕನಸು ಬಯ
ಲಾಯಿತೆಂದೆ ಆತನಿಗೆ ನಿರಾಸೆ. ತಾಯಿಗೂ ಮಗಳಿಗೂ ನಡೆದ ಸಂಭಾ
ಷಣೆಯನ್ನು ಕತ್ತಲಲ್ಲಿ ತನ್ನ ಕೋಣೆಗೆ ಹೋಗುವಾಗ ಅವನು ಕೇಳಿದ್ದನು.
ತನ್ನ ಜೀವನಕಾಲವೇ ನಿರರ್ಥಕವಾದ ಬಾಳು ಎಂದು ಅವನು ಈಗ
ಖಂಡಿತವಾಗಿ ತಿಳಿದನು. ಆದರೂ ಇನ್ನೊಮ್ಮೆ ವಿಮಲೆಯನ್ನು ಪರೀಕ್ಷಿಸ
ಬೇಕೆಂದು ಅವಳ ಆಗಮನವನ್ನು ಹಾರೈಸಿ ಕುಳಿತಿದ್ದನು. ಅವಳು
ಬಹಳ ಸಡಗರದಿಂದ ಬಂದು ಅವನು ತೋರಿಸಿದ ಕುರ್ಚಿಯಲ್ಲಿ ಮಂಡಿಸಿ
ದಳು.

'ಮಗು, ನಾನು ಇನ್ನು ಕೆಲವು ದಿನಗಳಲ್ಲಿ ಇಲ್ಲಿಂದ ದೂರ ಪ್ರದೇ
ಶಕ್ಕೆ ಪ್ರಯಾಣ ಬೆಳೆಯಿಸಬೇಕಾಗಿದೆ.'

**ವಿಮಲೆ:**—ದೂರ ಪ್ರದೇಶಕ್ಕೆ! ಎಷ್ಟು ದಿನ ಅಲ್ಲಿರಬೇಕಾದೀತು?

**ಸೇಟಜೀ:**—ಒಂದು ವರ್ಷ; ಅದಕ್ಕೂ ಹೆಚ್ಚಾಗಲೂ ಬಹುದು.
ನಾನು ಇಷ್ಟರ ವರೆಗೆ ನಿನ್ನನ್ನು ಸಾಕಿದೆ. ಈಗ—

**ವಿಮಲೆ:**—ಏನು! ನನ್ನನ್ನು ಎಲ್ಲಿಗಾದರೂ ಹೋಗೆನ್ನುವಿರಾ? ಆಗ
ನನ್ನ ಮುಂದಿನ ಗತಿ ಏನು?

**ಸೇಟಜೀ:**—ಅದನ್ನೆ ನಿನ್ನೊಡನೆ ಚರ್ಚಿಸಲಿಕ್ಕೆಂದು ನಿನ್ನನ್ನು ಬರ
ಹೇಳಿದೆ. ನೀನು ಈಗ ಪ್ರಾಯಸಮರ್ಥಳಾಗಿರುವೆ. ಸಾಕಷ್ಟು ವಿದ್ಯೆಯೂ
ನಿನಗೆ ದೊರೆತಿದೆ. ನಿನ್ನ ತಾಯಿಯು ನಿನ್ನ ಮುಂದಿನ ವಿಚಾರವನ್ನು
ಏನಾದರೂ ಹೇಳಿದಳೇ?

**ವಿಮಲೆ:**—(ನಾಲಗೆಯನ್ನು ತಡವರಿಸುತ್ತ ಅರೆಮುಚ್ಚಿದ ಬಾಗಿಲ
ಕಡೆಗೆ ನೋಡಿ) ಇಲ್ಲ—ಇಲ್ಲ, ಅವಳು ನನ್ನೊಡನೆ ಏನೂ ಹೇಳಿಲ್ಲ!
ನೀವೂ ಹೋದರೆ ನನ್ನ ವಿಚಾರ ತೆಕ್ಕೊಳ್ಳುವವರಾದರೂ ಯಾರು?

**ಸೇಟಜೀ:**—ಹಾಗೆನ್ನಬೇಡ. ಆದರೆ ನನಗೂ ವೃದ್ಧಾಪ್ಯವು ತಲೆ ದೋರಿದೆ. ಇನ್ನು ನನ್ನ ಮುಂದಿನ ವ್ಯವಸ್ಥೆಯನ್ನೂ ನಾನು ನೋಡಿಕೊಳ್ಳ ಬೇಕು. ನನಗೂ ಮನಸ್ಸಿಗೆ ಶಾಂತಿ ಇಲ್ಲ.

**ವಿಮಲೆ:**—ನಿಮಗೆ! ಮನಸ್ಸಿಗೆ ಶಾಂತಿ ಇಲ್ಲವೆನ್ನುವಿರಾ, ನಿಮಗೆ! ಇಷ್ಟು ಸಂಪತ್ತಿಗೆ ಅಧೀಶರಾಗಿದ್ದರೂ ಕೂಡಾ!

**ಸೇಟಜೀ:**—ಅದನ್ನೇ ಹೇಳುತಿದ್ದೇನೆ. ಸಂಪತ್ತೇ ಸುಖಕ್ಕೆ ಕಾರಣ ವಲ್ಲ; ಅದೇ ಸುಖದ ಸಂಜೀವನ ಮಣಿಯಲ್ಲ. ಆದರೆ ಈಗ ನನ್ನ ವಿಚಾರ ಬೇಡ. ನಿನ್ನ ಪ್ರಸ್ತಾಪವನ್ನು ಮಾಡೋಣ. ನಿನಗೆ ಇನ್ನು ವಿವಾಹವಾಗ ಬೇಕಲ್ಲ!

'ಈಗಲೇ ಸೇಟಜೀಯು ಗುಟ್ಟಿನ ಬಯಲಾಗುತ್ತಿದೆ' ಎಂದು ಮನಸ್ಸಿನಲ್ಲಿ ಸಂತೋಷ ಉಕ್ಕುತಿದ್ದರೂ ತುಟಿ ಎರಡು ಮಾಡದೆ ತಲೆ ಬಗ್ಗಿಸಿ—

**ವಿಮಲೆ:**—ನಾನು ಆ ವಿಷಯವಾಗಿ ನನ್ನ ಗೆಳತಿಯರೊಡನೆ ಚರ್ಚಿ ಸದೆ ಇಲ್ಲ. ಈ ಪ್ರೇಮ ಪ್ರೀತಿ ಇತ್ಯಾದಿಗಳ ಮೇಲೆ ನನಗೆ ಏನೇನೂ ವಿಶ್ವಾಸವಿಲ್ಲ. ನನಗೆ ಸುಖಕ್ಕೆ ಬೇಕಷ್ಟು ಹಣವನ್ನು ಒದಗಿಸಿ ಕೊಡುವವ ನನ್ನೇ ನಾನು ವಿವಾಹಮಾಡಿಕೊಳ್ಳುವೆನು. ಅಂಥವನು ಸಿಗದಿದ್ದರೆ ವಿವಾ ಹವೇ ಬೇಡ. ನಾನು ಏಕಾಕಿನಿಯಾಗಿಯೇ ಇರುವೆನು. ಅಂದರೆ ಜೀವನ ಕ್ಕಾಗಿ ಕೆಲಸ ಮಾಡುವ ಸ್ಥಿತಿಯಲ್ಲಿ ನಾನು ಇಲ್ಲ—

ಮಾತು ಅಲ್ಲೆ ತಡವರಿಸಿ ಸೇಟಜೀಯು ಕಡೆಗೆ ನೋಡಿದಳು.

**ಸೇಟಜೀ:**—ಸರಿ ಸರಿ! ಜೀವನಕ್ಕಾಗಿ ದುಡಿಯುವ ಕೆಲಸವು ಬಹಳ ಕಷ್ಟಸಾಧ್ಯ. ಅದಕ್ಕಾಗಿಯೆ ಆ ಭಾರವನ್ನು ವಹಿಸಿ ಗೃಹಕೃತ್ಯವಿಚಾರ ವನ್ನು ಮಾತ್ರ ನಿನಗೆ ಒಪ್ಪಿಸುವವನು ನಿನಗೆ ಗಂಡನಾಗಬೇಕು.

'ಒಳಗಿನ ಗುಟ್ಟು ಇನ್ನೂ ಯಾಕೆ ಗಂಟಲಲ್ಲಿಯೆ ಸಿಕ್ಕಿಕೊಳ್ಳುತ್ತದೆ' ಎಂದು ವಿಮಲೆಯು ಕಾತರಳಾದಳು. ಕೊನೆಗೆ ಇದಕ್ಕಾಗಿ 'ನಿಮ್ಮಂತಹ ಲೋಕಾನುಭವವುಳ್ಳವರ ಸೂಚನೆ ಏನಾದರೂ ಇದೆಯೇ?' ಎಂದು ಎಳೇ ಎಳನೀರಿಗೆ ಚೂರಿಯ ಮೊನೆಯಿಂದ ಚುಚ್ಚುವಂತೆ ಸೇಟಜೀಯು ಅಂತರಂಗ ಪರೀಕ್ಷೆಗೆ ಕೈಹಾಕಿದಳು.

**ಸೇಟಜೀ:**—ಇದರಲ್ಲಿ ಹೀಗೆ ಮಾಡೆಂದು ಹೇಳಲಿಕ್ಕೂ ನನಗೆ ಸಂದೇಹಬರುತ್ತದೆ. ನಾನು ಹಳೇ ಸಂಪ್ರದಾಯದ ವೃದ್ಧನು; ನೀನು ಈಗಿನ ನವನಾಗರಿಕತೆಯ ತರುಣಿ. ನೀನಿನ್ನೂ ಜೀವನಪಥದಲ್ಲಿ ಕಾಲಿ ಡುತ್ತಿಯಷ್ಟೆ; ನಾನು ದಾರಿ ನಡೆದು ಅದರ ಕೊನೆಗೆ ಸಮೀಪಿಸುತಲಿದ್ದೇನೆ. ಆದರೂ ಪ್ರೇಮವೆಂಬದೊಂದು ಇದೆ ಎಂದು ನನ್ನ ಭ್ರಮೆ. ನಿನಗೆ ಅದು ಮರೀಚಿಕೆ ಎಂದು ಕಾಣುತ್ತದೆ. ಜೀವನದಲ್ಲಿ ದಾಂಪತ್ಯಸುಖಕ್ಕೆ ಪ್ರೇಮವೇ ಮುಖ್ಯಸಾಧನವೆಂದು ನನ್ನ ಹೃದಯದ ಕತ್ತಲೆಯಲ್ಲಿಯೂ ನಸುಬೆಳಕಿ ನಂತೆ ಹೊಳೆಯುತ್ತಿದೆ.

**ವಿಮಲೆ:**—ನಿಮಗೆ ಇನ್ನೂ ಈ ಭ್ರಮೆಯೇ? ಎಷ್ಟೋ ಹಣ ವೆಚ್ಚ ಮಾಡಿ ಎಷ್ಟೋ ಮದಿವೆಗಳಾಗಲಿಲ್ಲ! ಅವುಗಳಲ್ಲಿ ಶಾಂತಿಯ ಸುಖ ನೆಲ ಸಿದ್ದ ಮನೆಗಳು ಎಷ್ಟು? ಕೈಬೆರಳೆಣಿಕೆಯಲ್ಲಿ ಕೂಡಾ ಇಲ್ಲ. ಆ ಶಾಂತಿ, ಆ ಪ್ರೇಮ ಇವೆಲ್ಲ ಕಾವ್ಯಗಳಲ್ಲಿ ಅಲ್ಲದೆ ಪ್ರಕೃತಿಯಲ್ಲಿಲ್ಲ. ನನಗಾದರೊ ನನ್ನ ಕೈ ಹಿಡಿವವನು ನನ್ನ ಒಳ್ಳೆ ಗೆಳೆಯನಂತಿರಬೇಕು, ನನಗೆ ಯಾವುದ ರಲ್ಲಿಯೂ ಕಡಿಮೆ ಮಾಡಿ ಕೈ ಗಿಡ್ಡ ಮಾಡಬಾರದು ಮತ್ತು ನನಗಿಂತಲೂ ಹೆಚ್ಚು ಪ್ರಾಯ ದಾಟಿದವನಾಗಿ ಲೋಕಾನುಭವವುಳ್ಳವನಾಗಬೇಕು ಮತ್ತು—

**ಸೇಟಜೀ:**—ಧನರಾಶಿಯಲ್ಲಿ ಹೊರಳಾಡುತ್ತಿರಬೇಕು. ಅದನ್ನು ಮರೆಯಬೇಡ, ಕಂಡ್ಯಾ!

ಈ ಮಾತುಗಳಿಂದ ವಿಮಲೆಯು ಒಮ್ಮೆಗೆ ಚಕಿತಳಾಗಿ ತನ್ನೊಡನೆ ಸೇಟಜೀಯು ವ್ಯಂಗ್ಯವಾಗಿ ಮಾತನಾಡುತ್ತಾನೊ ಎಂದು ನೆನಸಿದಳು. ಆದರೂ ಅಪ್ರತಿಭಳಾಗದೆ–'ಹೌದು. ಹಣವಿಲ್ಲದೆ ಜೀವಿಸಲು ನನಗೆ ಸಾಧ್ಯವೆ ಇಲ್ಲ' ಎಂದಳು. ಆಗ ಸೇಟಜೀಯು ಏನನ್ನೊ ಯೋಚಿಸುವವನಂತೆ ಎದ್ದು ಅತ್ತಿತ್ತ ಸುಳಿದಾಡುತ್ತ ಕೊನೆಗೆ ಫಕ್ಕನೆ ಏನೊ ಹೊಳೆದಂತೆ ಅವಳ ಮುಂದೆ ಬಂದು ನಿಂತು—'ಹಣವಿಲ್ಲದೇ ಸುಖವಿಲ್ಲವೆನ್ನುತ್ತಿಯಾ? ನನ್ನ ಸುಖದ ದಿನಗಳು ನಾನು ಇನ್ನೂ ಬಡವನಾಗಿದ್ದು ದುಡಿತದ ಪೆಟ್ಟನ್ನು ಸಹಿಸಿ ಕೊಳ್ಳುವಾಗಲೇ ದಾಟಿ ಹೋದುವು. ಆಗಲೇ ನನ್ನನ್ನು ನಾನು ತಿಳಿದೆ,

ಅದು ಇತರರನ್ನು ತಿಳಿಯುವುದಕ್ಕೆ ಅನುವು ಮಾಡಿತು. ಆಗ ನನ್ನಲ್ಲಿ ಕೆಲವು ಧ್ಯೇಯಗಳು ರೂಪುಗೊಂಡಿದ್ದುವು. ಅವು ಇನ್ನೂ ಹಾಗೆಯೆ ಅಚ್ಚಳಿಯದೆ ಉಳಿದಿವೆ. ಆ ಧ್ಯೇಯದ ಒಂದು ಮೂರ್ತಿ ನೀನಾಗಿದ್ದೆ ಎಂದರೆ ನಿನಗೆ ಆಶ್ಚರ್ಯವಾಗಬಹುದಲ್ಲವೇ?

**ವಿಮಲೆ:**—'ನಿಜವೇ! ಆದರೆ ಈಗ ನಿಮಗೆ ಅಂಥ ಆಸೆ ನಿರಾಸೆಯಾಗಿರಬೇಕು' ಎಂದು ಹೇಳುವಾಗ ಅಲ್ಲವೆಂದು ಹೇಳಿ, ತನ್ನನ್ನು ಆಗಲೇ ಕೈ ಹಿಡಿದು ಸೇಟಜೀಯು ತನ್ನ ಪ್ರೇಮವನ್ನು ಹೊರಗೆಡಹುವನೆಂದು ಈ ಬಾಲೆಯು ಎಣಿಸಿದಳು.

**ಸೇಟಜೀ:**—ನಿನ್ನನ್ನು ಇಲ್ಲಿಗೆ ಕರತಂದು ಪಾಲಿಸುವಾಗಲೆಲ್ಲ ನೀನು ಆ ಧ್ಯೇಯದ ಮೂರುತಿಯಾಗಬೇಕೆಂದೇ ನನ್ನ ಹಾರೈಕೆ. ಅನಂತರ ನೀನು ವಿದ್ಯಾಭ್ಯಾಸಕ್ಕಾಗಿ ಹೋದೆ. ಬರುವಾಗ ಆ ಚಿಕ್ಕ ಬಾಲಿಕೆಯು ಇದ್ದಿಲ್ಲ, ಸರ್ವಾಂಗಸುಂದರಳಾದ ತರುಣಿಯು ಬಂದಿದ್ದಳು. ಆದರೆ ಬಾಲಿಕೆಯಾಗಿದ್ದಾಗ ಯಾವ ನಿಷ್ಕಳಂಕವಾದ ನಿಷ್ಕಾಪಟ್ಯದ ಮೂರುತಿಯಾಗಿದ್ದೆಯೊ ಅದೇ ಮೂರುತಿಯು ನನ್ನ ಹೃದಯದಿಂದ ಅಳಸಿಹೋಗಿಲ್ಲ.

**ವಿಮಲೆ:**—ಸ್ವಾಮಿ, ನೀವು ನನ್ನಲ್ಲಿ ಇಲ್ಲದ ಗುಣಗಳನ್ನು ಕಲ್ಪಿಸಿ ಮಹತ್ವಿಕೆಯನ್ನು ಕೊಡಲಿರುವಿರಿ. ಅಂಥಾ ವಿಚಕ್ಷಣೆಯು ನಾನಲ್ಲ.

**ಸೇಟ:**—'ವಿಚಕ್ಷಣತೆಯನ್ನು ನಾನು ಹಾರೈಸುವುದಿಲ್ಲ. ಸಾಮಾನ್ಯವಾಗಿ ಈ ಸಂಸಾರಸಾಗರವನ್ನು ಈಸುವುದಕ್ಕೆ ಬೇಕಾದ ಸಾಮರ್ಥ್ಯವನ್ನು ಸಂಪಾದಿಸುವುದರಲ್ಲಿ ಬೇಕಾದ ವಿಚಕ್ಷಣತೆಯು ಇನ್ನೂ ನಿನ್ನ ಪಾಲಿಗೆ ಬಂದಿಲ್ಲವೆನ್ನೋಣ.' ಇದಕ್ಕೆ ಏನು ಉತ್ತರವೀಯಬೇಕೆಂದು ತಿಳಿಯದೆ ವಿಮಲೆಯು ಸುಮ್ಮಗಿದ್ದಳು. 'ಅದಕ್ಕಿಂತಲೂ ನಿನ್ನಲ್ಲಿ ಪ್ರಾಮಾಣಿಕತನವೂ ನಿಶ್ಚಲತೆಯೂ, ನಿಷ್ಕಳಂಕವೂ ಇದ್ದರೆ ಸಾಕು.' ಈ ಮಾತುಗಳನ್ನು ಕೇಳಿದಾಗ ಅವಳ ಮೋರೆ ತುಸು ಕೆಂಪಾಯಿತು. ಆಗ ತನ್ನ ವರ್ಗದ ಹುಡುಗಿಯೊಬ್ಬಳು ನಿಷ್ಕಾಪಟ್ಯದ ಸೋಗು ಹಾಕಿ ತನ್ನ ಸಂಗಾತಿಗಳನ್ನು ವಂಚಿಸುವುದರ ನೆನಪು ಬಂದು, ಅವಳಂತೆ ತಾನೂ ನಟಿಸಬೇಕೆಂದು ಇಚ್ಛೆಯಾಯಿತು. ಆದರೆ ಅಷ್ಟು ಚುರುಕುತನವು ಇವಳಲ್ಲಿರಲಿಲ್ಲ. ಹೀಗಾಗಿ ತಲೆ ಎತ್ತದೆ ಅಧೋವದನಳಾಗಿ ಕುಳಿತಳು.

**ಸೇಟಜೀ:**—'ಸ್ತ್ರೀಯು ಸದ್ಗುಣ-ಸದಾಚಾರಗಳೆ ಅವಳ ಸರ್ವ ಸಂಪತ್ತು. ವಜ್ರದ ಬೆಲೆಯು ಅದರ ಗಾತ್ರ ಮತ್ತು ಭಾರದಲ್ಲಿಲ್ಲ. ಅದರಲ್ಲಿ ಒಂದೇ ಒಂದು ಕಲಂಕವು ಇಲ್ಲದುದರ ಮೇಲೆ ಹೊಂದಿರುತ್ತದೆ. ಹೀಗಿದ್ದುದರಿಂದ ರತ್ನಪರೀಕ್ಷಕರು ತಮ್ಮ ಮುಂದಿಟ್ಟ ವಜ್ರವನ್ನು ಭೂತಗನ್ನಡಿಯಿಂದ ಪರೀಕ್ಷಿಸುತ್ತಾರೆ. ಹಾಗೆಯೇ ನಾನು. ಇದರಲ್ಲಿ ನಿನ್ನ ಆಕ್ಷೇಪವಿದೆಯೇ?

**ವಿಮಲೆ:**—ನನ್ನ ಆಕ್ಷೇಪ! ನಿಮ್ಮ ಯಾವ ಕಾರ್ಯದಲ್ಲಿಯೂ ನಾನು ಆಕ್ಷೇಪಿಸಲಾಪೆನೆ! ಆದರೆ ನಿಮ್ಮ ರತ್ನಪರೀಕ್ಷೆಯೇನೆಂದು ತಿಳಿಯಲಿಲ್ಲ!

**ಸೇಟಜೀ:**—ನಿನಗೆ ಗೊತ್ತಾಗಲಾರದು. ಯಾಕಂದರೆ ನನ್ನ ಸ್ವಂತಕ್ಕೆ ಸಾಧಕ-ಬಾಧಕವಾಗುವ ವಿಚಾರಗಳಲ್ಲಿ ನನಗೆ ಸ್ಪಷ್ಟೋಕ್ತಿಗಳಿಂದ ನುಡಿಯಲು ಬರುವುದಿಲ್ಲ. ಆದರೂ ನನಗೊಂದು ಹೃದಯವೆಂಬ ಅಂಗವಿದೆ. ಅದರ ಡಬಡಬ ಬಡಿದಾಟವು ನನ್ನನ್ನೆ ಒಂದೊಂದು ಸಲ ಪೀಡಿಸುತ್ತಿದೆ.

ವಿಮಲೆಯು ಈ ಮಾತುಗಳಿಂದ ಕಾತರಳಾಗಿ ಫಕ್ಕನೆ ಎದ್ದು ನಿಂತಳು.

**ವಿಮಲೆ:**—ಆಗಲಿ, ನನ್ನ ಪರೀಕ್ಷೆ ಆಗಲಿ.

**ಸೇಟಜೀ:**—ಒಂದು ಪ್ರಶ್ನೆ ಕೇಳಬೇಕೆಂದಿರುವೆನು. ಅದು ಕಷ್ಟತರ ಪ್ರಶ್ನೆ. ಅದರಲ್ಲಿಯೆ ನಿನ್ನ ಪರೀಕ್ಷೆಯಾಗುವುದು ತಿಳಿದೆಯಾ?

**ವಿಮಲೆ:**—'ಆ ಪ್ರಶ್ನೆಗೆ ಉತ್ತರ ಕೊಡಲು ಸಾಧ್ಯವಿದ್ದರೆ ಕೊಟ್ಟೇ ತೀರಿಸುವೆನು. ಏನೂ ಸಂದೇಹ ಬೇಡ.' ಇನ್ನೂ ಏನೂ ತಡವಿಲ್ಲದೆ ಗುಟ್ಟು ಬಯಲಿಗೆ ಬರುವುದು. ತನ್ನ ಆಶಾಪೂರ್ತಿಯಾಗುವುದು ತನ್ನ ಸ್ವರ್ಗಸುಖಕ್ಕೆ ಇನ್ನು ಮೂರೇ ಗೇಣು ಉಳಿದಿದೆ ಎಂದು ಗೋಣೆತ್ತಿ ಕಣ್ಣುಗಳನ್ನು ಅರಳಿಸಿ ನಿಂತಳು.

**ಸೇಟಜೀ:**—ಇನ್ನೂ ನನ್ನಲ್ಲಿ ಸಂದೇಹ ಬರುತ್ತದೆ, ಕೇಳಲೆ ಬೇಡವೇ ಎಂತ. ನನ್ನ ಪ್ರಶ್ನೆಯಿಂದ ನೀನು ಕೆರಳಿದರೆ—

**ವಿಮಲೆ:**—ನನಗೆ!—ಸಿಟ್ಟು!—ಅದು ಎಂದೆಂದಿಗೂ ಬರಲಾರದು.

**ಸೇಟಜೀ:**—ಒಂದು ವೇಳೆ—ಅದು ಬರಿ ಊಹಾಪೋಹವೆಂದು ತಿಳಿ—ಒಂದು ವೇಳೆ ನಾನೇ ನಿನ್ನನ್ನು ವರಿಸಲು ಉದ್ಯುಕ್ತನಾಗುವುದಾದರೆ?

**ವಿಮಲೆ:**—ತವಕದಿಂದ—ಅರೆಕ್ಷಣ ಬೇರೆ ಮಾತಿಲ್ಲದೆ 'ನಿಮ್ಮನ್ನು ಅಂಗೀಕರಿಸುವೆನು. ನಿಮ್ಮ ಇದುವರೆಗಿನ ಉಪಕಾರವನ್ನೇನಾದರೂ ಮರೆಯುವೆನೇ? ಅಂಥ ಕೃತಘ್ನಳೆ ನಾನು?' ಇದನ್ನು ಹೇಳುವಾಗ ವಿಮಲೆಯ ಅಂಗಾಂಗಗಳಲ್ಲಿ ಉಕ್ಕಿಬರುವ ಸಂತೋಷವು ಕಣ್ಣುಗಳಿಂದಲೇ ಹೊರಸೂಸುತಿತ್ತು.

**ಸೇಟಜೀ:**—ನೀನು ಖಂಡಿತವಾಗಿಯೂ ನನ್ನ ಕೈ ಹಿಡಿಯುವೆ? ಅದರಲ್ಲಿ ಮತ್ತೆ ಬೇರೆ ಅಭಿಪ್ರಾಯವಿಲ್ಲವಲ್ಲ! ಚೆನ್ನಾಗಿ ಆಲೋಚಿಸಿನೋಡು.

**ವಿಮಲೆ:**—ಖಂಡಿತವಾಗಿಯೂ; ಅದರಲ್ಲಿ ಬೇರೆ ಯೋಚನೆಯೇ ಬೇಡ. ಬೇರೆಯವನನ್ನು ವಿವಾಹಮಾಡಿಕೊಳ್ಳುವುದಕ್ಕಿಂತಲೂ ನೀವೇ ನನಗೆ ಅನುರೂಪವಾದವರು.

**ಸೇಟಜೀ:**—ಏತಕ್ಕದು?

ಈ ಚಿಕ್ಕ ಮಾತಿನಿಂದ ವಿಮಲೆಯು ಚಕಿತಳಾದಳು. ಇದನ್ನು ಕೇಳುವಾಗ ಸೇಟಜಿಯು ವಿಮಲೆಯನ್ನೆ ಎವೆಯಿಕ್ಕದೆ ನೋಡುತಿದ್ದನು.

ವಿಮಲೆಗೆ ಈ ನೋಟದ ಮರ್ಮವು ಗೊತ್ತಾಗಲಿಲ್ಲ. ತನ್ನನ್ನು ಸಮಾಧಾನಪಡಿಸುವ ಬದಲಾಗಿ ಕೇಳಿದ ಈ ಚಿಕ್ಕ ಪ್ರಶ್ನೆಗೆ ಉತ್ತರ ಕೊಡುವುದರಿಂದ ತನ್ನ ನಿಜಾಭಿಪ್ರಾಯವೂ, ತನ್ನ ಸ್ವಾರ್ಥಪರ ವೃತ್ತಿಯೂ ಹೊರಬೀಳುವುದಲ್ಲ ಎಂದು ಅವಳಿಗೆ ಕಂಡಿತು.

**ಸೇಟಜೀ:**—ಏನು? ಉತ್ತರವಿಲ್ಲ? ನನ್ನ ಕೈಹಿಡಿಯುವ ಉದ್ದೇಶವೇನು? ನನ್ನ ಮೇಲಿನ ಪ್ರೇಮದಿಂದಲ್ಲ. ಯಾಕಂದರೆ ಪ್ರೇಮದ ಮೇಲೆ ನಿನಗೆ ವಿಶ್ವಾಸವಿಲ್ಲ. ಪ್ರಾಯದಲ್ಲಿ ನಾನು ನಿನಗೆ ತಾತನಂತಿದ್ದೇನೆ. ಇನ್ನೊಮ್ಮೆ ಚೆನ್ನಾಗಿ ಯೋಚಿಸಿ ನುಡಿ. ದುಡುಕಬೇಡ. ವಿವಾಹವೆಂದರೆ ಇಂದು ಜತೆಯಾಗಿ ನಾಳೆ ಕಡಿದುಬಿಡುವ ಸಂಯೋಗವಲ್ಲ. ಆಮರಣ ಪರ್ಯಂತದ ಸಂಬಂಧ. ನಿನ್ನ ಮುಂದಿನ ಸುಖ, ನಿನ್ನ ಈಗಿನ ತಾರುಣ್ಯಾವಸ್ಥೆ, ಇದನ್ನೆಲ್ಲ ಯೋಚಿಸು. ನೀನು ಇನ್ನೂ ಜೀವನಪಥದಲ್ಲಿ ಕಾಲಿಡುತ್ತಿ! ನಾನು ಮುಕ್ಕಾಲು ಮೂರು ವೀಸ ದಾರಿಯನ್ನು ಸಾಗಿಸಿದಂತಿದೆ!

**ವಿಮಲೆ:**— ನೀವು ಎಷ್ಟು ಹೇಳಿದರೂ ನನ್ನ ಮನಸ್ಸು ಕದಲಲಾರದು. ನೀವು ವಿವಾಹವಾಗೆಂದರೆ ಸಮ್ಮತಿ ಪಡುವವಳೇ ನಾನು.

**ಸೇಟಜೀ:**—ಸರಿ, ಹಾಗಾದರೆ ನನ್ನ ಇದೊಂದು ಆಸೆಯೂ ಕನಸಿನ ಮಂಡಿಗೆಯಾಯಿತು. ನನ್ನ ಕಣ್ಣುಗಳಿಗೆ ಅಡ್ಡಬಂದ ಪರೆ ತೊಲಗಿತು. ನನ್ನ ಮಬ್ಬು ಹೋಯಿತು. ದೃಷ್ಟಿ ಶುಭ್ರವಾಯಿತು. ನನ್ನ ದ್ರವ್ಯದ ಆಸೆಗಾಗಿ ನಿನ್ನ ಸ್ವೇಚ್ಛಾವರ್ತನೆಗೆ ನಿರಾತಂಕವಾಗುವಂತೆ ನನ್ನನ್ನು ಮದುವೆಯಾಗಲೆಳಸುವೆ ಯಲ್ಲವೇ? ನಿನ್ನಲ್ಲಿಯೂ ದುಡ್ಡಿನ ಗುಲಾಮಳಾಗುವ ಪೈಶಾಚ ವೃತ್ತಿಯು ವ್ಯಾಪಿಸಿ ನಿನ್ನ ಸುಗುಣಗಳಿಗೆ ತುಕ್ಕು ಹಿಡಿದಿದೆ ಎಂದಾಯಿತು. ಇದನ್ನು ನಾನು ಹಾರೈಸಲಿಲ್ಲ. ನನ್ನನ್ನು ಮದುವೆಯಾಗಲಾರೆ ಎಂದು ನಿರ್ಭೀತಿ ಯಿಂದ ಹೇಳಿದರೆ ನೀನು ನ್ಯಾಯವಾದ್ದನ್ನೆ ನುಡಿದೆ ಎಂದು ನಿನ್ನನ್ನು ಗೌರ ವಿಸುತಿದ್ದೆ. ನೀನೂ ದುಡ್ಡಿನ ಈ ಲಂಚಕ್ಕೆ ಕೈಯೊಡ್ಡಿದೆಯಾ? ಇದು ಬಹಳ ವಿಷಾದಕರ ಮಾತು. ಸ್ಥಾನ, ಮಾನ, ದುಡ್ಡು ಇದಕ್ಕಾಗಿ ನೀನು ನಿನ್ನ ದೇಹ ವನ್ನೆ ವಿಕ್ರಯಿಸುವಂತಾಯಿತು.

ವಿಮಲೆಯು ಅವಾಕ್ಕಾದಳು. ಮುದುಕನು ತನ್ನನ್ನು ಮೋಸಗೊಳಿಸಿ ಅಂತರಂಗಪರೀಕ್ಷೆ ಮಾಡಿದನು, ಈ ಮುದುಕನು ತನ್ನ ಮಾಯಾಜಾಲಕ್ಕೆ ಸುಲಭವಾಗಿ ಸಿಗುವ ಮೃಗವೆಂದು ತಾನು ತಿಳಿದದ್ದು ತೀರಾ ತಪ್ಪಾಯಿತೆಂದು ವಿಮಲೆಯು ರೇಗಿದಳು. ಮತ್ತು ಕಣ್ಣೀರು ಸುರಿಸುತ್ತ ‘ಇದೆಯೋ ನಿಮ್ಮ ಸುಟ್ಟ ಪರೀಕ್ಷೆ? ಮೋಸದ ಮಾತುಗಳಿಂದ ನನ್ನನ್ನು ಬೆರಗುಗೊಳಿಸುವ ವಿದ್ಯೆ?’ ಎಂದು ಸರಸರನೆ ಕೋಣೆಯ ಹೊರಕ್ಕೆ ಕಾಲಿಟ್ಟಳು. ಈ ಸ್ಥಿತಿ ಯನ್ನು ಹಾರೈಸದೆ ಶುಭಸಮಾಚಾರವನ್ನು ಕೇಳಲು ಗೋಣೆತ್ತಿ ಕಾಲ್ಬೆರಳು ಗಳ ಮೇಲೆ ನಿಂತು ನೋಡುತಿದ್ದ ಅವಳ ತಾಯಿಗೆ ಸಿಡಿಲು ಬಡಿದಂತಾಯಿತು. ಈ ಸಂಭಾಷಣೆಯಲ್ಲಿ ಒಂದಕ್ಷರವನ್ನೂ ತಪ್ಪದೆ ಅವಳು ಕಿವಿಯಾರೆ ಕೇಳಿ ದ್ದಳು. ಇನ್ನು ತನ್ನ ಮತ್ತು ತನ್ನ ಮಗಳ ಗತಿಯೇನಾಗುವುದೋ ಎಂದು ತಾಯಿಮಗಳಿಬ್ಬರೂ ‘ಶಿವಾ’ ಎಂದು ರಾತ್ರೆಯೆಲ್ಲ ಕಣ್ಣುರೆಪ್ಪೆ ಮುಚ್ಚ ಲಿಲ್ಲ. ಟೀಪಾರ್ಟಿಯ ಸಂತೋಷದಿಂದ ಆರಂಭಿಸಿದ ದಿನವು ಮುಂದಿನ ಯೋಚನೆಯ ವಿಚಾರದಲ್ಲಿ ಪರ್ಯವಸಾನವಾಯಿತು.

---

## ೬ನೆ ಅಧ್ಯಾಯ

## ಗುಪ್ತ ಪ್ರಯಾಣ

ಹಿಂದಿನ ಅಧ್ಯಾಯದಲ್ಲಿ ವರ್ಣಿಸಿದ ಸಂಗತಿಯು ನಡೆದು ಎರಡು ಮೂರು ದಿನಗಳು ದಾಟಿದುವು. ಜಹಾಂಗೀರ ಅರ್ದೇಶೀರನು ಮೂರು ಅಂತಸ್ತಿನ ಕಟ್ಟಡದ ಮೇಲಿನ ಕೋಣೆಯ ತನ್ನ ಆಫೀಸಿನಲ್ಲಿ ಕುರ್ಚಿಯಲ್ಲಿ ಕುಳಿತು ಏನೊ ಒಂದು ದೊಡ್ಡ ಸಿವಿಲ್ ಮೊಕದ್ದಮೆಯ ರಿಕಾರ್ಡನ್ನು ಓದುತ್ತ ಒಂದು ಖಾಲಿ ಕಾಗದದಲ್ಲಿ ಮುಖ್ಯ ಸಂಗತಿಗಳನ್ನು ಬರಕೊಳ್ಳುತ್ತ ಇದ್ದನು. ಅಷ್ಟರಲ್ಲಿ ಆಫೀಸಿನ ಜವಾನನು ಬಂದು 'ಹೊರಗೆ ಜಗ ಜೀವನ ಸೇಟಜಿಯವರ ಮನೆಯಾಳು ಬಂದು ಕಾಯುತ್ತಾನೆ' ಎಂದು ವರ್ತಮಾನ ತಿಳಿಸಿದನು.

ಜಹಾಂಗೀರನು ತಲೆ ಎತ್ತಿ 'ಯಾರು ಗಣುವೆ? ಒಳಕ್ಕೆ ಬರಲಿ' ಎಂದು ಹೇಳಿದನು. ಗಣುವು ಸಲಾಂ ಮಾಡಿ ಒಂದು ದೊಡ್ಡ ಲಕ್ಕೋಟೆ ಯನ್ನು ಜಹಾಂಗೀರನ ಕೈಗೆ ಒಪ್ಪಿಸಿದನು. ಮುದ್ರೆಯೊಡೆದು ಜಹಾಂಗೀ ರನು 'ಗಣೂ! ನಿನ್ನ ಧನಿಗಳಿಗೆ ಕ್ಷೇಮವೇ?' ಎಂದನು.

**ಗಣೂ:**—ಅವರು ಹೊರಡುವಾಗ ಕ್ಷೇಮದಲ್ಲಿದ್ದರು.

**ಜಹಾ:**—ಹಾಗಾದರೆ ಅವರು ಹೊರಟೇ ಹೋದರೆ?

**ಗಣೂ:**—ಹೌದು ಸಾಹೇಬರೇ, ಹೌದು.

ಅನಂತರ ಒಳಗಿನ ಕಾಗದವನ್ನು ಜಹಾಂಗೀರನು ಬಿಡಿಸಿ ಕೈಯಲ್ಲಿ ಹಿಡಿದು 'ನಿನ್ನ ಧನಿಗಳು ಒಂಟಿಯಾಗಿಯೇ ಹೊರಟರೇ?'

**ಗಣೂ:**—ಹೌದು, ನನ್ನನ್ನು ಕೂಡಾ ಕರೆದುಕೊಂಡು ಹೋಗಿಲ್ಲ.

**ಜಹಾ:**—ಎಲ್ಲಿಗೆ ಹೋಗುತ್ತೇನೆಂದರು?

**ಗಣೂ:**—ಪೂನೆಗೆ!

**ಜಹಾ:**—(ಕಾಗದ ಓದಿ) ಅವರು ಬರುವ ವರೆಗೆ ಅವರ ಆದಾಯ ವೆಚ್ಚವನ್ನು ನಾನು ನೋಡಿಕೊಳ್ಳಬೇಕೆಂದು ಈ ಕಾಗದದಲ್ಲಿ ಇದೆ. ಆದ್ದ ರಿಂದ ನೀನು ಖರ್ಚಿಗೆ ಹಣ ಬೇಕಾದಾಗ ಇಲ್ಲಿಗೆ ಬಂದು ಪಡೆಯಬೇಕು. ವಿಮಲಮ್ಮ ಮತ್ತು ಅವರ ತಾಯಿಗೆ ಬೇಕಾದಷ್ಟು ಹಣವನ್ನು ಕಳುಹಿಸಿ ಕೊಡಲಿಕ್ಕೆ ಇದರಲ್ಲಿ ಸೂಚನೆಯಿದೆ.

**ಗಣೂ:** (ಆರ್ತಸ್ವರದಿಂದ)—ಧನಿಯವರ ಆರೋಗ್ಯವು ಅಷ್ಟೊಂದು ಚೆನ್ನಾಗಿದ್ದಿಲ್ಲ. ಕೆಲವು ಸಮಯದ ಹಿಂದೆ ಡಾಕ್ಟರರು ಅವರೊಡನೆ ಮಾತಾಡುವಾಗ ಅವರ—ಅದೇನೊ ಎದೆಗುಂಡಿಗೆಯೊ ಏನೊ—ಬಲಹೀನ ವಾಗಿದೆ ಎನ್ನುತಿದ್ದರು. ಅವರಿಗೆ ಪ್ರಾಯವೂ ಹೆಚ್ಚಾಯಿತು. ಅಂಥವರು ಒಂಟಿಯಾಗಿ—

**ಜಹಾ:**—ಅವರು ಹವಾ ಬದಲಾಯಿಸುವುದಕ್ಕೇನೇ ಹೋಗಿರಬೇಕು.

**ಗಣೂ:**—ಅವರು ಸಮುದ್ರಪ್ರಯಾಣ ಮಾಡಬಹುದಿತ್ತು. ಒಳ ದೇಶಕ್ಕೆ ಹೋಗಬೇಕೇ?

**ಜಹಾ:**—'ಹೇಗೂ ಇರಲಿ. ಆ ವಿಷಯವನ್ನು ನಾವೇಕೆ ಚರ್ಚಿಸಲಿ? ಅವರ ಇಷ್ಟವನ್ನು ನಡಿಸುವುದೇ ನಮ್ಮ ಕರ್ತವ್ಯ. ನೀನು ಈಗ ಧನಿಗಳ ಮನೆಗೆ ಹೋಗಿ ಎಚ್ಚರದಿಂದ ಎಲ್ಲವನ್ನು ನೋಡುತ್ತಿರು' ಎಂದು ಆತನನ್ನು ಕಳುಹಿಸಿ ಆ ಕಾಗದವನ್ನು ಇನ್ನೊಮ್ಮೆ ಓದತೊಡಗಿದನು.

ಮಿತ್ರರೇ,

ನಮ್ಮಲ್ಲಿಯ ಟೀಪಾರ್ಟಿಯ ದಿನ ನನಗೇನೊ ಒಂದು ಕೆಟ್ಟ ಸಮಾಚಾರ ತಲಪಿತು. ನಾನು ಉದ್ದೇಶಪೂರ್ವಕವಾಗಿ ಕೈಹಚ್ಚಿದ ಒಂದು ಕಾರ್ಯವು ನಿಷ್ಫಲವಾಯಿತು. ಸಾಂಪತ್ತಿಕ ದೃಷ್ಟಿಯಿಂದ ನನಗೆ ಅದರಿಂದ ಆಗುವ ನಷ್ಟವು ತೀರಾ ಕಿಂಚಿತ್ತು. ಆದರೆ ಅದರ ವ್ಯವಸ್ಥೆಗಾಗಿ ನಾನು ಹೋಗಬೇಕಾಗಿದೆ. ಹೀಗಾಗಿ ಕೆಲವು ಸಮಯ ನಾನು ಮಾಯವಾದಂತೆಯೇ ಎಂದು ತಿಳಿಯಿರಿ. ಅಕಸ್ಮಾತ್ತಾಗಿ ನನಗೆ ಮರಣ ಸಂಭವಿಸಿದರೆ ನನ್ನ ಕಿಸೆಯಲ್ಲಿರುವ ಕಾಗದವು ನಾನು ಪ್ರಾಣಕಳಕೊಂಡ ಸ್ಥಳವನ್ನು ಸೂಚಿಸಿ ನನ್ನ ಹಣದ ಮುಂದಿನ ವ್ಯವಸ್ಥೆಯ ವಿಚಾರವನ್ನು ತಿಳಿಸುವದು. ನೀವು ನನಗೆ ಅನೇಕ ರೀತಿಯಲ್ಲಿ ಮಾಡಿದ ಉಪಕಾರದ ವಿಷಯವು—**ನಾನು ನನ್ನ ಮೀಲನ್ನು** ಬರೆಯುವಾಗ ನನ್ನ ಮನಸ್ಸಿನಿಂದ ವಿಸ್ಮೃತಿಯಾಗಲಾರದು. ಮೀಲು ಠರಾಯಿಸುವದನ್ನು ಬೇರೆ ವಕೀಲರಿಗೆ ನಾನು ಒಪ್ಪಿಸಿಕೊಡಬಹುದು. ಆದರೆ ಅಷ್ಟರ ವರೆಗೆ ನನ್ನ ವ್ಯವಾಟುಗಳೆಲ್ಲ ನಿಮ್ಮ ಕೈಯಿಂದ ನಡೆಯಬೇಕಾಗುವುದು—ಅದು ಯಂತ್ರದಂತೆ ಕ್ರಮವಾಗಿ ನಡೆದೀತು ಎಂದೂ ನನಗೆ ಭರವಸೆಯಿದೆ. ನನಗೆ ಮಾತ್ರ ಈಗ ವಿಶ್ರಾಂತಿಸುಖವೂ ವ್ಯಕ್ತಿಸ್ವಾತಂತ್ರ್ಯವೂ ಬೇಕಾಗಿವೆ. ಲೋಕದಲ್ಲಿ ನಿಷ್ಕಾಮ ಪ್ರೇಮವೆಂಬದು ಇದೆಯೋ ಎಂದು ನೋಡಬೇಕೆಂದು ನನ್ನ ಮನಸ್ಸು ಹಾತೊರೆಯುತ್ತಿದೆ. ಶ್ರೀ ಭಗವಂತನು ನಿಮ್ಮನ್ನು ಕಾಪಾಡಲಿ.

**ಇಂತಿ ಜಗಜೀವನ.**

ಜಹಾಂಗೀರನು ಇದನ್ನು ಓದಿ 'ಚುಟುಕು, ತೀರಾ ಚುಟುಕು. ನಮ್ಮ ಗೆಳೆಯನು ಉದ್ದೇಶಪೂರ್ವಕವಾಗಿ ಕೈಹಚ್ಚಿದ ಕಾರ್ಯವೆಂದರೆ ಯಾವುದು? ನನಗೆ ಅವನ ಸರ್ವವಿಚಾರವೂ ಗೊತ್ತಿದೆ. ಧನನಷ್ಟವೂ ಇಲ್ಲವಂತೆ! ಅವನ ಮೆದುಳಿನಲ್ಲಿ ಏನೋ ಒಂದು ಕೀಟವು ಸೇರಿದೆ, ಒಂದು ವಿಚಿತ್ರವಾದ ಯೋಚನೆಯು ಹತ್ತಿದೆ. ಇದು ಖಂಡಿತ. ನಿಷ್ಕಾಮ ಪ್ರೇಮವನ್ನು ಹುಡುಕಬೇಕಂತೆ! ಅಂಥ ವಿಚಾರವು ಈ ವೃದ್ಧಾಪ್ಯದಲ್ಲಿ ಸಾಧ್ಯವಾಗಲಾರದು. ಮುದುಕರ ಮೇಲೆ ಯಾರಿಗೂ ಅಂಥ ಪ್ರೇಮವಿಶ್ವಾಸಗಳಿರುವುದಿಲ್ಲ. ಅವರ ಸ್ವಂತ ಮಕ್ಕಳಿಗೂ ಇರುವುದು ಅಪೂರ್ವ. ವೃದ್ಧಾಪ್ಯವು ಈಗಿನವರ ದೃಷ್ಟಿಯಲ್ಲಿ—ಈ ಇಪ್ಪತ್ತನೆಯ ಶತಮಾನದಲ್ಲಿ—ಒಂದು ಪಾಪಕರ ದಶೆ. ಹೇಗೂ ಇರಲಿ. ಈ ಗೆಳೆಯನ ಸಾಹಸಕೃತ್ಯದಿಂದ ವಿಮಲೆಯ ಮತ್ತು ಅವಳ ತಾಯಿಯ ಮಹತ್ವಾಕಾಂಕ್ಷೆಗೆ ಪಂಗನಾಮ ಬಿತ್ತು. ಅದೇ ಸಂತೋಷದ ವಾರ್ತೆ. ಮುದುಕನಿಗೆ ಬಲೆ ಬೀಸಿದ್ದೇವೆಂದು ಅವರು ಹೇಳುತಿದ್ದುದು ಸುಳ್ಳಾಯಿತು. ಈಗ ಪೂನೆಯಿಂದ ಈ ಮುದುಕನು ಎಲ್ಲಿಗೆ ಹೋಗುವನು, ಏನು ಮಾಡಲಿಕ್ಕಿದ್ದಾನೆ ಎಂದು ತಿಳಿಯದು. 'ಎಲ್ಲಿಗೆ ಹೋದರೂ ಮನೆಗೆ ಬಪ್ಪ' ಎಂಬಂತೆ ಅವನ ಪರ್ಯಟನದ ಸಮಾಚಾರವು ಪ್ರಕಟವಾದೊಡನೆ ಬೇಸತ್ತು ಒಂದು ತಿಂಗಳೊಳಗೆ ಹಿಂದಕ್ಕೆ ಬಾರದೆ ಇರಲಾರನು.' ಎಂದು ನೆನಸಿ ತನ್ನ ಆಫೀಸು ಕೋಣೆಯಿಂದ ಇಳಿದು ತನ್ನ ಕ್ಲಬ್ಬಿನ ಕಡೆಗೆ ಹೋದನು.

---

## ೫ನೆ ಅಧ್ಯಾಯ

## ಹಳ್ಳಿದಾರಿಯ ಅನುಭವ

ಸೇಟಜಿಯು ಮುಂಬಯಿಯನ್ನು ಬಿಟ್ಟು ಮೂರು ದಿನಗಳಾಗಿದ್ದವು. ಮುಂಬಯಿಯನ್ನು ಬಿಟ್ಟು ಅಂದೇ ಪೂನೆಗೆ ಬರುವಾಗ ಚರ್ಮದ ಒಂದು ಸಣ್ಣ ಪೆಟ್ಟಿಗೆಯನ್ನು ಮಾತ್ರ ತಂದಿದ್ದನು. ಅದನ್ನು ಪೂನೆಯ ರೈಲ್ವೆ ಸ್ಟೇಶನಿನಲ್ಲಿ ಮೇಲುತರಗತಿಯ ಜನರು ತಂಗುವ ಕೋಣೆಯಲ್ಲಿ ಬಿಟ್ಟು, ಹಿಂದಿನ

ಬಾಗಿಲಿನಿಂದ ಪಾರಾಗಿ ಕಾಲುನಡೆಯಾಗಿ ಹೊರಟಿದ್ದನು. ಕತ್ತಲಾದೊಡನೆ ಹಳೆ ಪೋಷಾಕನ್ನು ಮಾರಾಟ ಮಾಡುವ ಒಂದು ಚಿಕ್ಕ ಅಂಗಡಿಗೆ ಹೋಗಿ ಅಲ್ಲಿಂದ ಹೊರಡುವಾಗ ತನ್ನ ವೇಷವನ್ನು ತೀರಾ ಮಾರ್ಪಡಿಸಿದ್ದನು. ಮೈಗೆ ಕೈಗಳಿಲ್ಲದ ತುಂಡಂಗಿ, ಅದರ ಮೇಲೆ ದಪ್ಪನಾದ ಹಳೆ ದುಪ್ಪಟಿ, ಉಟ್ಟದ್ದೊಂದು ಹಳೆ ಪಂಚೆ, ತಲೆಗೆ ಸುತ್ತಿದ ಹರಕು ರುಮಾಲು. ಮೋರೆಯ ಮೇಲಿನ ಕೃತಕ ಮೀಸೆಯೂ ಚಿಕ್ಕ ಗಡ್ಡವೂ ಕಣ್ಣಿಗೆ ಇಟ್ಟ ಹಸುರು ಹರಳಿನ ಕನ್ನಡಕವೂ ಅವನ ಆಪ್ತರೂ ಪರಿಚಿತರೂ ಕೂಡ ಅವನನ್ನು ಗುರುತಿಸದಂತೆ ಮಾಡುತಿದ್ದುವು. ಅವನ ತುಂಡಂಗಿಯ ಕಿಸೆಯಲ್ಲಿ ಬರೆ ನಾಲ್ಕೈದು ರೂಪಾಯಿಯ ಚಿಲ್ಲರೆಯನ್ನು ಒಂದು ಹರಕು ವಸ್ತ್ರದ ಕೊನೆಗೆ ಕಟ್ಟಿ ತೂರಿಸಿಟ್ಟಿದ್ದನು. ಆದರೆ ತುಂಡಂಗಿಯ ಒಳಭಾಗದಲ್ಲಿದ್ದ 'ಲೈನಿಂಗ್'ನೊಳಗೆ ೫೦೦ ರೂಪಾಯಿಯ ೫ ನೋಟುಗಳನ್ನೂ ತನ್ನ ಪರಿಚಯಮಾಡಿಕೊಡುವ ಒಂದು ಕಾಗದವನ್ನೂ ಅದರಲ್ಲಿ ತಾನು ಮುಂಬಯಿಯನ್ನು ಸೇರುವ ಮೊದಲೇ ಬಿದ್ದು ಸತ್ತರೆ ತನ್ನ ಸಂಪತ್ತನ್ನು ಏನು ಮಾಡಬೇಕೆಂಬ ವಿಷಯದಲ್ಲಿ ತನ್ನ ಸೊಲಿಸಿಟರ್ ಜಹಾಂಗೀರನಿಗೆ ಒಂದು ಪತ್ರವನ್ನೂ ಬರೆದು ಹೊಲಿದಿದ್ದನು. ಹಲವು ಕಾಲದಿಂದಲೂ ನೆಲದ ಮೇಲೆ ಕಾಲಿಡದೆ ಮೋಟರಬಂಡಿಯಲ್ಲಿಯೆ ಸವಾರಿ ಮಾಡುತಿದ್ದ ಸೇಟಜಿಯು ಈಗ ಪಾದಚಾರಿಯಾಗಿ ಪ್ರಯಾಣಮಾಡುವ ಹವ್ಯಾಸಕ್ಕೆ ತೊಡಗಿದ್ದನು. ಪೂನಾ ಪಟ್ಟಣವನ್ನು ಬಿಟ್ಟು ನಾಸಿಕಕ್ಕೆ ಹೋಗುವ ಕಾಡಿನ ಕಿರುದಾರಿಯನ್ನು ಹಿಡಿದಿದ್ದನು. ಕಾಲುನಡೆಯ ಅಭ್ಯಾಸವೇ ಮುರಿದುಹೋದ ಸೇಟಜಿಗೆ ಕಾಲುನಡೆಯ ಪ್ರಯಾಸ, ಹೊತ್ತಿಗೆ ತಿಂಡಿ ಸಿಗದೆ ಉಂಟಾದ ಆಯಾಸಗಳಿಂದ ಮೋರೆಯು ಕೊಂಚ ಬಾಡಿದ್ದರೂ ಕಣ್ಣುಗಳಲ್ಲಿ ಒಂದು ಬಗೆಯ ವಿಚಿತ್ರವಾದ ಉಲ್ಲಾಸವು ಹೊರಹೊಮ್ಮುತಿತ್ತು. ಬೆಳಗ್ಗಿನ ತಂಗಾಳಿಯ ಸುಖಕರವಾದ ತಂಪು, ಪಕ್ಷಿಗಳ ಚಿಲಿಪಿಲಿಗಾನದ ಇಂಪು, ದಟ್ಟವಾಗಿ ಬೆಳೆದ ಮರಗಳ ಸೊಂಪು ಇವುಗಳೆಲ್ಲ ಅವನ ಹೃದಯದಲ್ಲಿ ಒಂದು ಬಗೆಯ ವಿಚಿತ್ರಸ್ವಾತಂತ್ರ್ಯದ ಚಿತ್ರವನ್ನು ಚಿತ್ರಿಸಿದ್ದವು. ಸಮಾಜದ ನಿರ್ಬಂಧ, ಸಂಪತ್ತಿನ ನಿರ್ಬಂಧ ಇವುಗಳಿಲ್ಲದೆ ಏಕಾಕಿಯಾಗಿ ಸ್ವೇಚ್ಛೆಯಿಂದ ಸುಳಿದಾಡುವ ನೂತನ ಸ್ವಾತಂತ್ರ್ಯವು

ಅವನ ಮನಸ್ಸಿನಲ್ಲಿ ಒಂದು ಬಗೆಯ ಆಹ್ಲಾದವನ್ನು ವ್ಯಾಪಿಸಿತ್ತು. ಹೊತ್ತು ಮೂಡುವ ಮೊದಲೇ ಚಾಪೆಯನ್ನು ಬಿಟ್ಟು ಎದ್ದು ಮುಂದೆ ನಡೆಯುವುದು, ಹೊತ್ತು ನೆತ್ತಿಗೆ ಏರಿದಾಗ ಎಲ್ಲಾದರೂ ಊಟದ ಮನೆ ಅಥವಾ ತಿಂಡಿಯ ಅಂಗಡಿಯಲ್ಲಿ ಕುಳಿತು ಅತೀ ಅಲ್ಪ ಜನರು ತಿನ್ನುವ ಆಹಾರವನ್ನು ಕೂಡಾ ಹಸಿವೆಯಿಂದಾದ ಹೊಸ ರುಚಿಯಿಂದ ತಿನ್ನುವುದು, ಹೊತ್ತು ಇಳಿಯತೊಡಗಿದಾಗ ಪುನಃ ನಡೆಯಲಾರಂಭಿಸಿ ಕತ್ತಲಾದೊಡನೆ ಯಾರದಾದರೂ ಮನೆಯ ಹೊರಜಗಲಿಯಲ್ಲಿ ಬರಿನೆಲದಲ್ಲಿ ಬಿದ್ದು ಕೊಂಡು ದೇಹದ ದಣಿವಿನಿಂದ ಒದಗಿದ ಸುಖನಿದ್ರೆಯನ್ನು ಮಾಡು ವುದು ಹೀಗೆ ಮೂರು ದಿನಗಳು ಈ ಹೊಸ ಸುಖದಲ್ಲಿ ಕಳೆದುವು. ನಾಲ್ಕ ನೆಯ ಮಧ್ಯಾಹ್ನ ತಿಂಡಿ ಎಲ್ಲಿಯೂ ಸಿಗಲಿಲ್ಲ. ದಾರಿಯ ಬದಿಯಲ್ಲಿರುವ ದೊಡ್ಡದೊಂದು ಮರಕ್ಕೆ ಒರಗಿ ಸೇಟಜಿಯು ತನ್ನ ತುಂಡಂಗಿಯ ಕಿಸೆ ಯಲ್ಲಿದ್ದ ಅಭಂಗಗಳ ಪುಸ್ತಕವನ್ನು ತೆಗೆದು—

'ಆಪನೆ ಖಾತೆರ ಬಂಗಲಾ ಬನಾಯಾ। ಆಪನ ಜಾಕರ ಜಂಗಲ್ಮೆ ಸೋಯಾ॥' ಎಂಬ ಕಬೀರದಾಸರ ಪದದ ಸೊಲ್ಲನ್ನು ಫಕ್ಕನೆ ಓದಿ ಅದನ್ನೆ ಯೋಚಿಸುತ್ತ ಕಣ್ಣು ಕೂರತೊಡಗಿದನು. ಕೈಯಲ್ಲಿದ್ದ ಪುಸ್ತಕವು ಜಾರಿ ಚಾಚಿದ ತೊಡೆಗಳ ಮೇಲೆ ಬಿದ್ದಿತ್ತು.

ಅಷ್ಟರಲ್ಲಿ ಒಬ್ಬ ವಿಚಿತ್ರವ್ಯಕ್ತಿಯು ಅದೇ ದಾರಿಯಾಗಿ ಬರುತಿದ್ದು ಈ ಮುದುಕನ ಸ್ಥಿತಿಯನ್ನು ಕಂಡು 'ಎಲೊ ಅಜ್ಜಯ್ಯಾ! ಇಲ್ಲೆನೆ ಒರಗಿ ನಿದ್ದೆ ತೂಗುತ್ತಿರುವೆ! ಇದೇನು ಪುಸ್ತಕ? ಓಹೊ ಅಭಂಗಗಳ ಪುಸ್ತಕ! ಈ ಪ್ರಾಯದಲ್ಲಿ ಓದುವ ಪುಸ್ತಕ!' ಎಂದು ಸಮೀಪದಲ್ಲಿ ಬಂದು ಕುಳಿತನು.

ಮುದುಕನು ಫಕ್ಕನೆ ಕಣ್ಣು ತೆರೆದು ಅವನ ಕಡೆಗೇ ನೋಡುತಿದ್ದನು. ತಲೆಗೆ ಬಿಳೇ ಚುಕ್ಕಿಗಳುಳ್ಳ ಕಪ್ಪು ಬಟ್ಟೆಯ ರುಮಾಲು, ಮೈಗೆ ಕಸೆ ಬಿಗಿದ ಕೆಂಪು ಉದ್ದಂಗಿ, ಉಟ್ಟ ಪಂಚೆಯೊಂದು—ಇಷ್ಟರಲ್ಲಿ ಅವನ ಪೋಷಾಕು ಮುಗಿಯಿತು. ಕೈಯಲ್ಲಿರುವ ಉದ್ದ ದಂಟೆಯೊಂದನ್ನು ಕೆಳಗೆ ಇರಿಸಿದ್ದನು. ಹೆಗಲಿಗೆ ತೂಗಿಸಿದ ದೊಡ್ಡದೊಂದು ಜೋಳಿಗೆಯನ್ನೂ ನೆಲದ ಮೇಲೆ

ಇರಿಸಿದ್ದನು. ಅದನ್ನು ಇರಿಸುವಾಗ ಆದ ಶಬ್ದದಿಂದ ಅದರಲ್ಲಿ ಒಂದೆರಡು ಹಿತ್ತಾಳೆಯ ಪಾತ್ರೆಗಳಿರಬೇಕು ಎಂದು ಬೋಧೆಯಾಗುತಿತ್ತು. ತುಟಿಯ ಮೇಲೆ ಇದ್ದ ಮೀಸೆಯು ಗಲ್ಲಗಳನ್ನು ಆವರಿಸಿಕೊಂಡಿತ್ತು. ದೊಡ್ಡ ಗಡ್ಡವು ಕುತ್ತಿಗೆಯ ಭಾಗವನ್ನು ಬಹಳ ಮಟ್ಟಿಗೆ ವ್ಯಾಪಿಸಿತ್ತು.

ಸೇಟಜೀಯು ಅವನನ್ನು ಕಂಡು ನಸುನಗುತ್ತ 'ದಾರಿ ನಡೆದು ದಣುವಾಯಿತು. ವಿಶ್ರಾಂತಿಗಾಗಿ ಕುಳಿತಿದ್ದೆ. ಅಲ್ಲೆ ನಿದ್ದೆ ಬಂತು' ಎಂದನು.

**ವ್ಯಕ್ತಿ:**—ಎಲ್ಲಿಗೆ ಹೋಗಬೇಕು? ಊರು ಯಾವುದು?

**ಸೇಟಜೀ:**—ನನ್ನ ಊರು ಮುಂಬಯಿ. ನಾಸಿಕಕ್ಕೆ ಹೋಗಬೇಕೆಂದಿರುವೆ.

**ವ್ಯಕ್ತಿ:**—ರೈಲಿನಲ್ಲಿ ಪ್ರಯಾಣಮಾಡದೆ ಈ ಕಾಡುದಾರಿಯನ್ನು ಯಾಕೆ ಹಿಡಿದೆ?—ನಾಸಿಕವೆಂದರೆ ಮೂಗಿನ ದ್ವಾರವೆಂದು ತಿಳಿದೆಯಾ? ಕಾಲುದಾರಿಯಾಗಿ ಒಂದು ತಿಂಗಳ ದಾರಿಯಾಗುವುದು. ನಡೆದು ಈ ಪ್ರಾಯದಲ್ಲಿ ಹೋಗಬಲ್ಲೆ ಎನ್ನುವೆ ಏನು? ಕಲ್ಲುಮುಳ್ಳುಗಳ ಈ ದಾರಿ ನಡೆದರೆ ನಾಸಿಕಕ್ಕೆ ಹೋಗುವುದಕ್ಕಿಂತ ನೀನು ನಾಕಕ್ಕೆ ಹೋಗುವೆ ಎಂಬುದು ಖಂಡಿತ. ಮುಂಬಯಿಯಲ್ಲಿ ನಿನ್ನನ್ನು ನೋಡಿಕೊಳ್ಳುವವರು ಯಾರೂ ಇಲ್ಲವೆ?

**ಸೇಟಜೀ:**—ಯಾರೂ ಇಲ್ಲ. ನಾಸಿಕದಲ್ಲಿ ನನ್ನೊಬ್ಬ ಬಾಲ್ಯ ಮಿತ್ರನು ಇದ್ದಾನೆಂದು ಕೇಳಿದೆ. ಅವನನ್ನು ಹುಡುಕಿ ಹೋಗುತಿದ್ದೇನೆ.

**ವ್ಯಕ್ತಿ:**—ನಾಸಿಕದಷ್ಟು ದೂರಕ್ಕೆ ಹೇಗೆ ಹೋಗುವೆ? ದಾರಿಯಲ್ಲಿ ತಿರುಪೆ ಎತ್ತುವೆಯಾ? ನಿನ್ನನ್ನು ನೋಡಿದರೆ ಭಿಕ್ಷುವಾಗಿ ಕಾಣುವುದಿಲ್ಲ.

**ಸೇಟಜೀ:**—ನಾನು ಹುಟ್ಟುತಿರುಕನಲ್ಲ. ಗಿರಣಿಯಲ್ಲಿ ಗುಮಾಸ್ತನಾಗಿ ಒಂದು ಕೋಣೆಯಲ್ಲಿದ್ದು ಖಾನಾವಳಿಯಲ್ಲಿ ಊಟಮಾಡುತಿದ್ದೆ. ಗಿರಣಿಯ ಸಿಬಂದಿ ಖರ್ಚು ತಗ್ಗಿಸುವ ನೆವದಿಂದ ವ್ಯಾಲಿಕರು ನನ್ನಂಥ ಮುದುಕನಿಗೆ ಕೆಲಸವಿಲ್ಲವೆಂದರು. ಯೌವನದಲ್ಲಿ ಕಟ್ಟಿಟ್ಟ ಹಣವಿಲ್ಲ.

**ವ್ಯಕ್ತಿ:**—'ಸರಿ ಸರಿ! ನಿನ್ನಲ್ಲಿ ರಕ್ತಬಲವಿದ್ದಾಗ ನಿನ್ನಿಂದ ಕೆಲಸ ಮಾಡಿಸಿ ಈಗ ನಿನ್ನನ್ನು ಹೊರದೂಡಿಬಿಟ್ಟರೇ ಈ ದುಡ್ಡಿನ ಗುಲಾಮರು! ಪಾಪ!' ಎಂದು ಹೇಳುತ್ತಾ ತನ್ನ ಚೀಲದಲ್ಲಿದ್ದ ಚಿಲುಮೆಯನ್ನು ಹೊರತೆಗೆದು 'ಹುಕ್ಕೆ ಸೇದುವ ಅಭ್ಯಾಸವುಂಟೇ?' ಎಂದು ಕೇಳಿದನು. ಸೇಟಜೀಯು ತಲೆ ದೂಗಿದನು. ಆಗ ಗುಡಾಕೆಯ ಗುಳಿಗೆಯನ್ನು ಹೊರತೆಗೆದು ಚಿಲುಮೆಯ ತಗಡಿನ ಅಡಿಭಾಗಕ್ಕೆ ಹಚ್ಚಿ ತಗಡಿನ ಮೇಲೆ ಬೆಂಕಿಯ ಕೆಂಡಗಳನ್ನು ಹೊತ್ತಿಸಿ, ಒಂದೆರಡು ದಮ್ಮು ಸೇದಿ ಮುದುಕನ ಕೈಗೆ ಒಪ್ಪಿಸಿದನು. ಮುದುಕನು ಒಂದೆರಡು ದಮ್ಮು ಸೇದಿ ಹೊಗೆಯನ್ನು ಹೊರಬಿಡುತ್ತ ಕುಳಿತಿದ್ದನು. ಆಗ

**ವ್ಯಕ್ತಿ:**—ಈ ಸಾಯಂಕಾಲ ಎಲ್ಲಿ ತಂಗಬೇಕೆಂದಿರುವೆ?

**ಸೇಟಜೀ:**—ಎಲ್ಲಿ ಎಂದು ನನಗೆನೇ ಗೊತ್ತಿಲ್ಲ. ಇಲ್ಲಿಯ ಹಳ್ಳಿಗಳ ಪರಿಚಯವು ನನಗಿಲ್ಲ.

**ವ್ಯಕ್ತಿ:**—ಹಾಗಿದ್ದರೆ ನನ್ನ ಜತೆಯಲ್ಲಿ ಬಾ. ಈ ಭಿಕು ಪಂಡಿತನ ಪರಿಚಯವಿಲ್ಲದವರು ಇಲ್ಲಿಂದ ನಾಸಿಕದ ವರೆಗಿನ ಹಳ್ಳಿಯಲ್ಲಿ ಒಬ್ಬರೂ ಇಲ್ಲ. ಎಲ್ಲರೂ ನನ್ನನ್ನು ಸ್ವಾಗತಮಾಡುವವರೇ, ನನ್ನ ಚಿಕಿತ್ಸೆಯಿಂದ ಗುಣಹೊಂದಿದವರೇ. ನನ್ನ ಧನ್ವಂತರಿ ಪ್ರಯೋಗಕ್ಕೆ ಸಮಾನವಾದ ಔಷಧವು ಎಲ್ಲಿಯೂ ಇಲ್ಲ. ಎಲ್ಲಾ ಔಷಧಗಳು ನನ್ನ ಈ ಚೀಲದಲ್ಲಿವೆ. ಬೇಕು ಬೇಕಾದ ಗಿಡಮೂಲಿಕೆಗಳಿಂದ ತಯಾರಿಸಿದ ಔಷಧಗಳಿವು. ನನ್ನ ತಂದೆ ತಾತಂದಿರು ಇದೇ ವೃತ್ತಿಯಿಂದ ಜೀವಿಸಿದ್ದರು. ಅವರಲ್ಲಿದ್ದ ಈ ಓಲೆ ಪ್ರತಿಯಲ್ಲಿ ಎಲ್ಲಾ ಗಿಡಮೂಲಿಕೆಗಳ ಪ್ರಯೋಗವಿದೆ. ಅದರಲ್ಲಿ ಹೇಳಿದ ಒಂದು ಅತಿ ಅಮೂಲ್ಯವಾದ ಮೂಲಿಕೆ ಮಾತ್ರ ನನಗೆ ಇನ್ನೂ ದೊರೆಯು ಲಿಲ್ಲ. ಎಲ್ಲಿ ವಿಚಾರಿಸಿದರೂ ಅದನ್ನು ಕಂಡಿಲ್ಲವೆನ್ನುತ್ತಾರೆ. ಕೆಲವು ಮೂಢರು ಅದರ ಹೆಸರನ್ನು ಕೇಳಿ ನಗುತ್ತಾರೆ. ಅದು ಎಲ್ಲಾ ಬಗೆಯ ವಿಷಗಳಿಗೂ ಅಮೃತಸಂಜೀವಿನಿಯಾಗಿದೆ. ಅದರ ಒಂದಿಷ್ಟು ರಸವನ್ನು ಹಿಂಡಿ ತಾಮ್ರದ ತಗಡಿಗೆ ಹಚ್ಚಿ ಬೆಂಕಿಯಲ್ಲಿಟ್ಟರೆ ತಾಮ್ರದ ತಗಡು ಚಿನ್ನ ವಾಗುತ್ತದೆಂದು ಈ ಗ್ರಂಥದಲ್ಲಿದೆ. ಅದು ಇನ್ನೂ ಕೈಹತ್ತಲಿಲ್ಲ. ನಾನು

ಅದನ್ನು ಹುಡುಕುತ್ತಲೂ ರೋಗಪೀಡಿತರಿಗೆ ಚಿಕಿತ್ಸೆ ಮಾಡುತ್ತಲೂ ಪೂನೆ ಯಿಂದ ನಾಸಿಕದ ವರೆಗಿನ ಕಾಡುಗುಡ್ಡಗಳಲ್ಲಿ ವರ್ಷಕ್ಕೆ ಒಂದೆರಡು ಸಲ ಸುಳಿದಾಡುತಿದ್ದೇನೆ. ಈಗ ಹೊತ್ತು ಮುಳುಗಲಿಕ್ಕಾಯಿತು. ಇಲ್ಲಿ ಇನ್ನೂ ಕುಳಿತರೆ ಹುಲಿಬಾಯಿಗೆ ತುತ್ತಾಗುವೆವು. ನಿನ್ನ ಕಿಸೆಯಲ್ಲಿ ರಾಜನ ಗೊಂಬೆಯೇನಾದರೂ ಇದೆಯೇ!

**ಸೇಟಜೀ:**—ರಾಜನ ಗೊಂಬೆ!

**ಭಿಕು ಪಂಡಿತ:**—ಎಲೆ ಮಂಕೇ! ರಾಜನ ಗೊಂಬೆ ಅಂದರೆ ಚಿತ್ರ ವಲ್ಲ ನೋಡು. ರಾಜನ ಮುದ್ರೆ ಇರುವ ನಾಣ್ಯವಿದೆಯೊ ಎಂದೆ.

**ಸೇಟಜೀ:**—ಹಾಗೊ? ನನ್ನಲ್ಲಿ ಒಂದೆರಡು ರೂಪಾಯಿ ಮತ್ತು ಪುಡಿಕಾಸು ಇದೆ.

**ಭಿಕು:**—ಇದು ನಾಸಿಕಕ್ಕೆ ಹೋಗಲು ನಿನಗೆ ಸಾಕಾದೀತೇ?

**ಸೇಟಜೀ:**—ಅದು ಖರ್ಚಾದರೆ ತಿರುಪೆ ಎತ್ತುತ್ತೇನೆ.

**ಭಿಕು:**—'ಸರಿ ಸರಿ, ನಿನ್ನಿಷ್ಟವಿದ್ದಂತೆ ಮಾಡು. ಈ ರಾತ್ರೆ ನನ್ನ ಬಹು ಕಾಲದ ಪರಿಚಿತಿಯ ಗಂಗಾಬಾಯಿಯ ಖಾನಾವಳಿಗೆ ಇಲ್ಲೆ ಹೋಗೋಣ. ನನ್ನ ಜತೆಯಲ್ಲಿ ಬಂದ ನನ್ನ ಗೆಳೆಯನೆಂದರೆ ಗಂಗಾಬಾಯಿಯು ದುಡ್ಡು ಇಸುಕೊಳ್ಳದೆ ನಿನಗೆ ಒಳ್ಳೆ ಊಟ ಬಡಿಸುವಳು, ಈಗ ಹೊರಡು' ಎಂದನು. ಸೇಟಜಿಯು ಕುಳಿತಲ್ಲಿಂದ ಮೆಲ್ಲನೆ ಎದ್ದನು. ಆದರೆ ನಡೆದು ಅಭ್ಯಾಸ ವಿಲ್ಲದವನಾದ್ದರಿಂದ ಮೊಣಕಾಲುಗಂಟು ಬಿಗಿದಂತಾಗಿ ಫಕ್ಕನೆ ನೆಲಕ್ಕೆ ಉರುಳುವಂತಿದ್ದನು. ಭಿಕು ಪಂಡಿತನು ಅವನಿಗೆ ಆಧಾರಕ್ಕೆ ಕೈಗೊಟ್ಟು ನಿಲ್ಲಿಸಿ 'ಇಗೊ ನಿನಗೆ ಹಳ್ಳಿ ನಡೆದು ಅಭ್ಯಾಸವಿಲ್ಲ, ಖಂಡಿತ. ಈ ಸೀಸೆ ಯಲ್ಲಿರುವ ಪಾನಕವನ್ನಿಷ್ಟು ಕುಡಿ. ಅದು ಮಾದಕವಲ್ಲ. ದೇಹ ಪುಷ್ಟಿಗೆ ಉತ್ತಮವಾದ ಪಾನಕ. ಅದನ್ನು ಕುಡಿಯುತಿದ್ದುದರಿಂದಲೇ ಸುಮಾರು ನಿನ್ನಷ್ಟೆ ಪ್ರಾಯವಾದ ನನ್ನ ಮೀಸೆ ಕೂಡಾ ನರೆಯಲಿಲ್ಲ. ಮೈಗೆ ಸುಕ್ಕು ಕೂಡಾ ಬೀಳಲಿಲ್ಲ. ಧಾತುಪುಷ್ಟಿಗೆ ಪರಮೌಷಧ, ಕುಡಿ, ಬೇಕಷ್ಟು ಕುಡಿ!' ಎಂದು ಸೀಸೆಯನ್ನು ಆತನ ಕೈಗೆ ಇತ್ತನು. ವೃದ್ಧ

ಸೇಟನು ಒಂದು ಗುಟುಕನ್ನು ಕುಡಿಯುತ್ತಲೆ ಆತನಲ್ಲಿ ರಕ್ತಸಂಚಾರದ ವೇಗವು ಹೆಚ್ಚಿತು. ಹೊಸ ಹುರುಪು ಬಂತು. ಕೈಯಲ್ಲಿದ್ದ ಕೋಲನ್ನು ಊರುತ್ತ ಇಬ್ಬರೂ ಹೊರಟರು. ಅಲ್ಲಲ್ಲಿ ಬಹಳ ಏರುತಗ್ಗುಗಳಿರುವಲ್ಲಿ ಮುದುಕನಿಗೆ ಕೈಗೊಟ್ಟು ಪಂಡಿತನು ಒಳ್ಳೆ ದಿಟ್ಟತನದಿಂದ ನಡೆಯುತಿದ್ದನು. ಹೀಗೆ ಹೋಗುವಾಗ ಸೇಟಜಿಯು ಒಂದು ಏರಿನ ತುದಿಯಲ್ಲಿ ಸ್ವಲ್ಪ ನಿಂತು ಶುದ್ಧ ಗಾಳಿಯನ್ನು ಸೇವಿಸುತ್ತ ಸುತ್ತಲಿನ ಅಂದವಾದ ನೋಟವನ್ನು ನೋಡುತ್ತ 'ಮಹಾರಾಯಾ! ನನ್ನ ಪರಿಚಯು ನಿನಗಿಲ್ಲ. ನನ್ನ ಮೇಲೆ ನಿನಗೆ ಇಷ್ಟು ಕನಿಕರ ಹುಟ್ಟಲು ಕಾರಣವೇನು? ನೀನು ಏಕೆ ನನಗೆ ಉಪ ಕಾರ ಮಾಡಲಿರುವೆ? ನಾನು ಜೈಲಿನಿಂದ ಪರಾರಿಯಾದ ದೊಡ್ಡ ಕೆ. ಡಿ. ಇರಬಹುದು. ದರೋಡೆಕಳ್ಳನಿರಬಹುದು. ಕೊಲೆಪಾತಕಿಯಿರಬಹುದು.'

**ಭಿಕು:**—ಏನು? ನೀನು ಜೈಲಿನಿಂದ ಪರಾರಿಯಾದ ಕೆ. ಡಿ.ಯೇ? ಕೊಲೆಪಾತಕಿಯೇ? ಚಿಕಿತ್ಸೆ ಮಾಡಬಲ್ಲ ನನಗೆ ಮನುಷ್ಯರ ಪರೀಕ್ಷೆ ಗೊತ್ತಿಲ್ಲ ವೆಂದು ನೆನಸುವೆಯಾ? ನೀನು ಕೆ. ಡಿ.ಯೂ ಅಲ್ಲ, ದರೋಡೆಕಳ್ಳನೂ ಅಲ್ಲ, ಕೊಲೆಪಾತಕಿಯೂ ಅಲ್ಲವೆಂದು ನಾನು ಒಲೆಯಲ್ಲಿ ಕೈಯಿಟ್ಟು ಪ್ರಮಾಣ ನುಡಿದೇನು. ನನ್ನ ಬುದ್ಧಿಯ ಸಾಮರ್ಥ್ಯ ಇನ್ನೂ ನೀನು ಅರಿತಿಲ್ಲ. ಒಮ್ಮೆ ನಾನು ಹುಡುಕುವ ಅಮೂಲ್ಯ ಮೂಲಿಕೆಯು ಸಿಗಲಿ. ಆ ಮೇಲೆ ನೋಡು—

**ಸೇಟಜೀ:**—(ನಸುನಗುತ್ತ) ಆ ಮೇಲೆ ನೀನು ಕೋಟ್ಯಾಧೀಶನೇ ಆಗುವೆ, ಅಷ್ಟೇಕೆ ಒಂದು ರಾಜ್ಯದ ರಾಜನೂ ಆಗಬಹುದು.

ಭಿಕು ಪಂಡಿತನು ತನ್ನನ್ನು ಈ ಮುದುಕನು ಗೇಲಿಮಾಡುತ್ತಾನೊ ಎಂದು ಒಮ್ಮೆಗೆ ಕಣ್ಣು ಕೆರಳಿಸಿ ಆತನನ್ನು ದಿಟ್ಟಿಸಿದನು. ಆದರೆ ವೃದ್ಧನ ದೃಷ್ಟಿಯು ಕದಲಲಿಲ್ಲ. ಆಗ ಪಂಡಿತನು ಶಾಂತನಾಗಿ

'ಇಗೊ ಶ್ರೀಮಂತನಾಗಬೇಕೆಂದು, ರಾಜನಾಗಬೇಕೆಂದು ನನ್ನ ಮಹತ್ವಾಕಾಂಕ್ಷೆಯಲ್ಲ. ಯಾಕೆಂದರೆ ಅಂಥವರು ಪರಮಸುಖಿಗಳೆಂದು ಭಾವಿಸಿದೆಯಾ? ಸಾಮಾನ್ಯರು ಮಾಡಿದರೆ ಅವಹೇಳನೆಗೆ ಗುರಿಯಾಗುವ ದುಷ್ಟಕಾರ್ಯಗಳಲ್ಲಿ ನಿದಾಕ್ಷಿಣ್ಯದಿಂದ ನಿರ್ಲಜ್ಜೆಯಿಂದ ಅವರು ಪ್ರವೃತ್ತ

ರಾಗುತ್ತಾರೆ. ಅವರು ಇಂಥ ನಾಚಿಕೆಗೇಡು ಕೆಲಸಗಳ ಬಗ್ಗೆ ತಮ್ಮ ದುಡ್ಡಿನ ಬಲದಿಂದ ಮಾಡುವ ಪ್ರಾಯಶ್ಚಿತ್ತದಿಂದ ತಪ್ಪಿಸಿಕೊಳ್ಳಬಹುದು. ಬಾಹ್ಯ ರೀತಿಗೆ ತುಂಬಾ ಸುಖಿಗಳೆಂದು ತೋರಿಸಿಕೊಳ್ಳಬಹುದು. ಜನರಲ್ಲಿ ಅಂಥ ನಂಬಿಕೆಯನ್ನು ಹುಟ್ಟಿಸಲೂ ಬಹುದು. ಆದರೆ ನಿಜವಾಗಿಯೂ ಅವರ ಅಂತರ್ಯದ ಆಳವನ್ನು ನೋಡಿದರೆ ತಮ್ಮ ಗುಟ್ಟು ಎಂದಿಗೆ ಬಯಲಾಗು ವುದೊ ಎಂಬ ಸಂಶಯವು ಹೂವಿನ ನಾಳದ ಆಳದಲ್ಲಿರುವ ಕೀಟದಂತೆ ಅವರನ್ನು ಒಳಗೊಳಗೇ ಕಾಡುತ್ತಿರುವುದು. ಅವರಿಗೆ ಇಹದಲ್ಲಿ ತೃಪ್ತಿ ಇಲ್ಲ; ಪರದಲ್ಲಿ ಸುಖವಿಲ್ಲ. ಈ ಕೋಟ್ಯಾಧೀಶರು ಮೋಟರುಗಳಲ್ಲಿ ಓಡಾಡು ತ್ತಾರೆ ಎಂಬದರಿಂದ ಅವರಿಗೆ ಸುಖವುಂಟೆಂದು ತಿಳಿದೆಯಾ? ಕೆಲವು ದಿನಗಳ ಹಿಂದೆ ಇದೇ ದಾರಿಯಲ್ಲಿ ಕೆಲವು ತರುಣರು ಮೋಟರಿನಲ್ಲಿ ಪ್ರಯಾಣ ಮಾಡುತಿದ್ದರು. ಆಗ ಫಕ್ಕನೆ ಫಿರಂಗಿ ಸುಟ್ಟ ಶಬ್ದವಾಯಿತು. ಮೋಟರಿನ ಟಾಯರಿಗೆ ತೂತು ಆಗಿತ್ತು. 'ಶೋಫರ'ನು ಮೋಟರನ್ನು ನಿಲ್ಲಿಸಿ ಹೊಸ ಟಾಯರನ್ನು ಜೋಡಿಸಲಿಕ್ಕೆ ಅಣಿಮಾಡುತಿದ್ದನು. ತರು ಣರು ಕೆಳಗೆ ದಾರಿಯ ಇಕ್ಕಡೆಯ ಕಾಡನ್ನು ನೋಡುತ್ತ ಬೆರಗಾಗಿ ನಿಂತಿ ದ್ದರು. ಆಗ ದೂರದಿಂದ ಇಂಪಾದ ಹಾಡು ಕೇಳಿಸಿತು. 'ಈ ಕಾಡಿ ನಲ್ಲಿ ಹಾಡುವವರು ಯಾರು' ಎಂದು ಆ ತರುಣರಲ್ಲೊಬ್ಬನು ಕೇಳಿದನು. ನಾನು ನಸುನಕ್ಕು 'ಅದು ಕೋಗಿಲೆ' ಎಂದೆನು. 'ಕೋಗಿಲೆ! ಕೋಗಿಲೆ ಇಷ್ಟು ಚೆನ್ನಾಗಿ ಹಾಡುತ್ತಿದೆಯೇ?' ಎನ್ನುವಷ್ಟರಲ್ಲಿ ಆ ಹಕ್ಕಿಯು ಅವರೆದು ರಿಗೆ ಹಾರಿಹೋಯಿತು. ಅದೇ ಕೋಗಿಲೆ ಎಂದೆ. 'ನಾವು ಪುಸ್ತಕದಲ್ಲಿ ಮಾತ್ರ 'ಕೋಗಿಲೆಯ ಹಾಡು' ಎಂದು ಓದಿದ್ದೆವು' ಎಂದರು. ಹ! ಹ!! ಹ!!! ಇಂಥ ಮೂರ್ಖರಿವರು! ಬಂಡಿಗಟ್ಲೆ ಪುಸ್ತಕಗಳನ್ನು ಮುಗುಚ್ಯಾರು. ಸೃಷ್ಟಿಯ ಪರಿಚಯ ಒಂದಿಷ್ಟೂ ಇಲ್ಲ. ತಾವೇ ಕಲ್ಪಿಸಿದ ಕೃತಕ ಸುಖದಲ್ಲಿ ಓಲಾಡು ತ್ತಾರೆ, ಹಂದಿಯು ಕೆಸರಿನಲ್ಲಿ ಓಲಾಡಿದಂತೆ. ಇವರು ಕಣ್ಣಿದ್ದು ಕುರು ಡರು, ಬಾಯಿಯಿದ್ದು ಮೂಕರು, ಕಿವಿ ಇದ್ದು ಕಿವುಡರು. ಇವರು ಒಂದು ಗೇಣು ಹೊಟ್ಟೆಯ ತೃಪ್ತಿಗಾಗಿ ಏನೇನು ನೂತನ ಹಂಚಿಕೆ ಮಾಡುತ್ತಾರೆ? ಹೀಗಾಗಿ ಇವರ ಹೆಸರಿನ ಅಕ್ಷರಗಳಷ್ಟು ಸಂಖ್ಯೆಯ ರೋಗಗಳು ಇವರ ದೇಹದಲ್ಲಿ ವ್ಯಾಪಿಸುತ್ತವೆ. ಇವರು ಅನ್ಯಾಯದಿಂದ ಮಾಡಿದ ದುಡ್ಡನ್ನು

ಸುಲಿವುದಕ್ಕೆ ತಕ್ಕ ಆ ವೈದ್ಯರು. ತಮ್ಮ ಹೆಸರುಗಳ ಹಿಂದೆ ಇಂಗ್ಲಿಷ ಅಕ್ಷರ ಮಾಲೆಯಿಂದ ಆದಷ್ಟು ಹೆಚ್ಚು ಅಕ್ಷರಗಳನ್ನು ಹಚ್ಚಿಸಿಕೊಳ್ಳುತ್ತಾರೆ. ಅವೇ ಅಕ್ಷರಗಳನ್ನು ಬಗೆಬಗೆಯಿಂದ ಜೋಡಿಸಿ ಹೊಸ ರೋಗಗಳನು ಕಲ್ಪಿಸಿ ಹೆಸರಿಡುತ್ತಾರೆ. ತಮ್ಮ ಪೂರ್ವಜರು ಪಿತ್ಥ, ವಾತ, ಕಫಗಳ ನ್ಯೂನಾಧಿಕ್ಯದಿಂದಲೆ ರೋಗಗಳೆಲ್ಲ ಹುಟ್ಟುತ್ತವೆಂದು ನಿರ್ಧರಿಸಿ, ಅವುಗಳ ಉಪಶಮನಕ್ಕೆ ಬೇಕುಬೇಕಾದ ಗಿಡಮೂಲಿಕೆಗಳಿಂದ ಔಷಧಗಳನ್ನು ತಯಾರಿಸುತಿದ್ದರು. ಒಂದಾಣೆ ಖರ್ಚಿನಿಂದ ತಯಾರಾಗುವ ಅವರ ಔಷಧಿಯನ್ನು ಬದಿಗಿಟ್ಟು ವೈದ್ಯರಿಗೆ 10 ರೂಪಾಯಿ, ಔಷಧಕ್ಕೆ 10 ರೂಪಾಯಿ ಯಂತೆ ವ್ಯಯಿಸಿ ಕೃತಕೃತ್ಯರಾಗುವವರು ಈಗಿನ ಸುಧಾರಿತರು. ಎಲ್ಲಿ ನೋಡಿದರೂ ಸ್ವಾರ್ಥ, ಎಲ್ಲಿ ನೋಡಿದರೂ ಸುಲಿಗೆ. ಒಂದಿಷ್ಟು ನಿಸ್ವಾರ್ಥ ವಿದ್ದರೆ ಅದು ಸ್ತ್ರೀಯರಲ್ಲಿ ಮಾತ್ರವಿದೆ.

**ಸೇಟಜೀ:**—ಸ್ತ್ರೀಯರಲ್ಲಿಯೂ ಸ್ವಾರ್ಥಪರರಾದವರು ತುಂಬಾ ಇದ್ದಾರೆ.

**ಭಿಕು:**—'ಸ್ವಾರ್ಥಪರರಾದ ಸ್ತ್ರೀಯರು! ನಿಜ! ನಾನು ಮರೆತೆ, ನೀನು ದೊಡ್ಡ ಪೇಟೆಪಟ್ಟಣಗಳಲ್ಲಿ ಕಾಲಕಳೆದವನೆಂದು. ಅವರು ಸ್ತ್ರೀಯರಲ್ಲ, ಬಣ್ಣದ ಗೊಂಬೆಗಳು. ಮನೆಯ ವೈವಾಟು, ಮಕ್ಕಳ ಆರೈಕೆ ಇವನ್ನೆಲ್ಲ ದುಡ್ಡಿನ ಆಸೆಗೆ ಕೆಲಸಮಾಡುವ ನವುಕರರಿಗೆ ಒಪ್ಪಿಸಿ, ನಾಲ್ಕೆಂಟು ಜನರು ಕೂಡಿದ್ದಲ್ಲಿ ಸಿಕ್ಕಿದವರ ಮೇಲೆ ಮತ್ಸರದಿಂದ ಸುಳ್ಳು ಕಲ್ಪನೆಮಾಡಿ, ಲಾಂಛನದ ಕೊಳೆನೀರನ್ನು ಉಗುಳುವವರು. ಆ ಕೊಳೆನೀರಿನಿಂದ ತಮ್ಮ ಸ್ವಂತ ಬಾಯಿ ನಾರುವುದೆಂಬ ಅರಿವು ಕೂಡಾ ಅವರಲ್ಲಿ ಬರುವುದಿಲ್ಲ. ಅವರು ಮನುಷ್ಯಜನ್ಮವನ್ನು ಪಡೆದರೂ ಪಶುವೃತ್ತಿಯನ್ನು ಅವಲಂಬಿಸಿ ಇನ್ನೊಂದು ಜನ್ಮದಲ್ಲಿ ಕೂಡಾ ಯಾತನೆಗೆ ಸಂಚಯುವನ್ನು ಮಾಡಿಡುವವರು. ಅವರನ್ನು ಕುರಿತು ನಾನು ಹೇಳಿದ್ದಲ್ಲ. ಹಳ್ಳಿಪಳ್ಳಿಗಳಲ್ಲಿ ತಮ್ಮ ನಿದ್ದೆಯ ಸಮಯುವನ್ನು ಬಿಟ್ಟು ಉಳಿದ ಸಮುಯದಲ್ಲಿ ತಮ್ಮ ಮತ್ತು ತಮ್ಮ ನೆರೆಯವರ ಹಿತಚಿಂತನೆಯಿಂದ ಪೇಚಾಡುವ ಸ್ತ್ರೀಮಣಿಗಳನ್ನು ಕುರಿತು ಹೇಳಿದೆ. ಈ ದಿನ ನಾವು ಸೇರುವ ಗಂಗೂಬಾಯಿಯ ಮನೆಯೆಂದರೆ ಅಂಥದ್ದು.

ಅವಳು ಬಡವೆ, ಬಾಲವಿಧವೆ. ಆದರೆ ತನ್ನ ಧರ್ಮವನ್ನು ಕಾಪಾಡಿಕೊಂಡು, ಬಂದವರಿಗೆ ಅನ್ನವಿಕ್ಕಿ ಬಹಳ ಕಷ್ಟದಿಂದ ಜೀವನ ನಡಿಸುವ ಮುದುಕಿ. ನೀನೆ ಅವಳ ಉದಾರಬುದ್ಧಿಯನ್ನು ಕಾಣಲಿರುವೆ.' ಹೀಗೆ ಸಲ್ಲಾಪ ಮಾಡುತ್ತ ಅವರಿಬ್ಬರೂ ಗಂಗೂಬಾಯಿಯ ಖಾನಾವಳಿಯ ಅಂಗಳಕ್ಕೆ ಬಂದರು.

---

## ೬ನೆ ಅಧ್ಯಾಯ

## ಗಂಗೂಬಾಯಿಯ 'ಖಾನಾವಳಿ'

ಕತ್ತಲು ಕವಿದಿತ್ತು. ಭಿಕುಪಂಡಿತನೂ ಸೇಟಜೀಯೂ ಅಂಗಳಕ್ಕೆ ಬಂದರು. ಭಿಕುಪಂಡಿತನು ಏರಿಸಿದ ಸ್ವರದಿಂದ 'ಗಂಗೂಬಾಯಿ! ಒಬ್ಬಿಬ್ಬ ರಿಗೆ ಇಲ್ಲಿ ರಾತ್ರೆ ಉಳಿಯಲಿಕ್ಕೆ ಜಾಗ ಸಿಕ್ಕೀತೇ?' ಎಂದು ಕೇಳಿದನು.

**ಗಂಗೂ:**—ಜನ ನೋಡಿ ಹೇಳಿಯೇನು. ಖಾಲಿಪೋಲಿ ದಾರಿ ಹೋಕರಿಗೆ ನಮ್ಮ ಮನೆಯಲ್ಲಿ ಎಡೆ ಸಿಗಲಾರದು, ಕಂಡಿಯಾ?

**ಭಿಕು:**—'ಓಹೊ ಸರಿ ಸರಿ. ನನ್ನನ್ನಂತೂ ನೀನು ಬಲ್ಲೆ. ಈ ಮುದುಕನು ನನ್ನೊಬ್ಬ ಪರಿಚಿತನು. ಗಿರಣಿ ಮ್ಹಾಲಿಕರು ಹಾಕಿದ ಮಿತಿಗಿಂತಲೂ ಹೆಚ್ಚು ಆಯುಷ್ಯ ಪಡೆದು ತಪ್ಪು ಮಾಡಿದವನು. ಮುಂಬಯಿ ಯಿಂದ ನಾಸಿಕಕ್ಕೆ ಕಾಲುನಡೆಯಾಗಿ ಹೋಗಲು ಉಪಕ್ರಮಿಸಿದ್ದಾನೆ. ಆತನಿಗೆ ಅಲ್ಲೊಬ್ಬ ಪರಿಚಿತನು ಇದ್ದಾನಂತೆ! ಆದರೆ ಅಲ್ಲಿಗೆ ಹೋಗುವ ಮೊದಲೆ ಅವನಿಗೆ ಯಮನ ಚೀಟು ಬರುತ್ತದೊ ಏನೊ!' ಎಂದುದನ್ನು ಕೇಳಿ ಗಂಗೂಬಾಯಿ ಹೊಸ್ತಿಲಲ್ಲಿ ನಿಂತು ನೋಡಿ 'ಈ ಹಣ್ಣುಮುದುಕನಿಗೆ ನಾಸಿಕದ ಪಯಣವೇ? ಆಗಲಿ. ಇಗೊ ಅಜ್ಜಾ! ಅಲ್ಲೆ ತಂಬಿಗೆಯಲ್ಲಿ ನೀರಿದೆ. ಕೈಕಾಲು ತೊಳೆದುಕೊ. ಒಳಕ್ಕೆ ಬಂದು ಒಂದಿಷ್ಟು ಊಟಮಾಡು.'

**ಸೇಟಜೀ:**—ನನಗೆ ಹೊಟ್ಟೆಹಸಿವು ಅಷ್ಟು ಬಲವಾಗಿಲ್ಲ.

**ಗಂಗೂ:**—ಓಹೊ! ಅರೆಉಪವಾಸದಿಂದ ಜೀರ್ಣಶಕ್ತಿಯೆ ತಗ್ಗಿದೆ ಎಂತ ಕಾಣುತ್ತದೆ. ಆದರೆ ಇಲ್ಲಿ ಬಂದವರು ಯಾರೂ ಉಪವಾಸ ಮಲಗಕೂಡದು.

**ಭಿಕು:—** ಅಮ್ಮಾ! ಒಂದೆರಡು ದಿನಗಳ ಊಟದ ಬಗ್ಗೆ ಹಣ ಕೊಡಲು ಆತನ ಬಳಿಯಲ್ಲಿ ಬೊಂಬೆ ರೂಪಾಯಿ ಇದೆಯಂತೆ.

**ಗಂಗೂ:—** ಅಯ್ಯೋ! ಹಾಗೆ ಎಲ್ಲರ ಬಳಿಯಲ್ಲಿಯೂ ಹಣ ಕಿತ್ತು ಯಾರಿಗೋಸ್ಕರ ನಾನು ಕಟ್ಟಿಡಲಿ! ಏನೊ ಈ ಜೀವ ಬಿದ್ದುಹೋಗುವ ವರೆಗೆ ಕಾಲಕಳೆದರಾಯಿತು; ಅಷ್ಟೆ. ಅವನು ದುಡ್ಡು ಕೊಡುವುದಿದ್ದರೆ ಕೊಡಲಿ, ಇಲ್ಲವಾದರೆ ಬಿಡಲಿ.

**ಭಿಕು:—** ಸೇಟಜೀಯ ರಟ್ಟೆಯನ್ನು ಒತ್ತಿ ಆತನನ್ನು ಹಿಂದಕ್ಕೆ ಎಳೆದು 'ನಾನು ಆಗಲೇ ಹೇಳಿಲ್ಲವೆ ಇವಳು ಎಷ್ಟು ಕನಿಕರವುಳ್ಳ ಮುದುಕಿ ಎಂದು? ಈಗ ನೀನು ಒಳಕ್ಕೆ ಹೋಗಿ ಊಟಮಾಡಿ ಬಾ. ನಾನು ರಾತ್ರೆ ಊಟಮಾಡುವುದಿಲ್ಲವೆಂದು ಅವಳಿಗೆ ಗೊತ್ತು. ಇಲ್ಲಿ ಜಗಲಿಯಲ್ಲಿ ಸೇರಿದವರೆಲ್ಲ ನನ್ನ ಪರಿಚಿತರು. ಅವರೊಡನೆ ಕೊಂಚ ಸಮಯದ ವರೆಗೆ ಸಲ್ಲಾಪ ನಡಿಸುತ್ತ ಕಾಲಕಳೆಯುವೆನು' ಎಂದು ಪಂಡಿತನು ಜಗಲಿ ಹತ್ತಿದನು. ಮುದುಕನು ಕೈಕಾಲು ತೊಳೆದು ಊಟಕ್ಕೆಂದು ಒಳಕ್ಕೆ ಹೋದನು.

ಅಲ್ಲಿ ಜಗಲಿಯ ಮೇಲೆ ನಾಲ್ವರು ಹುಕ್ಕೆಯನ್ನು ಸೇದುತ್ತಲೂ ಇಸ್ಪೀಟು ಆಡುತ್ತಲೂ ಕುಳಿತಿದ್ದರು. ಅವರಿಗೆ ಭಿಕುಪಂಡಿತನು ಬಹಳ ಕಾಲದ ಪರಿಚಿತನು. 'ಏನು, ಭಿಕುಭಾಯಿ! ನಿನ್ನೊಂದಿಗೆ ಬಂದವನು ನಿನ್ನ ಮುದಿ ಅಪ್ಪನೆ?' ಎಂದು ಒಬ್ಬನು ನಸುನಗುತ್ತ ಕೇಳಿದನು.

**ಭಿಕು:—** 'ಎಂದೊ ಚಟ್ಟದ ಮೇಲೆ ಮಲಗಿದವನನ್ನು ಎಚ್ಚರಿಸುವ ಔಷಧವು ನನ್ನ ಚೀಲದಲ್ಲಿಲ್ಲ. ಅವನು ನನ್ನೊಬ್ಬ ಗೆಳೆಯನು; ಮುಂಬಯಿ ಯವನು. ಮುಂಬಯಿಯಲ್ಲಿ ಗಿರಣಿಯಲ್ಲಿ ಗುಮಾಸ್ತನಾಗಿದ್ದನಂತೆ. ಈಗ ಮುದಿ ಗೊಡ್ಡಾಕಳಾಗಿದ್ದಾನೆ; ಹುಲಿ ತಿನ್ನಲಿ ಎಂದು ಕಾಡಿಗೆ ಅಟ್ಟಿದ್ದಾರೆ. ಒಂಟಿಯಾಗಿಯೇ ಈ ದಾರಿಯಲ್ಲಿ ಬರುತಿದ್ದನು. ನಾಸಿಕ ದಲ್ಲಿ ತನ್ನೊಬ್ಬ ಗೆಳೆಯನನ್ನು ಹುಡುಕಿ ಹೋಗುತ್ತಾನಂತೆ. ಹುಲಿಗೆ ಅವನ ಮುದಿ ಮಾಂಸ-ಮೂಳೆಗಳು ರುಚಿಸಲಾರವು ಎಂದು ನೆನಸಿ ಬದುಕುವಷ್ಟು ಕಾಲ ಬದುಕಲಿ ಪಾಪ, ಎಂದು ಇಲ್ಲಿ ಕರೆದು ತಂದೆ.' ಎಂದನು. ಆಗ

ಅಲ್ಲಿ ಕುಳಿತವರ ಮನಸ್ಸಿನಲ್ಲಿ ಮುದುಕನ ಕಡೆಗೆ ದಯೆ ಹುಟ್ಟಿತು. ಅವರಲ್ಲಿ ಒಬ್ಬನು 'ಈಗ ನನ್ನ ಸ್ಥಿತಿಯೂ ಹಾಗೆಯೇ ಆಗಿದೆ. ನನ್ನ ಕೈಕಾಲುಗಳಲ್ಲಿಯೂ ಮೊದಲಿನಷ್ಟು ಬಲವಿಲ್ಲ. ತಿಂಡಿಗೆ ಸರಿಯಾಗಿ ಸಿಗುವುದಿಲ್ಲ. ನಮ್ಮ ಊರ ಗೌಡರೂ ನನ್ನನ್ನು ಅವರ ಮನೆಯಿಂದ ಹೊರಗೆ ಹಾಕಿದ್ದಾರೆ. ನಾನು ಯಾವಾಗಲೂ ಕದಿಯುತ್ತೇನೆಂದು ಅವರ ಆರೋಪ. ಅವರ ಮನೆಯಲ್ಲಿ ಬಿಟ್ಟೇ ಹೊತ್ತು ನನಗೆ ಸಾಕಷ್ಟು ಖರ್ಚಿಗೆ ಅವರು ಕೊಡದಿದ್ದರೆ ನಾನೇನು ಮಾಡಲಿ? ಈ ಲೋಕದಲ್ಲಿ ಸಭ್ಯನಾಗಿ ಜೀವನ ಕಳೆಯುವುದೇ ಕಷ್ಟವಾಗಹತ್ತಿದೆ, ನೋಡು, ಭಿಕುಭಾಯಿ!

**ಭಿಕು:**—ಎಲೊ ಸಾವಳ್ಯಾ! ನೀನು ಸಭ್ಯನಾಗುವುದು ಚಟ್ಟದ ಮೇಲೇರಿದಾಗಲೇ! ನಿನ್ನ ಹೆಸರನ್ನೂ ಆ ಮುದುಕನ ಹೆಸರನ್ನೂ ಒಂದೇ ಉಸುರಿನಿಂದ ಉಚ್ಚರಿಸಲಾಗದು. ಆ ಮುದುಕನು ನಿಜವಾಗಿಯೂ ಸಭ್ಯನು; ಸುಶಿಕ್ಷಿತನು; ವಿದ್ಯಾವಂತನು ಎಂದು ಕಾಣಿಸುತ್ತಾನೆ.

**ಸಾವಳ್ಯಾ:**—'ವಿದ್ಯಾವಂತನೆಂದೆಯಾ! ಕೊನೆಗೆ ಅಂಥವರ ಗತಿಯೂ ತಿರುಪೆ ಎತ್ತುವುದೇ ಅಲ್ಲವೇ? ಆ ವಿದ್ಯೆಯೂ ಬೇಡ, ಈ ತಿರುಪೆಯೂ ಬೇಡ.' ಆಗ ಅಲ್ಲಿದ್ದವರಲ್ಲೊಬ್ಬನಾದ ದಾದೂಭಾಯಿ-ಒಬ್ಬ ಕೃಷಿಕನು-

'ನಾನು ಹಾಗೆಯೇ ಅನ್ನುತ್ತೇನೆ. ನನ್ನೊಬ್ಬ ಮಗಳು ಈಗ ಒಂದೆರಡು ವರ್ಷಗಳಿಂದ ಇಲ್ಲಿಯ ಹಳ್ಳಿಸಾಲೆಯಲ್ಲಿ ಕಲಿಯುತ್ತಾಳೆ. ಪೇಟೆಸಾಲೆ ನೋಡಲೇ ಇಲ್ಲ. ಆದರೂ ಅವಳ ಪೋಷಾಕು, 'ಫೆಶನ್' ಇದಕ್ಕೆಲ್ಲ ಮಾಡಿದ ಖರ್ಚನ್ನು ಉಳಿಸಿದ್ದರೆ ಚಲೊ ಒಂದು ಜೋಡಿ ಎತ್ತನ್ನಾದರೂ ಕೊಂಡುಕೊಳ್ಳಬಹುದಿತ್ತು. ಈ ಹಾಳು ಬಡದ ವಿದ್ಯೆ! ವಿದ್ಯೆ! ಈ ವಿದ್ಯೆಯಿಂದ ಮಕ್ಕಳು ಮಂಗಗಳಾಗುತ್ತವೆ; ಉಪಾಧ್ಯಾಯರು ಜಾಂಬವರಾಗುತ್ತಾರೆ.'

ಇಷ್ಟು ಮಾತುಗಳು-ನಡನಡುವೆ ಹುಕ್ಕೆಯ ಸೇವನೆ-ನಡೆಯುವಷ್ಟರಲ್ಲಿ ಸೇಟಜಿಯು ಊಟ ಮುಗಿಸಿ ಕೈತೊಳೆದು ಹೊರಗೆ ಬಂದು ಗೋಡೆಗೆ ಒರಗಿ ಕುಳಿತಿದ್ದನು. ಅವನನ್ನು ಕಂಡು ದಾದೂಭಾಯಿ 'ಅಜ್ಜಯ್ಯ! ನೀನು ಮುಂಬಯಿಯಲ್ಲಿ ಗಿರಣಿಯಲ್ಲಿ ಕೆಲಸ ನೋಡುತಿದ್ದೆಯಾ?'

**ಸಾವಳ್ಯಾ:**—ಅಲ್ಲೇನು ಕಾಯೊಂದು ದುಡ್ಡೊಂದು ಎಂದು ಬರಿಯುವ ಕೆಲಸವೇ?

**ದಾದೂ:**—ಹೋಗೊ ಸಾವಳ್ಯಾ! ಅದೇನು ಅಂಗಡಿ ಲೆಕ್ಕ ಎಂದು ತಿಳುಕೊಂಡೆಯಾ?

**ಸಾವಳ್ಯಾ:**—ಅಜ್ಜಾ ಅಲ್ಲಿಂದ ನಿನ್ನನ್ನು ಹೋಗು ಎಂದರೇ? ಈಗ ನಿನ್ನ ಪ್ರಾಯವೆಷ್ಟು?

**ಸೇಟಜೀ:**—ಈಗ 60 ದಾಟಿತು.

**ಸಾವಳ್ಯಾ:**—'ಪಾಪ! ನಿನಗೆ ಈಗ ಕೆಲಸವಿಲ್ಲವೇ? ನಾಸಿಕದ ಕಡೆಗೆ ಹೊರಟಿದ್ದಿಯಾ?' ಎನ್ನುವಾಗ ಅವನೊಂದಿಗೆ ಅಲ್ಲಿ ಕುಳಿತ ಇತರರ ಅಶಿಕ್ಷಿತ ಹೃದಯವೂ ಕರಗಹತ್ತಿತ್ತೆಂದು ಕಂಡಿತು. ಅಷ್ಟರಲ್ಲಿ ಇನ್ನೊಬ್ಬನು ದೊಡ್ಡ ಹೆಜ್ಜೆಗಳನ್ನು ಇಡುತ್ತ 'ಹುಕ್ಕೆಗೆ ಒಂದು ಕೈ, ಇಸ್ಪೀಟಿಗೆ ಒಂದು ಕೈ' ಎಂದು ಕೂಗುತ್ತ ಕತ್ತಲಲ್ಲಿ ಬಂದನು. ಅವನ ಸ್ವರವನ್ನು ಕೇಳಿದವರೆಲ್ಲರೂ 'ಏನು ತಾಂತಿಯಾ ಭಾಯಿ! ಅಪರೂಪ ದರ್ಶನ! ಎಲ್ಲಿಂದ ಮೂಡಿದೆ? ಈಚೆಗೆ ನಿನ್ನನ್ನು ಕಾಣದೆ ಬಹಳ ಸಮಯವಾಯಿತು' ಎಂದು ಆತನನ್ನು ಸ್ವಾಗತಮಾಡಿದನು. ಆತನು ಜಗಲಿಯನ್ನು ಹತ್ತಿ ಬಂದನು. ಸೇಟಜಿಯು ಆತನನ್ನು ಎವೆ ಇಕ್ಕದೆ ನೋಡುತಿದ್ದನು. ಬಂದವನು ದೀರ್ಘಕಾಯನು. ಬಲಿತ ರಟ್ಟೆ ತೊಡೆಗಳು, ಅಗಲವಾದ ಎದೆ, ಅಗಲವಾದ ಹಣೆ, ಉದ್ದವಾದ ತಿರುವಿದ ಮೀಸೆ; ವೀರಕಚ್ಚೆ ಹಾಕಿ ಉಟ್ಟ ಸಣ್ಣ ಪಂಚೆ; ಹೆಗಲ ಮೇಲೆ ಒಂದು ಕಂಬಳಿ; ಎದೆಗೆ ಒತ್ತಾಗಿ ತೊಟ್ಟ ತುಂಡಂಗಿ, ಕಿವಿವರೆಗೆ ಚಾಚಿರುವ ಟೊಪ್ಪಿಯೊಂದು ತಲೆಗೆ. ಕೈಯಲ್ಲಿ ಸುಮಾರು 6 ಫೀಟು ಉದ್ದದ ಒಂದು ಬಲವಾದ ಕೋಲು, ಸೊಂಟದಲ್ಲಿ ಸಿಕ್ಕಿಸಿದ ಒಂದು ದೊಡ್ಡ ಒರೆಯಲ್ಲಿರುವ ಚೂರಿ. ಅವನನ್ನು ಅಪರಿಚಿತರು ನೋಡಿದರೆ ಅಂಜುತಿದ್ದರು. ಅವನು ದರೋಡೆ ಕಳ್ಳರ ಗೊತ್ತುಗಾರನು. ಹಳ್ಳಿಪಳ್ಳಿಗಳಲ್ಲಿರುವ ಶ್ರೀಮಂತರ ಮನೆಗಳನ್ನು ನುಗ್ಗಿ ಸುಲಿದು ಜೀವನ ಮಾಡುವವನು. ಆದ್ದರೆ ಬಡಜನರಿಗೆ ಅವನ ಮೇಲೆ ತುಂಬಾ ಪ್ರೇಮ, ವಿಶ್ವಾಸ. ಅವನು ಕೊಳ್ಳೆ ಹೊಡೆದು

ದನ್ನೆಲ್ಲ ಬಡವರ ಬಗ್ಗೆ ವೆಚ್ಚಮಾಡುತಿದ್ದನು; ನಿರಾಶ್ರಿತರ ಭಾಗದ ದೇವತೆ ಯಾಗಿದ್ದನು. ಹೀಗಾಗಿ ಪೋಲಿಸಿನವರು ಅವನನ್ನು ಹುಡುಕುತ್ತಲಿದ್ದರೂ ಯಾರೂ ಅವನ ಪತ್ತೆ ಸಿಗದಂತೆ ಕಾಯುತಿದ್ದರು. ಅವನು ರಾತ್ರೆ ಬೆಳಗಾಗುವಷ್ಟರಲ್ಲಿ ಮೂವತ್ತು ನಾಲ್ವತ್ತು ಮೈಲು ಕಾಡುದಾರಿಯನ್ನು ಗಾಢಾಂಧಕಾರದಲ್ಲಿಯೂ ನಡೆಯುತಿದ್ದನು. ಗಂಗೂಬಾಯಿಯ ಹೊಟಲಿನಲ್ಲಿ ಅವನು ಆಗಾಗ ಬಂದು ಹೊಟ್ಟೆ ತುಂಬ ಊಟ ಮಾಡಿ ಹೋಗುತಿದ್ದನು. ಅನೇಕ ಸಲ ಅವನು ಬರಿಗೈಯಲ್ಲಿ ಬಂದರೂ ಗಂಗೂಬಾಯಿ ಊಟ ಹಾಕುತಿದ್ದಳು. ಅವನ ಸಾಹಸದ ಕಥೆಗಳನ್ನೆಲ್ಲ ಕಿವಿಯಾರೆ ಕೇಳುತಿದ್ದಳು. ಶ್ರೀಮಂತರಿಗೆ 'ಊಟಕ್ಕಿಲ್ಲದ ಉಪ್ಪಿನಕಾಯಿ'ಯಂತಿರುವ ಧನವ್ಯಾಕೆ? ಬಡವರು ದಿನಕ್ಕೆ 18 ತಾಸು ದುಡಿದರೂ ಒಪ್ಪೊತ್ತಿಗೆ ಹೊಟ್ಟೆ ತುಂಬಾ ಊಟಕ್ಕೂ ಕೂಡ ದೊರಕುವುದಿಲ್ಲ. ಆದ್ದರಿಂದ ತಾಂತಿಯನು ಶ್ರೀಮಂತ ರನ್ನು ಸುಲಿದರೆ ತಪ್ಪಲ್ಲವೆಂದು ಗಂಗೂಬಾಯಿಯ ತರ್ಕ. ಸುಲಿದದ್ದ ನ್ನೆಲ್ಲ ಬಡವರಿಗೆ ಹಂಚುತ್ತಾನೆ ಎಂಬದೇ ಅವಳ ಸಮಾಧಾನ. ಹೀಗಾಗಿ ಹೊಟಲಿನ ಜಗಲಿಯಲ್ಲಿ ಸೇರಿದವರೆಲ್ಲರೂ ತಾಂತಿಯನಿಗೆ ಸ್ವಾಗತ ಮಾಡಿದ್ದರಲ್ಲಿ ಏನೂ ಆಶ್ಚರ್ಯವಿಲ್ಲ. 'ಏನು, ಸಮಾಚಾರವೇನಾದರೂ ಇದೆಯೆ?' ಎಂದು ಭಿಕುಪಂಡಿತನು ಕೇಳಿದನು. ಆಗ ತಾಂತಿಯನು ಹೊಸದೊಂದು ಅಪರಿಚಿತ ವ್ಯಕ್ತಿಯನ್ನು ನೋಡಿ 'ಇಲ್ಲಿರುವ ಹೊಸಬನು ಯಾರು? ಅವನು ನಮ್ಮವನಲ್ಲ! ಅವನು ಗುಪ್ತಚಾರನೊ, ನಮ್ಮ ಹಿತ ವಾದಿಯೊ?' ಎಂದು ಕೇಳಿದನು. ಆಗ ಭಿಕುಪಂಡಿತನು ಅವನ ಪೂರ್ವ ವೃತ್ತಾಂತವನ್ನು ಹೇಳಿ 'ಇಗೊ! ನೀನು ಅವನ ಮೇಲೆ ಕೈಮಾಡ ಬೇಡ!' ಎಂದನು. ಅದಕ್ಕೆ ತಾಂತಿಯನು ಮುದುಕನನ್ನು ಎವೆ ಇಕ್ಕದೆ ನೋಡುತ್ತ 'ಮುದುಕ! ಅದರಲ್ಲಿಯೂ ಬಡವನಂತೆ! ಅಜ್ಜಾ! ನಿನಗೆ ಜೀವವೇ ಭಾರ ವಾಗಿಲ್ಲವೆ?' ಎಂದು ಮೀಸೆ ತಿರುವುತ್ತ ಹುಬ್ಬು ಹಾರಿಸಿ ಗಂಭೀರ ಸ್ವರದಿಂದ ಕೇಳಿದನು. ಸೇಟಜಿಯು ಅವಾಕ್ಕಾಗಿ ಅವನನ್ನೆ ನೋಡು ತಿದ್ದನು. ಆಗ ಭಿಕುಪಂಡಿತನು 'ಇದು ಸ್ವಾಲಕೋಜ ಮೊಕದ್ದಮೆಯಲ್ಲ. ಕ್ರಮನಂಬ್ರವೆಂಬಂತೆ ಕಾಣುತ್ತದೆ. ತನಖಿ ನೋಟಿಸು ಯಮರಾಜನ ಕೋರ್ಟಿನಿಂದ ಬರಲಿಲ್ಲ. ಹ! ಹ! ಹ!' ಎಂದನು.

**ತಾಂತಿಯಾ:**—'ಆದರೂ ದೇಹದಲ್ಲಿ ಶಕ್ತಿ, ಕೈಯಲ್ಲಿ ದುಡ್ಡು ಇಲ್ಲದೆ ಸಾಗಿಸುವ ಜೀವನವು ಸತ್ತು ಸಾಯದ ಜೀವನವಲ್ಲವೆ? ನನಗೆ ಅಂಥ ದಶೆಯು ಬಂದರೆ ನಾನು ಹೊಳೆಗೆ ದುಮುಕಿ ಜೀವ ಬಿಟ್ಟೇನು' ಎಂದು ಹುಕ್ಕೆಯನ್ನು ಸೇದತೊಡಗಿದನು.

ಅಷ್ಟರಲ್ಲಿ ಗಂಗೂಬಾಯಿ ಅಡಿಗೆಕೋಣೆಯಲ್ಲಿ ಕೆಲಸ ಮುಗಿಸಿ, ಹೊರಗೆ ಹೊಸ್ತಿಲ ಮೇಲೆ ಕುಳಿತು 'ತಾಂತಿಯಾ! ನಿನ್ನ ಕೂಸು ಚೆನ್ನಾಗಿದೆಯೇ?' ಎಂದಳು.

**ತಾಂತಿಯಾ:**—'ಹೌದು! ಹೌದು. ಆ ಪೋರನಿಗೆ ಈಗ ಬರೆ ನಾಲ್ಕು ವರ್ಷ! ಚೆನ್ನಾಗಿ ಬಲಿತು ಪುಂಡನಾಗಿದ್ದಾನೆ.' ಇಷ್ಟು ಮಾತುಗಳು ನಡೆಯುವಷ್ಟರಲ್ಲಿ ಇನ್ನೊಬ್ಬ ವ್ಯಕ್ತಿಯು ಕೆಂಪಗಾದ ಕಣ್ಣುಗಳನ್ನು ಕೆರಳಿಸಿಕೊಂಡು 'ಇದೇನು? ಇಲ್ಲಿ ಜುಗಾರಾಡುತ್ತೀರಾ?' ಎಂದು ಗರ್ಜಿಸುತ್ತ ಅಂಗಳಕ್ಕೆ ಬಂದನು.

'ಓಹೊ! ನೀವೂ ಒಂದು ಕೈ ನೋಡುತ್ತೀರಾ? ಬನ್ನಿ, ಬನ್ನಿ! ಹ! ಹ! ಹ!' ಎಂದು ಸಾವಳ್ಯಾನು ಉತ್ತರಕೊಟ್ಟನು. 'ಓಹೊ! ಗೋಸಾಯಿ ಮಹಾರಾಜರು ಬಂದೇ ಬಿಟ್ಟರು. 'ಇಸ್ಪೀಟುಗಳನ್ನು ಅಡಗಿಸಿ' ಎಂದು ದಾದೂಭಾಯಿ ಹೇಳಿ ಗೋಡೆಗೆ ಒರಗಿ ಕುಳಿತನು. ಅಷ್ಟರಲ್ಲಿ ಸೇಟಜಿಯು ಕಡೆಗೆ ನೋಡಿ ಭಿಕುಪಂಡಿತನು 'ಸುಮ್ಮನಿರು, ಈಗಿನ ತಮಾಷೆ ನೋಡೋಣ' ಎಂದು ಕಣ್ಣೊತ್ತಿದನು. ಆಗ ತಾಂತಿಯನು 'ಬನ್ನಿ, ಮಹಾರಾಜರೇ! ಹುಕ್ಕೆಯ ಒಂದು ದಮ್ಮು, ಇಕೊಳ್ಳಿ!' ಎಂದು ಏರಿದ ಸ್ವರದಿಂದ ಹೇಳಿದನು.

ಗೋಸಾಯಿ ತುಂಬಾ ರೇಗಿದನು. ತನ್ನನ್ನು ಗೇಲಿಮಾಡುತ್ತಾರೆಂದು ಕಣ್ಣು ಕೆರಳಿಸಿದನು. ಮೊದಲು ಸಾವಳ್ಯಾನ ಕಡೆಗೆ ನೋಡಿ 'ನೀನು ಇನ್ನೂ ಜೈಲುಮನೆ ಸೇರಿಲ್ಲವೆ?' ಎಂದನು. ಸಾವಳ್ಯಾನು ಈ ಮಾತು ಕೇಳಿಸದವನಂತೆ ಚಿಲುಮೆಯ ಬೆಂಕಿ ಸರಿ ಮಾಡುವುದರಲ್ಲಿ ತೊಡಗಿದ್ದನು. ಅನಂತರ ಗೋಸಾಯಿ ದಾದೂಭಾಯಿಯನ್ನು ಕಂಡು 'ಏನು ದಾದು! ನಿನಗಿನ್ನು ಮನೆ ಸೇರುವ ಹೊತ್ತಾಗಿಲ್ಲವೇ? ನಿನ್ನ ಹೆಂಡತಿ ಅಲ್ಲಿ ಕಾಯುತ್ತಾಳಲ್ಲ!' ಎಂದನು.

'ನನ್ನ ಹೆಂಡತಿ ನನಗೆ ಕಾದಿದ್ದರೆ ನಿಮಗೆ ಸಂಕಷ್ಟವೇನು? ನೀವು ಹಾಯಾಗಿ ಯಮುನಾ ಸದನದ ದಾರಿ ಹಿಡಿಯಬಾರದೇ?' ಎಂದು ದಾದು ಭಾಯಿ ಒಂದು ಕಣ್ಣನ್ನು ಅರೆಮುಚ್ಚುತ್ತ ಹೇಳಿದನು.

'ಏನು! ಯಮುನ ಸದನವೇ? ಅಲ್ಲಿಗೆ ಮಹಾರಾಜರಿಗೆ ದಾರಿ ತೋರಿಸುವವರು ಯಾರು? ಅದರ ಬೀಗದ ಕೈ ಮಹಾರಾಜರ ಕೈಯಲ್ಲಿ ಇದೆಯೇನು? ಹ! ಹ! ಹ!' ಎಂದನು ತಾಂತಿಯನು.

'ಓಹೊ! ತಾಂತಿಯನೆ! ನಿನ್ನನ್ನು ಪೋಲಿಸಿನವರು ಹುಡುಕುತ್ತ ಲಿದ್ದಾರೆ! ಅವರ ಕೈಯಿಂದ ಹೇಗೆ ತಪ್ಪಿಸಿದೆ?' ಎಂದು ಗೋಸಾಯಿ ಮಹಾ ರಾಜರ ಗಂಭೀರವಾಣಿ. 'ಅಂತೆಯೇ ನಿಮ್ಮನ್ನು ಯಮದೂತರು ಹುಡುಕುತ ಲಿದ್ದಾರೆ!' ಎಂದು ಹೇಳಿ ತಾಂತಿಯನ ದೊಡ್ಡ ನಗು.

ಇವರೆಲ್ಲ ಶುದ್ಧ ಪೋಕರಿಗಳು. ಇವರೊಡನೆ ಮಾತಾಡಿದರೆ ತನ್ನ ಗೌರವ ಉಳಿಯುವ ಹಾಗಿಲ್ಲವೆಂದು ಗೋಸಾಯಿಯು ಎಲ್ಲರ ಮೋರೆ ನೋಡುತ್ತ ಕೊನೆಗೆ ಸೇಟಜೀಯನ್ನು ಕಂಡು 'ಈ ಮುದಿಯನು ಯಾರು! ನಿಮ್ಮ ಅಕ್ರಮಕೂಟದ ಹೊಸ ಉಮೇದುವಾರನೇ? ಯಾರೊ ನೀನು?' ಎಂದು ಗದರಿಸಿದನು.

ಆಗ ಭಿಕುಪಂಡಿತನು ನಡುವೆ ಬಾಯಿಹಾಕುವುದರಲ್ಲಿದ್ದನು. ಸೇಟ ಜೀಯು ಅವನ ಭುಜವನ್ನು ಒತ್ತಿ ತಡಿಸಿ 'ನಾನೊಬ್ಬ ಬಡ ಪರದೇಶಿ, ಮುಂಬಾಯಿಯಿಂದ ಬಂದೆ, ಮಹಾಸ್ವಾಮಿ!' ಅಂದನು. 'ಎಲ್ಲಿಗೆ ಹೋಗುವೆ?' ಎಂದು ಗೋಸಾಯಿಯು ಹುಬ್ಬು ಹಾರಿಸಿ ಮಾಡಿದ ಪ್ರಶ್ನೆಗೆ 'ನಾನು ಊರೂರು ಅಲೆದು ಹೊಟ್ಟೆ ಹೊರಕೊಳ್ಳುವವನು' ಎಂದು ಸೇಟಜೀಯ ಉತ್ತರ.

'ಹೀಗೆ ತಿರುಪೆ ಎತ್ತುವುದಕ್ಕಿಂತ ಎಲ್ಲಾದರೂ ಕೂಲಿನಾಲಿ ಮಾಡಿ ಜೀವಿಸಬಾರದೇ? ಮೈಬಾಗುವುದಿಲ್ಲವೆಂದು ಕಾಣುತ್ತಿದೆ. ಸೋಮಾರಿ! ನಾಳೆ ಬೆಳಿಗ್ಗೆ ಈ ಊರು ಬಿಟ್ಟು ಹೋದರೆ ಸರಿ. ಇಲ್ಲವಾದರೆ ಕಳ್ಳನೆಂದು ಗಸ್ತಿನ ಪೋಲೀಸಿನವರ ಕೈಗೆ ನಿನ್ನನ್ನು ಒಪ್ಪಿಸುತ್ತೇನೆ. ಇಲ್ಲಿ ನಿನ್ನಂಥ ಸೋಮಾರಿಗಳ ಸಂಖ್ಯೆ ಹೆಚ್ಚುತ್ತಿದೆ' ಎಂದು ಎಲ್ಲರ ಕಡೆಗೆ ತನ್ನ ವಕ್ರದೃಷ್ಟಿ

ಯನ್ನು ಬೀರಿದನು. ಭಿಕುಪಂಡಿತನು ಇದನ್ನು ಕೇಳಿ 'ಅಜ್ಜಯ್ಯ, ಮಹಾ ರಾಜರ ಅಪ್ಪಣೆ ಮೀರಬೇಡ. ಕಂಡ್ಯಾ! ಸ್ವರ್ಗದ ಬೀಗದ ಕೈ ಅವರ ಬಳಿಯಲ್ಲಿದೆ. ಸ್ವಾಮೀ! ರಾತ್ರೆಯಾಯಿತು. ತಾವಿನ್ನು ಯಮುನ ಮನೆ ದಾರಿ ಹಿಡಿಯಿರಿ!' ಎಂದು ಕೈಜೋಡಿಸಿದನು. ಇಲ್ಲಿ ತನ್ನ ಬೇಳೆ ಬೇಯದೆಂದು ಮೋರೆ ಕಪ್ಪಿಕ್ಕಿ ಗೋಸಾಯಿಯು ಅಂಗಳದಿಂದ ಬೀದಿಗೆ ಇಳಿದುಹೋದನು.

ಗೋಸಾಯಿಯು ಪ್ರಾಚೀನಕಾಲದಿಂದ ಈ ಪ್ರಾಂತದಲ್ಲಿ ಹೆಸರು ಗೊಂಡ ದೊಡ್ಡ ದೇವಸ್ಥಾನದ ಆಡಳಿತೆದಾರನು. ಸರಕಾರದ ತಸ್ತೀಕು, ತುಂಬಾ ಆಸ್ತಿಪಾಸ್ತಿ ಎಲ್ಲಾ ಈ ದೇವಸ್ಥಾನಕ್ಕೆ ಇದ್ದುದರಿಂದ ಈ ಆಡಳಿತೆ ದಾರನಿಗೆ ದುಂದುವೆಚ್ಚಕ್ಕೆ ಏನೂ ಕಡಿಮೆಯಿದ್ದಿಲ್ಲ. ಆದರೂ ಸನಾತನ ಧರ್ಮದ ಒಂದು ದೊಡ್ಡ ಸ್ಥಂಬವೆಂದು ಇವನನ್ನು ಲೌಕಿಕರು ಕಾಣುತಿದ್ದರು. ಅಮಲುಪದಾರ್ಥಗಳ ಸೇವನೆ, ಮುಂತಾದ ಐಹಿಕ ಸುಖಗಳನ್ನೆಲ್ಲ ನಿರಾತಂಕವಾಗಿ ಇವನು ಅನುಭವಿಸುತಿದ್ದನು. ಈ ದೇವಸ್ಥಾನದ ಆಶ್ರಿತರು ಅನೇಕರು ಇದ್ದುದರಿಂದ ಇವನು ತನ್ನ ಬಾಹ್ಯವರ್ಚಸ್ಸಿಗೆ ಲೋಪ ಬರಲಿಲ್ಲ ವೆಂದು ತೋರಿಸುವುದಕ್ಕೆ ಜನಸಾಮಾನ್ಯರನ್ನು ಹೆದರಿಸಿ ಗದರಿಸಿ ತನ್ನ ಮನಸ್ಸಿಗೆ ಸಮಾಧಾನ ತಾಳುತಿದ್ದನು. ಆದರೆ ಅವನ ಸ್ಥಿತಿಗತಿಯ ಪರಿಚಯುವಿದ್ದವರು ಅವನನ್ನು ಗೇಲಿಮಾಡದೆ ಇರುತ್ತಿರಲಿಲ್ಲ.

ಇಷ್ಟು ಮಾತುಗಳು ನಡೆಯುವಾಗ ರಾತ್ರೆ ಸುಮಾರು ಹತ್ತು ಗಂಟೆ ಕಳೆಯಿತು. ಮುದುಕನ ಕಣ್ಣುಗಳು ಆಯಾಸದಿಂದಲೂ ನಿದ್ರೆ ಯಿಂದಲೂ ಭಾರವಾಗಿದ್ದವು. ಆಗ ಗಂಗೂ ಬಾಯಿಯು ಒಂದು ಚಾಪೆ ಯನ್ನೂ ಒಂದು ಮಣೆಯನ್ನೂ ಜಗಲಿಯ ಕೋಣೆಯಲ್ಲಿಟ್ಟು 'ಅಜ್ಜಯ್ಯಾ! ನೀನು ನಿದ್ರೆ ಮಾಡು' ಎಂದು ಹೇಳಿದಳು. ಮುದುಕನು ಚಾಪೆಯ ಮೇಲೆ ಬಿದ್ದುಕೊಂಡು ಒಂದು ಅರೆಕ್ಷಣದಲ್ಲಿ ಗೊರಿಕೆಹೊಡೆಯಲಾರಂಭಿ ಸಿದನು. ದಾದುವು ಸ್ವಲ್ಪ ಸಮಯ ಇಸ್ಪೇಟು ಆಡುತ್ತಾ ಇದ್ದ ಮೇಲೆ ತನ್ನ ಮನೆಯ ಕಡೆಗೆ ಹೊರಟನು. ಅಷ್ಟರಲ್ಲಿ ತಾಂತ್ಯಿಯನೂ ಅಲ್ಲಿ ನೆರೆದವರನ್ನು ಕಂಡು 'ಇಗೋ ಈ ಮುದುಕನು ನಾಸಿಕದ ಕಡೆಗೆ ಹೋಗು

ವನನಂತೆ. ಈ ಕಿರುದಾರಿಯಲ್ಲಿ ಆತನಿಗೆ ಎರಡು ದಿನಗಳ ಖರ್ಚಿಗಾದರೂ ನಾವು ವಂತಿಗೆಯಿಂದ ಸಂಗ್ರಹಿಸಿಕೊಡಬೇಕು. ನಿಮ್ಮೆಲ್ಲರ ವಂತಿಗೆ ಹಾಕಿ' ಎಂದು ತನ್ನ ಅಂಗವಸ್ತ್ರವನ್ನು ಹರಡಿದನು. ಮುದುಕಿಯೂ ಯಥಾನುಶಕ್ತಿ ವಂತಿಗೆ ಕೊಡದೆ ನಿಲ್ಲಲಿಲ್ಲ. ಒಟ್ಟಿಗೆ 1½ ರೂ. ಜಮೆಯಾಯಿತು. 'ಈಗ ಮುದುಕನಿಗೆ ಅದನ್ನು ಕೊಡುವ ಬಗೆ ಹೇಗೆ? ಅವನನ್ನು ಎಚ್ಚರಿಸುವುದು ಪಾಪಕರ. ಹಣವನ್ನು ತೆಗೆದುಕೊಂಡಾನೆಂದು ವಿಶ್ವಾಸವೇನು? ಅದನ್ನು ತಿರಸ್ಕರಿಸಿದರೆ—' ಎನ್ನುವಷ್ಟರಲ್ಲಿ ತಾಂತಿಯನು "ಅದು ನನ್ನ ಕೆಲಸ; ನಾನು ಹೇಳಿದಂತೆ, ಪಂಡಿತರೇ, ಒಂದು ಕಾಗದ ಬರೆಯಿರಿ. 'ನಿನ್ನ ಪ್ರೇಮದ ಗೆಳೆಯರ ಯಥಾನುಶಕ್ತಿ ವಂತಿಗೆ—ನಿನ್ನ ಪ್ರಯಾಣದ ಖರ್ಚಿನ ಬಗ್ಗೆ" ಎಂದು.' ಪಂಡಿತನು ಹಾಗೆಯೇ ಕಿಸೆಯಲ್ಲಿದ್ದ ಕಾಗದಚೂರಿನ ಮೇಲೆ ಬರೆದನು. ಅದನ್ನೂ ಈ ಹಣವನ್ನೂ ಹಿಡಿದು ತಾಂತಿಯನು ಸದ್ದಿಲ್ಲದಂತೆ ಮುದುಕನು ಮಲಗಿದ ಕೋಣೆಯೊಳಗೆ ಕಾಲಿಟ್ಟನು. ಮುದುಕನಿಗೆ ಎಚ್ಚರವಿದೆಯೋ ಎಂದು ಆತನ ಬಾಯಿಯ ಹತ್ತರ ಕೈಯನ್ನು ಆಡಿಸಿದನು. ಆಗ ಮುದುಕನಿಗೆ ಎಚ್ಚರವಾಗಿತ್ತು. ಅರೆಮುಚ್ಚಿದ ಕಣ್ಣಿನಿಂದ ನೋಡಿದಾಗ ಈ ವಿಕಾರಾಕಾರದ ವ್ಯಕ್ತಿಯು ತನ್ನನ್ನು ಸಮೀಪಿಸುವುದು ಆತನಿಗೆ ಕಂಡಿತು. ತನ್ನ ಪ್ರಾಣಕ್ಕೆ ಸಂಚಕಾರವಾಯಿತೆಂದು ಆತನು ತಿಳಿದನು. ಆದರೆ ಮಾತನಾಡಿದರೆ ಈ ಭಯಂಕರ ದರೋಡೆಕಳ್ಳನು ಕೊರಳು ಹಿಸುಕಿಬಿಡುವನೆಂದು ದಮ್ಮುಕಟ್ಟಿ ಮುದುಕನು ಅವನ ಕಡೆಗೆನೆ ಅರೆಮುಚ್ಚಿದ ಕಣ್ಣಿನಿಂದ ನೋಡುತ್ತಿದ್ದನು. ತಾಂತಿಯನು ಕಾಲುಬೆರಳುಗಳ ಮೇಲೆಯೇ ನಡೆದು ಆ ಹಣವನ್ನೂ ಚೀಟನ್ನೂ ಅವನ ತಲೆದಿಂಬಿನ ಕೆಳಗಿಟ್ಟ ತುಂಡಂಗಿಯಲ್ಲಿರುವ ಚಿಕ್ಕ ಅಂಗವಸ್ತ್ರದ ಕೊನೆಗೆ ಕಟ್ಟಿ ಹಾಗೆಯೆ ಹೊರಗೆ ಬಂದನು. ಮುದುಕನು ಈಗ ಒಮ್ಮೆ ಸರಿಯಾಗಿ ಉಸುರುಗರೆದನು; ಮತ್ತು ತನ್ನ ಜೀವಕ್ಕೆ ಅಪಾಯವಿಲ್ಲೆಂದು ಸ್ವಸ್ಥಚಿತ್ತದಿಂದ ನಿದ್ರೆಮಾಡಿದನು.

ಬೆಳಗಾದೊಡನೆ ಭಿಕುಪಂಡಿತನು ಎದ್ದು ಗಂಗೂಬಾಯಿಯನ್ನು ಕರೆದು 'ಇಗೊ, ಆ ಮುದುಕನನ್ನು ಹೋಗಗೊಡಬೇಡ. ಅವನಿಗೆ ಸರಿ

ಯಾಗಿ ನಡೆಯುವಷ್ಟು ತ್ರಾಣ ಕೂಡಾ ಇಲ್ಲ. ಈಗ ಹೊರಟರೆ ದಾರಿಯಲ್ಲಿ ಬಿದ್ದು ಸತ್ತಾನು' ಎಂದು ಹೇಳಿ ಅವನಿಗೆ ಕುಡಿಯುವುದಕ್ಕೆಂದು ತನ್ನ ಚೀಲ ದಲ್ಲಿರುವ ಮದ್ದು ತುಂಬಿದ ಸೀಸೆಯೊಂದನ್ನು ಮುದುಕಿಯ ಬಳಿಯಲ್ಲಿರಿಸಿ ಹೊರಟು ಹೋದನು. ತಾಂತಿಯನೂ ಸಾವಳ್ಯಾನೂ ಕೋಳಿ ಕೂಗುವ ಮೊದಲೇ ಹೊರಟು ಹೋಗಿದ್ದರು. ಮುದುಕನು ಸುಮಾರು ಏಳು ಗಂಟೆಗೆ ಎದ್ದು ಪ್ರಾತರ್ವಿಧಿಯನ್ನು ಮುಗಿಸಿ ಪ್ರಯಾಣ ಹೊರಡುವುದಕ್ಕೆ ಅಣಿಮಾಡಿ ತನ್ನ ಅಂಗವಸ್ತ್ರದ ಕೊನೆಗೆ ಕಟ್ಟಿದ ಗಂಟನ್ನು ಬಿಚ್ಚಿ ಅದ ರಲ್ಲಿರುವ ಕಾಗದವನ್ನು ಓದಿದನು. ಎಂದೂ ಕಣ್ಣೀರುಮಿಡಿದ ಸೇಟಜೀಗೆ ಈ ಅಲ್ಪ ಜನರ, ಕೀಳು ತರಗತಿಯವರ ಉದಾರಬುದ್ಧಿಯನ್ನು ಕಂಡು ಕಣ್ಣುಗಳಲ್ಲಿ ನೀರು ಒಸರಿತು. ಕೊನೆಗೆ ಅವನು 'ಈ ಹಣವನ್ನು ತಾಂತಿಯ ನಿಗೆ ಹೇಗೆ ಕಳುಹಿಸಿಕೊಡಲಿ!' ಎಂದು ಚಿಂತಿಸಿ, 'ಛೆ! ಛೆ! ಈ ಸ್ಮಾರಕವನ್ನು ಕಳುಹಿಸುವುದು ಉಚಿತವಲ್ಲ. ಅದಕ್ಕೆ ಪ್ರತಿಯಾಗಿ ಆತನಿಗೆ ಏನೊಂದಾದರೂ ಉಪಕಾರವನ್ನು ಮಾಡಬೇಕು' ಎಂದು ಅದನ್ನು ತನ್ನ ಕಿಸೆಯಲ್ಲಿರಿಸಿದನು. ಮತ್ತು ಗಂಗೂಬಾಯಿಯನ್ನು ಕರೆದು 'ಅಮ್ಮಾ! ನಾನು ಹೋಗಿ ಬರುತ್ತೇನೆ' ಎಂದು ಕೂಗಿದನು. ಮುದುಕಿಯು 'ಅಜ್ಜಾ! ನಿನ್ನಲ್ಲಿ ನಡೆಯಲು ತ್ರಾಣ ವಿಲ್ಲ. ನಿನ್ನನ್ನು ಎರಡು ದಿನ ಇಲ್ಲಿರಿಸಬೇಕೆಂದು ಭಿಕೂಪಂಡಿತನು ಹೇಳಿ ಹೋದನು, ಅದಲ್ಲದೆ ನಿನಗೆ ದಾರಿಯಲ್ಲಿ ದಣಿವಾದರೆ ಕುಡಿಯಲಿಕ್ಕೆಂದು ಈ ಸೀಸೆಯಲ್ಲಿ ಔಷಧವನ್ನೂ ಕೊಟ್ಟು ಹೋಗಿರುವನು. ನೀನೂ ಇದೇ ಊರಿನಲ್ಲಿ ನಿಲ್ಲುವುದಾದರೆ ನಿನಗೆ ತನ್ನ ಮನೆಯಲ್ಲಿ ಕೆಲಸ ಕೊಟ್ಟೇನು ಎಂದು ದಾದುವು ಹೇಳಿಹೋಗಿರುವನು' ಎಂದಳು. 'ನಿಮ್ಮೆಲ್ಲರ ಉಪಕಾರ ದೊಡ್ಡದು. ಆದರೆ ನಾನು ನಾಸಿಕಕ್ಕೆ ಹೋಗುವ ಉದ್ದೇಶಕ್ಕೆ ಭಂಗ ತರ ಲಾರೆನು. ನಿಮ್ಮೆಲ್ಲರ ಹಿತಚಿಂತನೆಯೆ ನನ್ನ ಆಸೆಯನ್ನು ಪೂರೈಸೀತು ಎಂದು ನನ್ನ ಭರವಸೆ,' ಎಂದು ಹೇಳಿ ಆ ಸೀಸೆಯನ್ನು ಹೆಗಲಿಗೆ ತೂಗ ಹಾಕಿ ಕೋಲೂರುತ್ತ ಬೀದಿಗೆ ಇಳಿದು ದಾರಿಯನ್ನು ಮುಂದರಿಸಿದನು.

---

## ೭ನೆ ಅಧ್ಯಾಯ

## ಹಳ್ಳಿಗಳ ಪರ್ಯಟನ

ಸೇಟಜೀಯು ಪರದೇಶಿಯಂತೆ ಗಂಗೂಬಾಯಿಯ ಖಾನಾವಳಿಯಿಂದ ಹೊರಗೆ ಬಿದ್ದು ಮುಂದೆ ನಡಿಯುತ್ತಿರುವಾಗ ತುಂಬಾ ವಿಚಾರಪರನಾಗಿದ್ದನು. ಪರದೇಶಿಯ ವೇಷವನ್ನು ಆತ್ಮಸಂತೋಷದಿಂದಲೇ—ಯಾರ ಒತ್ತಾಯದಿಂದಲ್ಲ—ಸೇಟಜಿಯು ಕೈಕೊಂಡಿದ್ದನು. ಭಿಕೂಪಂಡಿತನನ್ನು ಕಂಡ ಮೇಲೆ ಗಂಗೂಬಾಯಿಯ ಖಾನಾವಳಿಯಲ್ಲಿ ಸೇರಿದವರೆಲ್ಲರ ವರ್ತನವನ್ನು ಅವನು ಟೀಕಿಸತೊಡಗಿದನು. ಅದೆಲ್ಲಾ ಅವನಿಗೆ ವಿಚಿತ್ರವಾಗಿ ಕಂಡಿತು. ಮುಂಬಯಿಯಲ್ಲಿರುವಾಗ ಎಷ್ಟೋ ದಾನಧರ್ಮಗಳಿಗೆ ಅವನು ಮುಕ್ತಹಸ್ತದಿಂದ ಹಣವನ್ನು ಕೊಡುತಿದ್ದನು. ಆದರೆ ಹಾಗೆ ಸಹಾಯಪಡೆದವರಲ್ಲಿ ಒಬ್ಬರಲ್ಲಿಯೂ ಉಪಕಾರಸ್ಮರಣೆಯ ಕುರುಹುಗಳೇ ಕಂಡಿರಲಿಲ್ಲ. 'ಅವನಿಗೇನು ಮಾರಿ! ಇನ್ನಷ್ಟು ಸಹಾಯಕೊಡಬಹುದಿತ್ತು' ಎಂಬ ರೀತಿಯೇ ಸಹಾಯಪಡೆದವರ ಮುಖಚಹರೆಯಿಂದ ವ್ಯಕ್ತವಾಗುತಿತ್ತು. ಅನಾಮಿಕವಾಗಿ ದ್ರವ್ಯಸಹಾಯಮಾಡಿದರೆ ಅದು ಯುಕ್ತಿಯಿಂದ ಮಾಡಿದ ಕೆಲಸ, ಗುಪ್ತದಾನವು ಹೇಗೂ ಹೊರಬೀಳದೆ ಇರಲಿಕ್ಕಿಲ್ಲ ಎಂಬ ಭರವಸೆ ಇದ್ದುದರಿಂದಲೇ ಗುಪ್ತದಾನಗಳಾದುವು' ಎಂದು ಹಲವರು ಸೇಟಜಿಯ ಬೆನ್ನ ಹಿಂದೆ ಟೀಕಿಸುತಿದ್ದುದು ಸೇಟಜಿಯ ಕಿವಿಗೆ ಬಿದ್ದಿತ್ತು. ಆದರೆ ಈಗ ಕಂಡ ಚಿತ್ರವೇ ತೀರಾ ಬೇರೆ. 'ಭಿಕೂಪಂಡಿತನಾಗಲಿ ಸಾವಳ್ಯಾದಾದೂ ತಾಂತಿಯಾ ಇವರಂಥ ಅಶಿಕ್ಷಿತ ತೀರಾ ಹೀನಕುಲದವರಾಗಲಿ, ಅವರಿಗೆ ತಾನು ಯಾರೆಂದು ತಿಳಿಸಿ ದ್ರವ್ಯಸಹಾಯ ಮಾಡಿದರೆ ತೆಗೆದುಕೊಳ್ಳುತಿದ್ದರೇ? ಸರ್ವಥಾ ಇಲ್ಲ. ಅವರವರ ಜೀವನದಲ್ಲಿ ಅವರಿಗೆ ಒಂದು ಬಗೆಯ ತೃಪ್ತಿ ಕಾಣುತಿತ್ತು. ಕ್ರೂರನಾದ ತಾಂತಿಯನೂ ಒಬ್ಬರ ಮನೆ ನುಗ್ಗಿ, ದರೋಡೆ ಮಾಡಿ, ಅಗತ್ಯಬಿದ್ದರೆ ಜೀವಹಿಂಸೆ ಮಾಡಲಿಕ್ಕೂ ಹಿಂಜರಿಯುವವನಲ್ಲ. ಆದರೆ ಇತರರು ಕೈಎತ್ತಿ ಕೊಡುವ ಹಣಕ್ಕೆ ಕೈಚಾಚುವವನಲ್ಲವೆಂದು ಕಂಡಿತು. ಬಡ ಮುದುಕಿ ಗಂಗೂಬಾಯಿಗಾದರೂ ಪರದೇಶಿ ಮುದುಕನ ಮೇಲೆ ಎಷ್ಟು ಕನಿಕರ! ಇವರೆಲ್ಲ

ನನ್ನ ಪ್ರಯಾಣದ ಖರ್ಚಿಗೆಂದು ಕಿಂಚಿತ್ತು ಸಹಾಯಮಾಡುವಾಗ ಏನು ಪ್ರತ್ಯುಪಕಾರವನ್ನು ಬಯಸಿದರು? ಏನೂ ಇಲ್ಲ. ಅವನ ಗೆಳೆಯರ ಮೋರೆಯ ಮೇಲೆ ತಾಂತಿಯನ ಎಳೆಕೂಸಿನ ವಿಚಾರದಲ್ಲಿ ಎಷ್ಟು ದಯಾ ಭಾವವು ಹರಡಿತ್ತು? ಇಂಥ ವಿಲಕ್ಷಣ ಪ್ರೇಮವು ಪೇಟೆಪಟ್ಟಣಗಳ ಕೃತಕ ಜೀವನದಲ್ಲಿ ಕಂಡುಬಂದೀತೇ? ಈ ಮಗುವನ್ನು ಸಾಧ್ಯವಿದ್ದರೆ ಒಮ್ಮೆ ಕಾಣಬೇಕು. ಅವನು ಕಾಡಿನಲ್ಲಿ ನಿರಾತಂಕವಾಗಿ ಬೆಳೆಯುವ ಕಾಡು ಗುಲಾಬಿಯಂತೆ ಸಮಾಜನಿರ್ಬಂಧಗಳಿಲ್ಲದೆ ನಿಶ್ಚಿಂತೆಯಿಂದ ಬೆಳೆದು ಪೇಟೆ ಪಟ್ಟಣಗಳ ಮಕ್ಕಳಿಗಿಂತ ಎಷ್ಟೋ ಒಳ್ಳೆ ಆರೋಗ್ಯದ ಗನಿಯಾಗಿರಬೇಕು. ನನಗಂತು ಮಕ್ಕಳನ್ನು ಸಾಕುವ ಪುಣ್ಯವಿಲ್ಲ. ಇತರರ ಚೆನ್ನಾಗಿ ಬೆಳೆದ ಮಕ್ಕಳನ್ನು ಕಾಣುವ ಪುಣ್ಯೋದಯವು ಬಂದೀತೆ?

ಆದರೆ ಹಳ್ಳಿಗಳ ಈ ಬಗೆಯ ಶಾಂತಿಯ ಚಿತ್ರವು ಇದೂ ಮಾಯೆ ಯಲ್ಲವೆ? ಲೋಕದಲ್ಲಿ ತಮ್ಮ ಜೀವನಸೌಕರ್ಯಕ್ಕಾಗಿ ಒಬ್ಬರು ಇನ್ನೊಬ್ಬರನ್ನು ಸುಲಿಯಲು ಯತ್ನಿಸುತ್ತಾರೆ. ನಾಲಗೆಯಿಂದ ಮಾತ್ರ 'ಶಾಂತಿ! ಶಾಂತಿ!' ಎಂದು ಒದರುತ್ತಾರೆ. ಈ ಜೀವನದ ಹೋರಾಟವು ಕ್ರಿಮಿಕೀಟಗಳಿಗೂ ತಪ್ಪಿದ್ದಲ್ಲ. ಅಷ್ಟೇಕೆ, ಪಂಚಭೂತಗಳಿಗೂ ಕಲ್ಲು ಬಂಡೆ ಮಣ್ಣು ಮಳಲು ಇವುಗಳಿಗೂ ತಪ್ಪಿದ್ದಲ್ಲ. ಒಂದು ಇನ್ನೊಂದನ್ನು ತನ್ನ ವರ್ಚಸ್ಸಿನಲ್ಲಿ ಅಣಗಿಸಲಿಕ್ಕೆ ಯತ್ನಿಸುತ್ತದೆ. ಇದು ದೀರ್ಘಕಾಲ ದಲ್ಲಿ ಕಾಣುವ ಪರಿಣಾಮವಾದ್ದರಿಂದ ಅದರ ಮಿತಿಯು ಅಲ್ಪಾಯುಷಿ ಯಾದ ಮನುಷ್ಯನ ಕಣ್ಣಿಗೆ ಗೋಚರಿಸುವುದಿಲ್ಲ, ಅಷ್ಟೆ. ಇಂಥ ಹೋರಾ ಟದ ಕೊನೆಯ ಪರಿಣಾಮವೇನು? ಲಯ, ಪ್ರಲಯ, ಅಷ್ಟೆ! ಆದರೆ ಇದಕ್ಕೆಲ್ಲ ಸೂತ್ರಧಾರಿಯೊಬ್ಬನು ಇದ್ದಾನೆಂದು ವಾದಿಸುತ್ತಾರೆ. ಆತನು ಇದ್ದರೆ ಆತನಿಗೆ ಇದು ಸಮ್ಮತವೇ? ಈ ಸರ್ವನಾಶದಿಂದ ಆತನಿ ಗಾದರೂ ಸಿಗುವ ಶಾಂತಿಯೇನು, ಸುಖವೇನು? ಇದು ತೀರಾ ವಿಚಿತ್ರ ನಟನೆ!'

ಇನ್ನೊಂದು ಕಡೆಯಲ್ಲಿ ಆ ಬಡ ಮುದುಕಿಯ ಕೊನೆಯ ಮಾತು ಗಳು ಅವನ ಕಿವಿಗಳಲ್ಲಿ ಇನ್ನೂ ಸುಳಿಯುತಿದ್ದುವು. 'ನಾನು ಏನೂ

ಅರಿಯದ ಹಳ್ಳಿಗಾಡಿನವಳು. ಆದರೆ ಇಷ್ಟನ್ನು ಹೇಳಬಲ್ಲೆ. ಲೋಕ ದಲ್ಲಿ ಬಡವರಿಗೆ ಆರೈಕೆ ಬೇಕು, ಶ್ರೀಮಂತರಿಗೆ ಯಾವುದಕ್ಕೂ ಕಡಿಮೆ ಯಿಲ್ಲ, ಎಲ್ಲರೂ ತಂತಮ್ಮ ಸುಖಕ್ಕಾಗಿ ಒದ್ದಾಡುತ್ತಾರೆ, ಬಡವರ ಗೋಳು ಕೇಳುವವರು ಯಾರೂ ಇಲ್ಲ' ಎಂದಿದ್ದಳು. 'ಶ್ರೀಮಂತರಿಗೆ ತೃಪ್ತಿಯೆಂಬುದೇ ಇಲ್ಲ. ಹೇಗೆ ಹೇಗೆ ಅವರ ಸುಖಸಂಪತ್ತಿನ ಪರಿಮಿತಿಯು ಹೆಚ್ಚಿತೊ ಹಾಗೆ ಹಾಗೆ ಅವರ ಮಹತ್ವಾಕಾಂಕ್ಷೆಗೆ ಗೊಬ್ಬರವಿಟ್ಟಂತಾಗುತ್ತದೆ. ಇದಕ್ಕೂ ಒಂದು ಮೇರೆಯಿಲ್ಲವೇ?' ಎಂದು ಯೋಚಿಸುತ್ತಾ ನಿಧಾನವಾಗಿ ಬೀದಿಯಲ್ಲಿ ನಡೆಯುತಿದ್ದನು. ಈ ಆಲೋಚನಾತರಂಗಗಳು ಅವನ ತಲೆಯೊಳಗೆ ವ್ಯಾಪಿಸಿದರಿಂದ ಅವನಿಗೆ ಹೊತ್ತು ನೆತ್ತಿಗೆ ಏರಿದುದೇ ಗೊತ್ತಾಗಲಿಲ್ಲ. ಆಗ ರಸ್ತೆ ಬದಿಯ ಪೊದೆಯಲ್ಲಿ ಒಂದು ಚಿಕ್ಕ ನಾಯಿ ಮರಿಯು ಆರ್ತಸ್ವರದಿಂದ ಬೊಗಳುತಿದ್ದಂತೆ ಕೇಳಿಸಿತು. ಸೇಟಜೀಯು ಪೊದೆಯ ಸಮೀಪಕ್ಕೆ ಹೋದನು. ನಾಯಿಯು ಮರಿಯಾಗಿದ್ದಿಲ್ಲ. ಜಾತಿಯಲ್ಲೆ ಸಣ್ಣದು. ಶ್ರೀಮಂತರು ಮನೆಗಳಲ್ಲಿ ವಿನೋದಕ್ಕಾಗಿ ಸಾಕುವ ಚಿಕ್ಕ ಜಾತಿ. ಒಂದು ಕಾಲನ್ನು ಎತ್ತಲಾರದೆ ಅದನ್ನು ನೆಕ್ಕುತ್ತ ಬಿದ್ದಿತ್ತು. ಸೇಟಜೀಯು ನಾಯಿಯನ್ನು ಪೊದೆಯಿಂದ ಎತ್ತಿದನು. ಕಾಲಿಗೆ ಗಾಯ ವಾಗಿದ್ದಂತೆ ಕಂಡಿತು. ನಾಯಿಯು ಸೇಟಜೀಯನ್ನು ಕಂಡೊಡನೆ ಅವನ ಕೈಯನ್ನು ನೆಕ್ಕತೊಡಗಿತು. ಸೇಟಜೀಯು ಅದನ್ನು ಎತ್ತಿಕೊಂಡು ಸಮೀ ಪದ ಹಳ್ಳದ ಬಳಿಗೆ ಹೋಗಿ ಗಾಯವನ್ನು ತೊಳೆದು ಅದಕ್ಕೆ ಬಟ್ಟೆ ಚಿಂದಿ ಯನ್ನು ಸುತ್ತಿದನು. ನಾಯಿಯು ಯಾವುದೊ ಯಜಮಾನನ ಬಂಡಿ ಅಥವಾ ಮೋಟರಿನಿಂದ ಕೆಳಗೆ ಜಾರಿ ಬಿದ್ದುದು ಗೊತ್ತಾಗದೆ ಯಜ ಮಾನನು ಮುಂದರಿಸಿರಬೇಕು ಎಂದು ಕಂಡಿತು. ನಾಯಿಯನ್ನು ತನ್ನ ಎದೆಗೆ ಅವುಚಿಕೊಂಡು ಹಿಡಿದು ಮುಂದೆ ನಡೆಯ ತೊಡಗಿದನು. ನಾಯಿಯು ತನಗೆ ಸುಖವಾದಂತಾಗಿ ಆತನ ಕೈಯೊಳಗೆ ಹಾಯಾಗಿ ನಿದ್ದೆ ಮಾಡತೊಡಗಿತು.

ಸೇಟಜಿಯು ತನ್ನ ವಿಚಾರಸರಣಿಯನ್ನು ಪುನಃ ಮುಂದರಿಸಿದನು. 'ನಾನು ಶ್ರೀಮಂತನಲ್ಲದೆ ಬಡವನಾಗಿದ್ದರೆ ಇದೇ ರೀತಿಯಾಗಿ ಜತೆಗಾರರಿಲ್ಲದೆ ಊರೂರು ಅಲೆಯಬೇಕಾಗುತಿತ್ತು. ಅದು ಅಂಥ ಬಡವನಿಗೆ ಸಾಧ್ಯ ವಾದರೆ ನನಗೆ ಏಕೆ ಸಲ್ಲದು? ಕೊನೆಗೆ ಇಬ್ಬರ ಗತಿಯೂ ಒಂದೇ, ಲಯ.

ಹೀಗಿದ್ದರೆ ಇಂಥ ಸೃಷ್ಟಿಯ ಆವಶ್ಯಕತೆಯಾದರೂ ಏನು? ಬ್ರಹ್ಮಾಂಡ ದಲ್ಲಿ ಲಕ್ಷಗಟ್ಲೆ ಲೋಕಗಳಿವೆಯಂತೆ! ಅವುಗಳಲ್ಲೆಲ್ಲ ಒಮ್ಮೆ ಹುಟ್ಟುತ್ತವೆ, ಒಮ್ಮೆ ಸಾಯುತ್ತವಂತೆ, ಲಕ್ಷೋಪಲಕ್ಷ ಜೀವಿಗಳು, ಅಣುಗಳು! ಹಾಗಾ ದರೆ ಈ ಎಡೆಬಿಡದ ಹುಟ್ಟುಸಾವುಗಳ ಅಂತ್ಯವೆಲ್ಲಿ? ಈ ಸಾವಿನಲ್ಲಿಯೆ ಎಲ್ಲವೂ ಅಂತ್ಯವಾಯಿತೆ? ಅದಕ್ಕೆ ಅರ್ಥವಿಲ್ಲ. ಸಾವಿನ ಅನಂತರವೂ ಒಂದು ಜನ್ಮವಿರಲೇ ಬೇಕು. ಇಲ್ಲವಾದರೆ ಈ ಕ್ಷಣಿಕಸೃಷ್ಟಿ ಎಂಬುದು ಬರೆ ಒಂದು ತಮಾಷೆಯಾಗುವುದು, ಅಷ್ಟೇಕೆ, ಒಂದು ದೊಡ್ಡ ಅಪರಾ ಧವೂ ಆಗಬಹುದು. ಅವುಗಳ ಒಪ್ಪಿಗೆ ಇಲ್ಲದೆ ಲಕ್ಷೋಪಲಕ್ಷ ಜೀವಿ ಗಳನ್ನು ಸೃಷ್ಟಿಸಿ, ಕೆಲವು ಕಾಲ ಇರಗೊಡಿಸಿ, ಅವುಗಳೊಡನೆ ಕೇಳದೆ ನಾಶಮಾಡುವುದೆಂದರೆ ನಿರುದ್ದೇಶದ ಕಾರ್ಯವಾದೀತು, ಹುಚ್ಚರ ಕಾರ್ಯ ವಾದೀತು. ಜನ್ಮಕೊಟ್ಟು ಯಾತನೆ ಅನುಭವಿಸುವಂತೆ ಮಾಡಿ ಕೊನೆಗೆ ಲಯಮಾಡುವುದೆಂದರೆ ಖಂಡಿತವಾಗಿಯೂ ಹುಚ್ಚರ ಆಟವೆಂದಾದೀತು.' ಹೀಗೆಂದು ಮನಸ್ಸಿನೊಳಗೆ ತರ್ಕಿಸುತ್ತ, ಮೆಲ್ಲಮೆಲ್ಲಗೆ ನಡಿಯುವಷ್ಟರಲ್ಲಿ 'ತಾತಾ! ಸ್ವಲ್ಪ ತಾಳು!' ಎಂದು ಯಾರೊ ಕೂಗಿ ಕರೆದಂತಾಯಿತು. ಅವನ ವಿಚಾರಸರಣಿ ಕಡಿದಂತಾಯಿತು. ಸೇಟಜಿಯು ಹಿಂದಿರುಗಿ ನೋಡಿ ದಾಗ ಒಂಟೆತ್ತಿನ ಬಂಡಿಯಲ್ಲಿ ಹೇರು ತುಂಬಿ ಸಂತೆಗೆ ಹೋಗುವವ ನೊಬ್ಬನು ಕಣ್ಣಿಗೆ ಬಿದ್ದನು. ಮುದುಕನು ಬಿಸಿಲಲ್ಲಿ ನಡೆಯುವುದನ್ನು ನೋಡಿ ಸಹಿಸಲಾರದೆ ಅವನನ್ನು ಕರೆಯುತಿದ್ದನು. ಸೇಟಜಿಯು ಅಲ್ಲಿಯೆ ತಡೆದನು. ಬಂಡಿಯವನು ಅವನ ಸಮ್ಮುಖಕ್ಕೆ ಬಂದು 'ಎಲ್ಲಿಗೆ ಹೋ ಗುವೆ, ಈ ಬಿಸಿಲಲ್ಲಿ!' ಎಂದನು. 'ನಾಸಿಕಕ್ಕೆ ಹೋಗುವವನು ನಾನು, ಈ ದಿನ ಎಲ್ಲಿ ಕತ್ತಲಾಗುತ್ತದೋ ಅಲ್ಲಿ ತಂಗುವೆನು' ಎಂದು ಸೇಟಜಿಯು ಉತ್ತರವಿತ್ತನು.

'ಹಾಗಿದ್ದರೆ ಇನ್ನೆರಡು ಮೂರು ಮೈಲು ದೂರದಲ್ಲಿ ದೊಡ್ಡ ಸಂತೆ ನಡೆಯುವ ಊರಿದೆ. ಅಲ್ಲಿಗೆ ಹೇರನ್ನು ನಾನು ವೈಯ್ಯುತ್ತೇನೆ. ಅಲ್ಲಿ ವರೆಗೆ ನೀನು ಈ ಬಂಡಿಯಲ್ಲಿ ಕುಳಿತುಕೊಳ್ಳಬಹುದು; ಒಬ್ಬನಿಗೆ ಸಾಕಷ್ಟು ಇಲ್ಲಿ ಸ್ಥಳವಿದೆ' ಎಂದು ಬಂಡಿಯವನು ಅಂದನು. 'ಏನು

ಬಾಡಿಗೆ ಕೊಡಬೇಕು? ಎಂದು ಸೇಟಜಿಯು ಕೇಳಿದನು. ಅದಕ್ಕೆ 'ಹಾಗೆಲ್ಲ ದುಡ್ಡು ಗಳಿಸಿ ಗಂಟು ಕಟ್ಟಿದರೆ ಇಡುವುದೆಲ್ಲಿ! ಪಾಪದ ಮುದುಕ ನೊಬ್ಬನು ಬಿಸಿಲಲ್ಲಿ ನಡೆಯಲಾರದೆ ಮುಗ್ಗರಿಸುತ್ತಾನೆಂದು ತಿಳಿದು ನಿನ್ನನ್ನು ಕರೆದೆ. ನೀನೇನೂ ದುಡ್ಡು ಕೊಡಬೇಕಾಗಿಲ್ಲ. ಇಷ್ಟವಿದ್ದರೆ ಬಂಡಿಯ ನ್ನೇರು' ಎಂದನು.

ಸೇಟಜಿಗೆ ಈ ಮಾತು ಕೇಳಿದರೆ ಸಾಕೆನ್ನಿಸಿತ್ತು. ಬಿಸಿಲಲ್ಲಿ ನಡೆದು ಕಾಲಡಿಗಳು ಸುಡಲಾರಂಭಿಸಿದ್ದವು. ತನ್ನ ನಾಯಿಮರಿಯನ್ನು ಎತ್ತಿ ಕೊಂಡು ಬಂಡಿಯಲ್ಲಿರುವ ಒಂದು ಚೀಲಕ್ಕೆ ಒರಗಿ ಸುಖವಾಗಿ ಕುಳಿತನು. ಬಂಡಿಯವನು 'ಹುಂ! ಹುಂ! ನಡಿ, ಬಿಮ್ಮನೆ ಕಾಲು ಹಾಕು' ಎಂದು ಎತ್ತನ್ನು ಚಪ್ಪರಿಸಿದನು. ಅದು ಆದೀತೆಂಬಂತೆ ತಲೆಯನ್ನು ಆಡಿಸುತ್ತಾ ವೇಗವಾಗಿ ಕಾಲು ಹಾಕುತಿತ್ತು. ಆಗ ಬಂಡಿಯಾಳು ಸೇಟಜಿಯೊಡನೆ 'ನಾಸಿಕಕ್ಕೆ ಹೋಗಿ ಪುಣ್ಯಗಳಿಸಬೇಕೆಂದಿರುವೆಯಾ? ಅಲ್ಲಿ ವರೆಗೆ ನಡೆದು ಹೋಗುವುದಕ್ಕೆ ನಿನಗೆ ತ್ರಾಣವುಂಟೆ? ಪುಣ್ಯಕ್ಷೇತ್ರಗಳಿಗೆ ಹೋಗುವು ದೊಂದು ಭ್ರಮೆ ಜನರಿಗೆ ಚೆನ್ನಾಗಿ ಅಂಟಿಕೊಂಡಿದೆ. ಅಲ್ಲಿ ಪ್ರಾಣಬಿಟ್ಟರೆ ನೇರಾಗಿ ಸ್ವರ್ಗಲೋಕವನ್ನು ಸೇರುವರಂತೆ. ಹಾಗೆ ಸತ್ತವರಿಗೆಲ್ಲ ಸ್ವರ್ಗ ಲೋಕದಲ್ಲಿ ಸ್ಥಳ ಸಿಗುವುದೆಂದಾದರೆ ಇಷ್ಟರೊಳಗೆ ಸ್ವರ್ಗಲೋಕವು ಸೂಜಿ ಮೊನೆಯೂರಲಿಕ್ಕೆ ಜಾಗವಿಲ್ಲದಂತೆ ತುಂಬಿಕೊಂಡಿರಬೇಕು. ದಿನಕ್ಕೊಂದು ಸತ್ಯ ನುಡಿಯದೆ ಸಾವಿರಾರು ಲೊಟ್ಟೆ ಹೊಡೆದು, ಮರಿಮೋಸ ಮಾಡಿದ ಮೇಲೆ ಎಷ್ಟೋ ಜನರು ಈ ಪಾಪ ತೊಳೆಯುವುದಕ್ಕೆಂದು ಪುಣ್ಯಕ್ಷೇತ್ರಗಳಲ್ಲಿ ತೀರ್ಥಸ್ನಾನಮಾಡುವರು. ಅವರು ದಿನವಹಿ ಮಾಡುತ್ತಿರುವ ಪಾಪ ವೆಂಬುದು ಮೈಗೆ ಅಂಟಿದ ಕೊಳೆಯೇ ನೀರಿನಿಂದ ತೊಳೆಯಲಿಕ್ಕೆ! ನಾನು ಹುಟ್ಟಿದಂದಿನಿಂದ ಒಂದೂ ಯಾತ್ರೆ ಮಾಡಲಿಲ್ಲ, ಮಾಡಲಿಕ್ಕೆ ವಿರಾಮವೂ ಇಲ್ಲ. ಸಂತೆಯಿಂದ ಸಂತೆಗೆ ಸರಕನ್ನು ಕೊಂಡುಹೋಗಿ ಮಾರಿ ನನ್ನ ಕುಟುಂಬದ ಜೀವನಕ್ಕೆ ಹಣವನ್ನು ಕಟ್ಟಿಕೊಳ್ಳುತ್ತೇನೆ. ಯಾರಿಗೂ ವಂಚನೆ ಮಾಡುವುದಿಲ್ಲ, ಸುಳ್ಳು ಹೇಳುವುದಿಲ್ಲ, ತೂಕ ಅಳತೆಯಲ್ಲಿ ಮೋಸ ಮಾಡುವುದಿಲ್ಲ, ಇಂದು ದುಡಿಯದಿದ್ದರೆ ನಾಳೆಗೆ ನನಗೆ ಜೀವನಕ್ಕೆ ಗತಿ

ಯಿಲ್ಲ. ಆದರೂ ಅದೊಂದು ದೊಡ್ಡ ವಿಚಾರವಾಗಿ ನನಗೆ ಕಾಣುವುದಿಲ್ಲ. 'ಉಂಟುಮಾಡಿದ ದೇವರು ಊಟ ಕೊಡಲಾರನೆ?' ಎಂದು ಮನಸ್ಸಿನಲ್ಲಿ ನಿರ್ಧಾರಮಾಡಿ ದೇವರನ್ನು ನಂಬಿ ದಿನ ಕಳೆಯುವ ನನಗೆ ತೀರ್ಥಯಾತ್ರೆಗೆ ಅವಕಾಶವೆಲ್ಲಿ? ಶ್ರೀಮಂತರಿಗೆ ಪಾಪ ಮಾಡಲಿಕ್ಕೆ ವಿರಾಮವು ಧಾರಾಳವಾಗಿ ಇದೆ. ಅದನ್ನು ಅವರು ಯಾತ್ರೆಯ ಮೂಲಕ ತೊಳೆದುಕೊಳ್ಳಬೇಕು ಎಂದು ತಿಳಿದವರು ಅವರಿಗೆ ಬೋಧನೆ ಕೊಡುತ್ತಾರೆ, ಅಂದರೆ ಅದರಿಂದಲಾದರೂ ಅವರ ದುಡ್ಡಿನಿಂದ ನಾಲ್ಕು ಜನರ ಹೊಟ್ಟೆ ತುಂಬಲಿ ಎಂದು. ನಾನು ಹೇಳುವುದರಲ್ಲಿ ತಪ್ಪಿದ್ದರೆ ಹೇಳು!'

**ಸೇಟಜೀ:**—ಇಲ್ಲ! ಇಲ್ಲ! ನೀನು ಹೇಳಿದ್ದರಲ್ಲಿ ಸತ್ಯಾಂಶವಿದೆ. ನಾನು ನಾಸಿಕದ ದಾರಿ ಹಿಡಿದುದು ಯಾತ್ರಾರ್ಥವಾಗಿ ಅಲ್ಲ. ಅಲ್ಲೊಬ್ಬ ನನ್ನ ಬಾಲ್ಯಪರಿಚಿತನು ಇದ್ದಾನೆ. ಅವನನ್ನು ಹುಡುಕಿಕೊಂಡು ಹೋಗುತಿದ್ದೇನೆ.

**ಬಂಡಿಯವ:**—ಹಾಗಿದ್ದರೂ ನಾಸಿಕವು ಬಹಳ ದೂರ ಉಳಿಯಿತು. ಅಂತು ನಿನ್ನಿಷ್ಟವಿದ್ದಂತಾಗಲಿ. ನಿನ್ನನ್ನು ಸಂತೆಕಟ್ಟೆಯ ಸಮೀಪ ಇಳಿಸುತ್ತೇನೆ.

ಹೀಗೆಂದು ಹೇಳಿ ಗುಡ್ಡದಾರಿಯನ್ನು ಇಳಿದು ಬಂಡಿಯವನು ಸಂತೆಯ ಸಮೀಪಕ್ಕೆ ಬಂದು ಬಂಡಿ ನಿಲ್ಲಿಸಿ ಮುದುಕನಿಗೆ ಕೆಳಗಿಳಿಯಲು ಹೇಳಿದನು. ಮುದುಕನು ನಾಯಿಮರಿಯನ್ನು ಹಿಡಿದು ಕೆಳಗಿಳಿದು 'ಅಪ್ಪಾ! ನಿನಗೇನಾದರೂ ಬಾಡಿಗೆ ಕೊಡಬೇಡವೇ? ನೀನು ನನಗೆ ದೊಡ್ಡ ಉಪಕಾರ ಮಾಡಿದೆ.' ಎಂದನು. ಆಗ ಬಂಡಿಯವನು 'ಛೆ! ಛೆ! ಉಪಕಾರದ ಮಾತು ಹಾಗಿರಲಿ. ನಿನ್ನಲ್ಲಿ ಏನು ಹಣಕಾಸು ಇದೆ?' ಎಂದು ಕೇಳಿದನು.

ಅದಕ್ಕೆ ಸೇಟಜೀಯು 'ಬರೆ ಒಂದೆರಡು ರೂಪಾಯಿ ಇರಬಹುದು.' ಎಂದನು. 'ಹಾಗಿದ್ದರೆ ಅದು ನಿನ್ನ ಪ್ರಯಾಣದ ಖರ್ಚಿಗೇ ಇರಲಿ. ಆದರೆ ತಡಮಾಡಬೇಡ. ಕತ್ತಲಾಗುವ ಮೊದಲೇ ನಿನಗೊಂದು ಹಳ್ಳಿ ಕಾಣಸಿಗುವುದು. ಅಲ್ಲಿ ಖಾನಾವಳಿಗಳು ಇವೆ. ನಿನಗೆ ರಾತ್ರೆಯ ಊಟ ಸಿಗುವುದು. ದಾರಿಯಲ್ಲಿ ತಂಗಬೇಡ. ತಾಂತಿಯನ ದರೋಡೆಗಳ್ಳರ

ಗುಂಪು ನಿನಗೆ ಅಡ್ಡಕಟ್ಟೀತು, ಜೋಕೆ!' ಎಂದು ಬಂಡಿಯವನು ಎಚ್ಚರಿಸಿದನು. 'ಓಹೊ! ತಾಂತಿಯನೇ? ಅವನು ನನ್ನ ಪರಿಚಿತನು. ಅವನಿಂದ ನನಗೆ ಭಯವಿಲ್ಲ' ಎಂದು ಸೇಟಜೀಯು ಉತ್ತರಕೊಟ್ಟನು. ಅದಕ್ಕೆ ಬಂಡಿಯವನು 'ಹಾಗೊ! ತಾಂತಿಯನ ಪರಿಚಿತಿ ನಿನಗೆ ಇದೆ ಎಂದರೆ ನಾನು ನಿನಗೆ ಬಂಡಿಯಲ್ಲಿ ಸ್ಥಳ ಕೊಡುತ್ತಲೇ ಇರಲಿಲ್ಲ. ಅವನ ಭಯ ಎಲ್ಲರಿಗೂ ಇದೆ. ಆದರೆ ನನಗೆ ಅವನ ಅಂಜಿಕೆಯಿಲ್ಲ. ಅವನ ಚಿಕ್ಕ ಮಗು ನನಗೆ ಅಲ್ಲಲ್ಲಿ ಕಾಡುದಾರಿಯಲ್ಲಿ ಕಣ್ಣಿಗೆ ಬೀಳುತ್ತಾನೆ. ಅವನಿಗಾಗಿ ಸಕ್ಕರೆಕಡ್ಡಿ ಹುರಿಗಡಲೆ ನಾನು ಯಾವಾಗಲೂ ತರುತ್ತಿದ್ದೇನೆ. ನನ್ನನ್ನು ಕಂಡರೆ 'ಅಣ್ಣಾ! ಅಣ್ಣಾ!' ಎಂದು ಕರೆದು ಆತನು ತಿಂಡಿ ಕೊಡೆಂದು ಪೀಡಿಸುತ್ತಾನೆ.' ಎಂದನು.

**ಸೇಟಜೀ:**—ಅದಿರಲಿ! ನೀನು ತಾಂತಿಯನ ಮಗುವನ್ನು ಕಂಡಿರುವೆಯಲ್ಲ, ಅದು ಹೇಗಿದೆ? ದಷ್ಟ ಪುಷ್ಟವಾಗಿದೆಯೇ? ತುಂಬಾ ಚಟುವಟಿಕೆ ಆತನಲ್ಲಿ ಉಂಟೇ?

**ಬಂಡಿಯವ:**—'ಆ ಮಗುವನ್ನು ಕಂಡರೆ ಯಾರೂ ಅವನನ್ನು ತಬ್ಬಿಕೊಳ್ಳದೆ ಇರುವುದಿಲ್ಲ. ಮನಸ್ಸನ್ನು ಎಳೆಯುವ ಶಕ್ತಿ ಆ ಮಗುವಿನಲ್ಲಿದೆ. ಅದು ತಾಯಿಯೊಂದಿಗೆ ಮಾರ್ಗದಲ್ಲಿ ನಡೆದುಹೋಗುವಾಗ ಯಾರೂ ಅದನ್ನು ಕರೆದು ತಿಂಡಿ ಕೊಡುತ್ತಿದ್ದರು. ಆ ಮಗುವಿನ ತಾಯಿಯನ್ನು ತಾಂತಿಯನು ಎಲ್ಲಿಂದಲೊ ಹಾರಿಸಿ ತಂದಿದ್ದನು. ಅವರಿಗೆ ಕ್ರಮವಾದ ವಿವಾಹವಾಗಿಲ್ಲ. ಆದರೆ ಅವನು ಅವಳನ್ನು ತನ್ನ ಕೈಹಿಡಿದ ಹೆಂಡತಿಯಷ್ಟೆ ಪ್ರೀತಿಯಿಂದ ಸಾಕುತ್ತಿದ್ದನು. ಅವಳು ಎರಡು ವರ್ಷಗಳ ಹಿಂದೆ ಥಕ್ಕನೆ ರೋಗದಲ್ಲಿ ಬಿದ್ದು ಮಡಿದಳು. ಆಗ ತಾಂತಿಯನಿಗೆ ಕೆಲವು ತಿಂಗಳ ವರೆಗೆ ಒಂದು ಬಗೆಯ ಭಯಂಕರ ಹುಚ್ಚು ಹಿಡಿದಿತ್ತು. ಆ ಮಗುವನ್ನು ಎತ್ತಿಕೊಂಡು ಊರೂರು ಅಲೆಯುತ್ತಿದ್ದನು. ಅವನ ಆಗಿನ ಭಯಂಕರ ವರ್ತನವನ್ನು ದೂರದಿಂದ ಕಂಡವರೆಲ್ಲರು ಅವನ ಎದುರು ಬೀಳಲಿಕ್ಕೆ ಅಂಜಿ ಅಡ್ಡದಾರಿ ಹಿಡಿಯುತ್ತಿದ್ದರು. ಈಗ ಆ ಹುಚ್ಚು ಶಾಂತವಾಗಿದೆ. ಆ ಮಗುವನ್ನು ಒಂದು ಹಳ್ಳಿಮನೆಯಲ್ಲಿ

ಸಾಕುತಿದ್ದು ಆಗಾಗ ಬಂದು ನೋಡಿ ಆಟದ ಸಾಮಾನುಗಳನ್ನು ತಂದು ಕೊಟ್ಟು ಅದರ ಆಟಗಳಿಂದ ತೃಪ್ತಿಹೊಂದುತಿದ್ದಾನೆ. ಈಗ ಸಂತೆಗೆ ಹೋಗಲು ನನಗೆ ಹೊತ್ತಾಗುತ್ತದೆ' ಎಂದು ಸಂತೆಯ ಕಡೆಗೆ ತಿರುಗಿದನು. ಸೇಟಜೀಯು ಅವನನ್ನು ಹರಸಿ ಮುಂದಿನ ದಾರಿ ಹಿಡಿದನು.

ಈಗ ಹೊಸತೊಂದು ವಿಚಾರವು ಅವನ ಮನಸ್ಸಿಗೆ ಬಂತು. 'ಶ್ರೀಮಂತನೊಬ್ಬನ ಬಳಿಯಲ್ಲಿ ಬಂಡಿಯಿದ್ದರೆ ಈ ರೀತಿ ದಾರಿ ನಡೆದು ದಣಿದವನಿಗೆ ಆಶ್ರಯ ಸಿಗುತಿತ್ತೇ? ನಾನೆ ಒಂದು ದಿನ ನನ್ನ ಗಿರಣಿಯಲ್ಲಿ ಪೆಟ್ಟು ತಗಲಿ ಬಿದ್ದವನಿಗೆ ಮನೆಗೆ ಸಾಗಿಸುವುದಕ್ಕೆ ನನ್ನ ಬಂಡಿಯನ್ನು ಕೊಟ್ಟಾಗ ನನ್ನ ಆಫೀಸಿನ ಮೆನೆಜರನು 'ಇಂಥ ಔದಾರ್ಯವು ಸಲ್ಲದು. ಕಾಲಿನ ಮೆಟ್ಟು ಕಾಲಿಗೆನೆ ಚಂದ; ಈಗ ಒಬ್ಬನಿಗೆ ನಿಮ್ಮ ಸ್ವಂತ ಬಂಡಿಯನ್ನು ಉಪಯೋಗಿಸಲು ಕೊಟ್ಟರೆ ನಾಳೆ ಗಿರಣಿಯ ನವುಕರರೆಲ್ಲರೂ ಅದು ತಮ್ಮ ಹಕ್ಕೆಂದು ತಿಳಿದಾರು' ಎಂದು ಎಚ್ಚರಿಸಿದನು. ಆದರೆ ಈ ಬಂಡಿಯವನಿಗೆ ಅಂಥ ಉಪಕಾರ ಮಾಡುವುದಕ್ಕೆ ನಿರ್ಬಂಧವೂ ಇಲ್ಲ. ಅದರಿಂದ ತನಗೆ ಪ್ರತ್ಯುಪಕಾರ ಸಿಗಬೇಕೆಂದು ಅವನು ಹಾರೈಸುವುದೂ ಇಲ್ಲ. ಇವನು ಬರಿ ಹಳ್ಳಿಗನು. ಪೇಟೆಪಟ್ಟಣಗಳ ಸುಧಾರಣೆಯ ಕವಚವನ್ನು ತೊಟ್ಟವನಲ್ಲ. ಇವನ ಶುದ್ಧಾಂತಃಕರಣದಲ್ಲಿ ಅಂಥ ಸಂಶಯಕ್ಕೆ ಎಡೆಯೂ ಇಲ್ಲ. ಇತರರಿಗೆ ಸಹಾಯ ಮಾಡುವುದೊಂದು ಮಹತ್ವದ ಕೆಲಸವೆಂದು ಅವನ ತಲೆ ಊದಿಬಿಡುವುದೂ ಇಲ್ಲ. ನಾನು ಮೊದಮೊದಲು ನನ್ನ ಕೈಕೆಳಗೆ ಕೆಲಸ ಮಾಡುವವರ ಮೇಲೆ ಇದೇ ರೀತಿಯ ಸಹಾನುಭೂತಿಯನ್ನು ತೋರಿಸುತಿದ್ದೆ. ನನ್ನೊಡನೆ ಹಲವು ಜನರು ಗೆಳೆತನವನ್ನು—ಪ್ರತಿಫಲ ಹಾರೈಸದೆ—ಬಯಸುತಿದ್ದರು. ಆದರೆ ನನ್ನ ಆಗಿನ ಮೆನೆಜರನು ತನ್ನ ಪ್ರಾಶಸ್ತ್ಯವು ಕಡಿಮೆಯಾದೀತು ಎಂದು ಭಾವಿಸಿ, ಪ್ರತಿಯೊಬ್ಬನನ್ನು ನಾನು ನನ್ನ ಕಣ್ಣಿನಿಂದ ನೋಡಿ ಪರೀಕ್ಷೆಮಾಡುವ ಬದಲಾಗಿ ಆತನ ಕಣ್ಣಿನಿಂದ ನೋಡಿ ತಿಳಿಯುವಂತೆ ಪ್ರಯತ್ನಿಸುತಿದ್ದನು. ಹೀಗಾಗಿ ನಿಜವಾದ ಗೆಳೆಯರು ನನ್ನಿಂದ ದೂರವಾದರು, ನನ್ನ ಸುತ್ತಮುತ್ತಲು ಹೊಗಳುಭಟ್ಟರು ನನ್ನ ಸಂಪತ್ತನ್ನು ಹೀರಲಿಚ್ಛಿಸುವ ಜಿಗಳೆಗಳು ತುಂಬಿದರು. ಈಗ

ಅಸಂಖ್ಯಾತ ದ್ರವ್ಯದ ಒಡೆಯನಾಗಿದ್ದರೂ ನನಗೆ ಒಬ್ಬನೆ ಒಬ್ಬ ಗೆಳೆಯ ನಿಲ್ಲ; ಒಬ್ಬನೆ ಒಬ್ಬ ಹಿತೇಚ್ಛುವಿಲ್ಲ. ಎಲ್ಲರೂ ನನ್ನ ನಸುನಗುವಿನ ತಿಂಗಳ ಬೆಳಕಿಗೆ ಆಸೆಪಡುತ್ತಾರೆ. ಆದರೆ ಅದು ತಿಂಗಳ ಬೆಳಕು, ಯಾವಾಗ ಅಡ್ಡವಾದೀತೊ ಎಂಬ ಸಂಶಯಕ್ಕೆ ಒಳಗಾಗಿದ್ದಾರೆ. ಈ ಸಾಮಾನ್ಯ ಜನರಾದರೊ ಹಾಗಲ್ಲ, ನನ್ನ ಬಡತನವನ್ನು ನಂಬಿ ನನಗೆ ಸಹಾನುಭೂತಿಯನ್ನು ತೋರಿಸಲಿಕ್ಕೆ ಮೇಲಾಟ ಮಾಡುತ್ತಾರೆ. ಹಾಗಾ ದರೆ ಧನಿಕನಿಗೆ ಸಂಪತ್ತಿನಿಂದ ಯಾವುದು ಸರ್ವಥಾ ದೊರೆಯುವುದಿಲ್ಲವೊ ಅದಕ್ಕೆ—ಅಂಥಾ ನಿಷ್ಕಾಮ ಪ್ರೇಮವಿಶ್ವಾಸಗಳಿಗೆ ಬಡವನು—ದರಿದ್ರನು ಸಹಭಾಗಿಯಾಗುತ್ತಾನೆ. ಅನ್ನುವಾಗ ಧನಿಕನು ಪುಣ್ಯವಂತನೊ ದರಿದ್ರನು ಪುಣ್ಯವಂತನೊ? ಸಂಪತ್ತು ಎಂಬ ಶಬ್ದದಲ್ಲಿ ಬರೆ ಧನ ಮಾತ್ರ ಸೇರು ತ್ತದೊ ಅಥವಾ ತನ್ನ ಕುಟುಂಬ, ಜಾತಿ, ಗೆಳೆಯರು ಇತ್ಯಾದಿಯವರ ಸಹಾನುಭೂತಿಯೂ ಸೇರುತ್ತದೊ ಎಂಬದೊಂದು ದೊಡ್ಡ ಪ್ರಶ್ನೆ.'

ಹೀಗೆ ಯೋಚಿಸುತ್ತ ನಿಧಾನವಾಗಿ ನಡೆದು ಅಲ್ಲಲ್ಲಿ ಕೊಂಚ ವಿಶ್ರಮಿಸಿ, ಕತ್ತಲಾಗುವಾಗ ಸೇಟಜೀಯು ಆ ಬಂಡಿಯವನು ಹೇಳಿದ ಹಳ್ಳಿಯನ್ನು ತಲಪಿದನು. ಅಲ್ಲಿ 'ವಿಂಚೂರಕರ ಹೋಟೆಲ್ಲು' ಎಂದು 'ಪಾಟಿ' ಹಚ್ಚಿದ ಒಂದು ಉಪ್ಪರಿಗೆಯ ಕಟ್ಟಡ ಕಂಡಿತು. ಸೇಟಜೀಯು ಅಲ್ಲಿಗೆ ಸೇರಿ ಒಂದು ಮೂಲೆಯಲ್ಲಿ ಬೆಂಚಿನ ಮೇಲೆ ಕುಳಿತು ಚಾ ಸೇವನೆ ಮಾಡುತಿದ್ದನು. ಆಗ ಹೆಬ್ಬಾಗಿಲ ಮುಂದಿರುವ ಬೆಂಚಿನ ಮೇಲೆ ಮೂರು ನಾಲ್ಕು ಮಂದಿ ಕುಳಿತು ತಿಂಡಿ ತರಿಸಿ ತಿನ್ನುತಿದ್ದರು. ಅವ ರೊಳಗೆ ಹೀಗೆ ಸಂಭಾಷಣೆ ನಡಿಯುತಿತ್ತು.

**ಒಬ್ಬ:—** ಹಾಗೇ ಆಗಬೇಕು. ಆ ಕಾರು ತೀರಾ ಮುರಿದು ಬಿದ್ದಿದ್ದರೆ ಎಷ್ಟೊ ಸುಖವಾಗುತಿತ್ತು! ಎಂಥ ವೇಗ!

**ಎರಡನೆ:—** ಛೆ! ಹಾಗೆನ್ನಬೇಡ! ಇನ್ನೊಬ್ಬರಿಗೆ ಕೆಟ್ಟದ್ದನ್ನು ಬಯುಸಿ ದರೆ ನಿನಗೆ ಸಿಕ್ಕುವುದೇನು? ಆ ಮೋಟರಿಗೆ ಸಾವಿರಗಟ್ಲೆ ಹಣ ತೆತ್ತಿರಬೇಕು, ಅವರು!

**ಮೊದಲನೆ:**—ಅದಕ್ಕೇ ಅಂದೆ ಅದು ಮುರಿದುಹೋಗಲಿ ಎಂತ! ಅವರ ಬಳಿಯಿದ್ದ ಹಣ ಹೊಸ ಹೊಸ ಕಾರುಗಳನ್ನು ಕೊಂಡುಕೊಳ್ಳಲಿಕ್ಕನೆ ಖರ್ಚಾಗಲಿ. ಈ ಮುಟ್ಠಾಳರಿಗೆ ದಾರಿಹೋಕರೆಲ್ಲ ಹುಲ್ಲುಕಡ್ಡಿಗೆ ಸಮಾನರು! ಇವರ ದೆಸೆಯಿಂದ ಈಗ ಬೀದಿಗೆ ಇಳಿಯಬೇಕಾದರೆ ವಿಮೆ ಉತ್ತರಿಸಬೇಕಾಗಿದೆ. ವಿಮೆ ಏಜಂಟರಿಗೆ ಒಳ್ಳೆ ದುಡ್ಡು!

**ಮೂರನೆ:**—ಮುಟ್ಠಾಳರೆಂದು ಅವರನ್ನು ಬೈಯ್ಯುವುದು ಪ್ರಯೋಜನವಿಲ್ಲ.

**ಮೊದಲನೆ:**—ಅವರನ್ನು ಲೋಕೋಪಕಾರಿಗಳೆನ್ನಬೇಕೇ? ಹೌದು! ಅನ್ನ-ನೀರು ಸಿಗದೆ ಬೇಡುವ ಮುದುಕರನ್ನು ಮಕ್ಕಳನ್ನು ಇವರು ಕ್ಷಣದಲ್ಲಿ ಖರ್ಚಿಲ್ಲದೆ ಯಮಪಟ್ಟಣಕ್ಕೆ ಅಟ್ಟುತ್ತಾರಲ್ಲ! ಅಲ್ಲಿ ಆ ಬಡವರಿಗೆ ತಿಂಡಿಗೇನೂ ಕಡಿಮೆಯಿಲ್ಲ. ಇತ್ತೀಚೆಗೆ ಮೋಟರುಗಳ ಅಡಿಗೆ ಬಿದ್ದು ಸತ್ತವರ ಸಂಖ್ಯೆ ಎಷ್ಟೆಂದು ಗೊತ್ತುಂಟೆ? ಪೋಲಿಸಿನವರೂ ಡಾಕ್ಟರರೂ ಬಂದು ನೋಡಿ 'ಬಿದ್ದವರಿಗೆ ಎದೆರೋಗ, ಸೋಂಕು' ಎಂದು ತೀರ್ಮಾನ ಕೊಡುತ್ತಾರೆ. ನಷ್ಟವೆಂದರೆ—ಸತ್ತವರ ಕುಟುಂಬಕ್ಕೆ ಅಷ್ಟೆ. ಇಂಥ ಅನಾಚಾರದ ಕಡೆಗೆ ಸರಕಾರದ ದೃಷ್ಟಿಯೇ ಪಸರಿಸುವುದಿಲ್ಲ. ಯಾಕಂದರೆ ಅಪರಾಧಿಗಳು ದೊಡ್ಡ ಸರಕಾರಿ ನವುಕರರೂ ಶ್ರೀಮಂತರೂ. ಆಗ ತನಖಿಗೆ ಅವಕಾಶವೆಲ್ಲಿ?

**ಹೊಟೆಲಿನ ಯಜಮಾನ:**—ಓಹೊ! ಹಾಗೆ ಸರಕಾರದವರ ಮೇಲೆ ದೂರು ಹೊರಿಸುವುದು ತಪ್ಪು. ದಾರಿಯಲ್ಲಿ ಬದಿಗಳಲ್ಲಿ ಹೋಗುವ ಬದಲಾಗಿ ನಡುವಿನಲ್ಲಿ ಹೋಗುತಿದ್ದರೆ 'ಹೊರ್ನಿ'ನ ಶಂಕನಾದಕ್ಕೆ ಬೆದರಿ ಅತ್ತಿತ್ತ ಓಡಾಡಿದರೆ ಕಾರಿನವರು ಏನು ಮಾಡಬೇಕು? 'ಬನ್ನಿ! ಬನ್ನಿ! ನಮ್ಮ ಮೋಟರಿನ ಅಡಿಗೆ ಬಿದ್ದು ಸಾಯಿರಿ' ಎಂದು ಅಂಗಲಾಚಿ ಯಾರೂ ಬೇಡುವುದಿಲ್ಲ. ಜಗನ್ನಾಥದಲ್ಲಿ ರಥದ ಅಡಿಗೆ ತಾವಾಗಿಯೇ ಬಿದ್ದು ಮೋಕ್ಷ ಹೊಂದುವವರು ಇಲ್ಲವೆ?

**ಮೊದಲನೆ:**—ಸರಿ, ಸರಿ! ರಥವನ್ನು ಊರವರು ಮಾಡಿಹರು. ಕಾರುಗಳನ್ನು ನಮಗೆ ದೇವತಾಸ್ವರೂಪಿಗಳಾದ ಬಿಳೀ ಜನರು ತಯಾರಿಸಿದ್ದಾರೆ. ಆದ್ದರಿಂದ ಅವುಗಳ ಅಡಿಗೆ ಬಿದ್ದು ಸತ್ತರೆ ಮೋಕ್ಷ ಖಂಡಿತವಾಗಿಯೇ ಸಿಗಬೇಕು!

**ಹೊಟೆಲಿನವ:**— ಇಗೊ, ನಿನ್ನ ನಾಲಿಗೆ ಬಹಳ ಉದ್ದವಮಾಡಬೇಡ. ಈಗ ಹಾಳಾದ ಮೋಟರಿನ ಯಜಮಾನರು ಮುಂಬಯಿಯ ದೊಡ್ಡ ಶ್ರೀಮಂತರು. ದೇಸಾಯಿ ಕುಲದವರು. ಅವರು ಉಪ್ಪರಿಗೆಯಲ್ಲಿದ್ದಾರೆ. ಕೈತುಂಬಾ ಹಣ ನನಗೆ ಕೊಟ್ಟಿದ್ದಾರೆ. ಅವರ ಮೋಟರು ಚಕ್ರ ಹಾಳಾಗದಿದ್ದರೆ ಅಂಥ ಗಿರಾಕಿಗಳು ನಮ್ಮಂಥವರ ಬಡ ಖಾನಾವಳಿಗೆ ಬರುತಿದ್ದರೇ?

**ಮೊದಲನೆ:**—'ಓಹೊ, ದೇಸಾಯಿ ಕುಲದವರೊ! ಸರಿ ಸರಿ!' ಎನ್ನುವಷ್ಟರಲ್ಲಿ, ಸೇಟಜಿಗೆ ಎದೆ ದಡದಡೆನ್ನಿಸಿತು. ದೇಸಾಯಿಯವರೆಂದರೆ ಸೇಟಜಿಯು ಪರಿಚಿತರು. ಅವರ ಜತೆಯಲ್ಲಿ ಬಂದವರು ಪೆಂಡೆಕರರಿರಬೇಕು. ಆಹಾ ಒಳ್ಳೆ ಜತೆ! ಮುಂಬಯಿಯಲ್ಲಿ ದುಂದುವೆಚ್ಚ, ಕುಡಿಕತನ, ಕುದುರೆ ಓಟದ ಜುಗಾರು, ಇತ್ಯಾದಿಗಳಲ್ಲಿ ಮುಳುಗಿ ತೀರಾ ಹೆಸರು ಕೆಡಿಸಿಕೊಂಡವರು. ಇವರೆಲ್ಲಾದರೂ ಕೆಳಗೆ ಬಂದು ತನ್ನನ್ನು ಗುರುತಿಸುವರೇ? ಇಷ್ಟರ ವರೆಗೆ ಕಾದುಕೊಂಡ ಗುಪ್ತವೇಷವು ಈಗ ಬಯಲಿಗೆ ಬರುವುದೇ? ಎಂದು ಸೇಟಜಿಯು ಗಾಬರಿಯಾದನು. ಮತ್ತು ತಲೆಗೆ ಸುತ್ತಿದ ರುಮಾಲನ್ನು ಮೆಲ್ಲಗೆ ಬಿಡಿಸಿ ಅದನ್ನು ಕಿವಿಯ ವರೆಗೆ ಎಳೆದು ಗೋಡೆಯ ಕಡೆಗೆ ಮೋರೆಯನ್ನು ತುಸು ತಿರುಗಿಸಿ ಆದಷ್ಟು ಹೆಚ್ಚು ಕತ್ತಲೆಯ ಮೂಲೆಗೆ ಸೇರಿಕೊಂಡು ಈ ಸಂಭಾಷಣೆಯನ್ನು ಕೇಳುತ್ತಾ ಕುಳಿತನು.

**ಮೂರನೆ:**— ಈಗ ರೈಲುಬಂಡಿಗಳಿಗೆ ಬೇರೆ ಮಾರ್ಗವಿರುವಂತೆ ಈ ಮೋಟರು ಬಂಡಿಗಳಿಗೂ ಪ್ರತ್ಯೇಕ ಮಾರ್ಗವನ್ನು ಸರಕಾರದವರು ಕಡಿಸಬಾರದಿತ್ತೇ? ಆಗ ಅಂಥ ಅಪಘಡಗಳು ಕಾಲುನಡೆಯಿಂದ ಹೋಗುವವರಿಗೆ ಸಂಭವಿಸಲಿಕ್ಕಿಲ್ಲವಲ್ಲ!

**ಮೊದಲನೆ:**— ಸರಿ ಸರಿ ಚೆನ್ನಾಯಿತು! ಈಗ ಇದ್ದ ಕಾಡುಗುಡ್ಡಗಳನ್ನೆಲ್ಲ ಕಡಿದು ಸಮತಟ್ಟು ಮಾಡಿ, ಲಕ್ಷೋಪಲಕ್ಷ ಪಕ್ಷಿಗಳಿಗೆ ಆಶ್ರಯವಾಗಿರುವ ಗಿಡಮರಗಳನ್ನೆಲ್ಲ ಕಡಿದು ಭೂಮಾತೆಯ ಸ್ವರೂಪವನ್ನೆ ಬದಲಾಯಿಸುವುದು ಎಂಥ ಅನ್ಯಾಯ! ಹಳ್ಳಿತಿಟ್ಟುಗಳ ಅಂದವನ್ನು ಕೆಡಿಸಿ

ಎಲ್ಲವನ್ನು ಮೈದಾನಾಗಿ ಮಾಡುವುದು ಏನು ತಿಳಿಗೇಡಿತನ! ದೇವರ ಸೃಷ್ಟಿಯನ್ನು ರೂಪುಗೆಡಿಸುವುದಕ್ಕೆ ಕೈಹಾಕುವುದು ಉದ್ಧಟತನವಲ್ಲವೇ?

ಈ ಮಾತುಗಳು ನಡೆಯುವಷ್ಟರಲ್ಲಿ ಉಪ್ಪರಿಗೆ ಕೋಣೆಯ ಬಾಗಿಲನ್ನು ಯಾರೋ ತೆರೆದಂತಾಯಿತು. ಆಗ ಹೊಟೆಲಿನ ಯಜಮಾನರು 'ಶೂ! ಸುಮ್ಮನಿರು! ಅವರು ಕೆಳಗೆ ಬರುತ್ತಿದ್ದಂತೆ ಕಾಣುತ್ತದೆ. ನಿನ್ನ ಹರಟೆಗೆ ಸ್ವಲ್ಪ ರಜಾ ಕೊಡು' ಎಂದನು.

ದೇಸಾಯಿಯೂ ಪೆಂಡೆಕಾರನೂ ಮೆಲ್ಲಗೆ ಮೆಟ್ಟಲನ್ನು ಇಳಿದು ಕೆಳಗೆ ಬಂದರು. ಹೊಟೆಲಿನ ಹೋಲಿನಲ್ಲಿ ನಿಂತು ಹೊಟೆಲಿನ ಯಜಮಾನನೊಡನೆ 'ಹಳ್ಳಿ ಊರುಗಳೆಂದರೆ ಎಷ್ಟು ಅಂದವಾದ ನೋಟ! ನಮ್ಮ ಕಾರು ಹಾಳಾಗದಿದ್ದರೆ ಇಂಥ ನೋಟಗಳನ್ನು ನೋಡಲಿಕ್ಕೆ ನಮಗೆ ಅವಕಾಶವೇ ಸಿಗುತ್ತಿದ್ದಿಲ್ಲ. ಇಲ್ಲಿಯೇ ನಿಂತುಬಿಡೋಣವೇ ಎಂದು ಒಮ್ಮೆ ಅನಿಸುತ್ತದೆ. ಏನು, ಪೆಂಡೆಕಾರ! ನಿನ್ನ ಅಭಿಮತವೇನು?' ಎನ್ನುವಷ್ಟರಲ್ಲಿ ಹೊರಗಿನ ಮಾತುಗಳನ್ನು ಕೇಳಿ ಹೊಟೆಲಿನವನ ಹೆಂಡತಿ ಹೊಸ್ತಿಲ ಬಳಿಯಲ್ಲಿ ನಿಂತಿದ್ದಳು. ಅವಳ ಕಡೆಗೆ ದೃಷ್ಟಿಯನ್ನು ಓರೆನೋಟದಿಂದ ಬೀರಿ 'ನನಗೂ ಹಾಗೆಯೇ ಅನಿಸುತ್ತದೆ. ಪೇಟೆಪಟ್ಟಣಗಳ ಗುಲ್ಲುಗಲಭೆಯಗಿಂತಲೂ ಇಂಥ ಹಳ್ಳಿಗಳಲ್ಲಿ ಶಾಂತವಾದ ಜೀವನವು ಎಷ್ಟೋ ಮೇಲು!' ಎಂದು ಇನ್ನೊಮ್ಮೆ ಓರೆಕಣ್ಣಿನಿಂದ ಅವಳ ಕಡೆಗೆ ನೋಡಿದನು. ದೇಸಾಯಿಗೆ ಅದು ಗೊತ್ತಾಯಿತು. ಅವನು 'ಇವರು ಯಾರು? ನಿಮ್ಮ ಮಗಳೇ? ಅಮ್ಮಾ, ನಮ್ಮ ಕಾರು ನಾಳೆ ಬೆಳಗ್ಗೆ ಸರಿಯಾದೊಡನೆ ಅದರಲ್ಲಿ ಕುಳಿತು ಊರಿನ ಒಂದು ಸುತ್ತು ಬರುವಿರಾ! ಏನೂ ಭಯವಿಲ್ಲ. ನನಗೆ ಮೋಟರು ಬಂಡಿ ನಡಿಸುವ ಅನುಭವ ಚೆನ್ನಾಗಿ ಇದೆ!' ಎಂದು ನಸುನಗುತ್ತ ಅಂದನು.

ಇಲ್ಲಿ ಇವರಿಬ್ಬರ ಇನ್ನಷ್ಟು ಪರಿಚಯವನ್ನು ಮಾಡಿಸಿಕೊಡಬೇಕಾಗಿದೆ. ಇಬ್ಬರೂ ಸಮವಯಸ್ಕರು. 25, 26 ವರ್ಷ ಪ್ರಾಯ ಮಿಕ್ಕಿದವರಲ್ಲ. ಇಬ್ಬರೂ ತಮ್ಮ ಮೋಟರ್ ಪೋಷಾಕನ್ನು ತೆಗೆದಿಟ್ಟು ಬರೆ ಪೈಜಾಮ ಮತ್ತು ಬಿಳಿ ಶರ್ಟು, ಶರ್ಟಿನ ಮೇಲೆ ವೆಸ್ಟ್‌ಕೋಟನ್ನು ಧರಿಸಿದ್ದರು. ತಲೆಯ ಚಿಕ್ಕ ಕೂದಲನ್ನು ಬಾಚಿಕೊಂಡಿದ್ದರು. ಮುಖದಲ್ಲಿ

ವಿಶಾಸೆ ಇರಲಿಲ್ಲ. ಆದರೆ ದುಂದುಗಾರಿಕೆಯ ಚಿಹ್ನೆಯು ಮೋರೆಯ ಮೇಲೆ ಆವರಿಸಿ ಈ ಎಳೆಪ್ರಾಯದಲ್ಲಿಯೂ ಕೆನ್ನೆಗಳು ಆಳಕ್ಕೆ ಬಿದ್ದಿದ್ದುವು. ಒಂದೇ ಕಡೆ ನೆಲೆನಿಲ್ಲದ ಕಣ್ಣುಗಳಲ್ಲಿ ಸ್ತ್ರೀಲೋಲದ ಆಸೆಯು ಹೊರಹೊಮ್ಮು ತಿತ್ತು. ಸೇಟಜಿಯು ಅವರನ್ನು ಗುರುತಿಸಿದನು. ಇನ್ನೂ ಮೋರೆ ತಿರುಗಿಸಿ ತನ್ನ ಕಡೆಗೆ ಅವರ ದೃಷ್ಟಿ ಪಸರಿಸದಂತೆ ಕಿವಿಗಳನ್ನು ನಿಗುರಿಸಿ ಅವರ ಅಲ್ಪತನದ ಕೀಳುಬುದ್ಧಿಯ ಅಸಭ್ಯನುಡಿ ಕೇಳುತ್ತ ಆತನ ಮನಸ್ಸಿನಲ್ಲಿ ಸಿಟ್ಟು ಉಕ್ಕಿಬರುತ್ತಿತ್ತು. ಇವರಿಬ್ಬರ ಕೊನೆಯ ಮಾತುಗಳನ್ನು ಕೇಳಿದ ಹೊಟೆಲಿನ ಯಜಮಾನನು ತನ್ನ ಹೆಂಡತಿಯ ಕಡೆಗೆ ಕ್ರೂರದೃಷ್ಟಿಯನ್ನು ಬೀರಿದನು. ಅವಳು ಅದನ್ನು ತಿಳಿದು ಒಳಕೋಣೆಗೆ ಹೋದಳು. ದೇಸಾಯಿ ಮತ್ತು ಪೆಂಡೆಕರರು ಅದನ್ನು ತಿಳಿದೂ ತಿಳಿಯದಂತೆ ಒಬ್ಬರ ಮುಖವನ್ನು ಇನ್ನೊ ಬ್ಬನು ನೋಡಿ ನಸುನಗೆಯನ್ನು ಬೀರುತ್ತ, ಕಣ್ಣುರೆಪ್ಪೆಗಳಿಂದ ಹೊಸ್ತಿಲ ಕಡೆಗೆ ನೋಡಿ ಸನ್ನೆ ಮಾಡುತ್ತ ನಿಂತಿದ್ದರು.

---

## ೮ನೆ ಅಧ್ಯಾಯ

## ತಾಂತಿಯನ ವಿಚಿತ್ರ ಮರಣ

ಅಷ್ಟರಲ್ಲಿ ದೀರ್ಘಕಾಯನಾದ ಒಬ್ಬ ವ್ಯಕ್ತಿಯು ಉದ್ದವಾದೊಂದು ಮೂಟೆಯನ್ನು ಎದೆಗೂ ಹೆಗಲಿಗೂ ಅಮುಕಿ ಹಿಡಿದು ಒಳಗೆ ಬಂದನು. ಅವನ ಮುಖವು ತೀರಾ ಬಾಡಿತ್ತು. ಕೈಮೋರೆಗಳ ಮೇಲೆ ಬೆವರಿ ನೊಂದಿಗೆ ಧೂಳು ಹಿಡಿದಿತ್ತು. ಅವನನ್ನು ಕಂಡೊಡನೆ ಚಾ ತಿಂಡಿ ಕುಡಿ ಯುತಿದ್ದವರು ತಟಸ್ಥರಾಗಿ ಅವನ ಕಡೆಗೆನೇ ನೋಡುತಿದ್ದರು. 'ತಾಂತಿ ಯಾಜಿ! ದೂರದಿಂದ ನಡೆದು ಬಂದಿರುವೆ ಎಂತ ಕಾಣುತ್ತದೆ. ಚಾ ತಿಂಡಿ ಕೊಡಲೆ? ತಿಂಡಿ ಏನು ಬೇಕು?' ಎಂದು ಹೊಟೆಲಿನವನು ಕೇಳಿದನು. 'ತಿಂಡಿ ಬೇಡ, ಬಿಸಿ ಎರಡು ಕಪ್ಪು ಚಾ ತನ್ನಿ' ಎಂದು ತಾಂತಿಯನು ನಡು ಗುವ ಸ್ವರದಿಂದ ಹೇಳಿದನು. ಅವನ ಸ್ವರವನ್ನು ಕೇಳಿದೊಡನೆ ಸೇಟ ಜಿಯು ಅದನ್ನು ಗುರುತಿಸಿ ಹೆಗಲ ಮೇಲಿನ ಅಂಗವಸ್ತ್ರದಿಂದ ಮೋರೆ ಯನ್ನು ಸ್ವಲ್ಪ ಮುಚ್ಚಿಕೊಂಡು ಕುಳಿತನು. ಆದರೆ ಕಡೆಗಣ್ಣ ನೋಟದಿಂದ ಅವನನ್ನೆ ನೋಡುತಿದ್ದನು.

ತಾಂತಿಯನು ತನ್ನ ಮೂಟೆಯನ್ನು ನೆಲದ ಮೇಲೆ ಇರಿಸಿ, ಬೆಂಚಿನ ಮೇಲೆ ಕುಳಿತು ಗೋಡೆಗೆ ಒರಗಿ 'ಉಸ್ಸ್' ಎಂದು ಶ್ವಾಸ ಬಿಟ್ಟು, ಫಕ್ಕನೆ ಕರಾಳವಾದ ವಿಲಕ್ಷಣವಾದ ನಗುವನ್ನು ನಕ್ಕನು. ಅಗ ಅಲ್ಲಿ ಕುಳಿತವರು 'ಈತನು ಕುಡಿದು ಬಂದಿದ್ದಾನೆ' ಎಂದು ನೆನಸಿ ಎವೆಯಿಕ್ಕದೆ ಆತನ ಕಡೆಗೆ ನೋಡುತಿದ್ದರು.

ಆ ಸಮಯದಲ್ಲಿ ಪೆಂಡೆಕರನು ಹೊಟೆಲಿನ ಯಜಮಾನನ ಕಡೆಗೆ ನೋಡಿ 'ನಿಮ್ಮ ಹೊಟೇಲಿನ ಮತ್ತು ಮನೆಯವರ ಒಂದು ಫೋಟೊ ನಾಳೆ ತೆಗೆದುಬಿಡಲೇ? ನನ್ನ ಬಳಿಯಲ್ಲಿ ಸಾಹಿತ್ಯಗಳೆಲ್ಲ ಇವೆ.' ಎಂದನು. ಆಗ ದೇಸಾಯಿಯು 'ಹಾಗಲ್ಲ, ಹೊಟೆಲಿನವರನ್ನು ನನ್ನ ಕಾರಿನಲ್ಲಿ ಕುಳ್ಳಿರಿಸಿ ಫೋಟೊ ತೆಗೆಯಬಾರದೆ?' ಎಂದು ವಿನೋದವಾಗಿ ಹೇಳಿದನು.

ಅಷ್ಟರಲ್ಲಿ ಫಕ್ಕನೆ ತಾಂತಿಯನು ಚಾ ಕುಡಿದು, ತುಟಿಗಳಿಗೆ ಪಸೆ ಬಂದಂತಾಗಿ ಅವರ ಕಡೆಗೆ ನೋಡಿ, 'ಈ ದಿನ ಮೋಟರಿನಲ್ಲಿ ಬಂದವರು ನೀವೆಯೋ? ರಸ್ತೆ ಹ್ಯಾಗೆ ಚೆನ್ನಾಗಿತ್ತೇ?' ಎಂದು ಪ್ರಶ್ನಿಸಿದನು. ದೇಸಾಯಿಯು ತಾಂತಿಯನ ಪೋಷಾಕನ್ನು ತುಚ್ಛೀಕರಿಸಿ ತುಟಿಯನ್ನು ಉಬ್ಬಿಸಿದರೂ ಅವನ ದೀರ್ಘಾಕಾರವನ್ನು ನೋಡಿ ಚಕಿತನಾಗಿ ಆತನನ್ನೆ ನೋಡುತ್ತ 'ಹೌದು ಚಲೋ ರಸ್ತೆ! ಪೂನೆಯಿಂದ ಬೆಳಗ್ಗೆ ಹೊರಟಿದ್ದೆವು. ನಮ್ಮ ಮೋಟರಿನ ಟಾಯರಿಗೆ ತೂತು ಬೀಳದಿದ್ದರೆ ನಾವು ಇಂದು........ ........ಗೆ ಮುಟ್ಟಬೇಕಾಗಿತ್ತು.' ಎಂದನು.

**ಪೆಂಡೆಕರ:**—ನಮಗೆ ಮಾರ್ಗ ಕವಲೊಡೆಯುವಲ್ಲಿ ದಾರಿತಪ್ಪಿ, ಕಲ್ಲುಮುಳ್ಳುಗಳ ದಾರಿ ಸಿಕ್ಕಿತು. ಹೀಗಾಗಿ ಟಾಯರಿಗೆ ತೂತು ಬಿತ್ತು.

**ತಾಂತಿಯಾ:**—ಓಹೋ, ದಾರಿ ತಪ್ಪಿತೇ?

**ಪೆಂಡೆ:**—ಹೌದು, ಹೀಗಾಗಿ ಒಂದು ಓಣಿ ಬಂದಾಗ ಫಕ್ಕನೆ ಮೋಟರ್ ತಿರುಗಿಸಬೇಕಾಯಿತು; ಆದರಲ್ಲಿಯೂ ಇಳುಕಲುದಾರಿ. ನಮ್ಮ ಮೋಟರ್ ಓಣಿಯ ಗೋಡೆಗೆ ತಗಲಿ ಪುಡಿಯಾಗದ್ದು ನಮ್ಮ ಪುಣ್ಯ.

**ತಾಂತಿಯಾ:**—ಓಹೋ ನಿಮ್ಮ ಡ್ರೈವರನು ಜಾಣನಾಗಿರಬೇಕು!

**ಪೆಂಡಿಕರ:**—ಡ್ರೈವರನಿದ್ದಿಲ್ಲ. ಆದರೆ ಯಾವ ಡ್ರೈವರನಿಗೂ ನಮ್ಮ ದೇಸಾಯಿಗಳಷ್ಟು ಕೈಚಮತ್ಕಾರವಿಲ್ಲ, ಧೈರ್ಯವೂ ಇಲ್ಲ. ಅವರು ಸಾಕ್ಷಾತ್ ನಳಮಹಾರಾಯ, ಮೋಟರ ಬಂಡಿಯ ಮಟ್ಟಿಗೆ!

ಎನ್ನುವಾಗ ಅಲ್ಲಿ ನೆರೆದವರೆಲ್ಲರೂ ಚಕಿತರಾಗಿ ಕೇಳುತಿದ್ದರು. ಸಾಮಾನ್ಯವಾಗಿ ಅಪರಿಚಿತರೊಡನೆ ಬಾಯಿ ತೆರೆಯಲಾರದ ಶಾಂತಿಯನು ಇಂದು ನಾಲಗೆಯ ಕಡಿವಾಣವನ್ನು ಕಿತ್ತುಬಿಟ್ಟಂತೆ ಮಾತನಾಡುವುದು ಅವರಿಗೆ ಬಲು ಸೋಜಿಗವಾಗಿ ಕಂಡಿತು. ಶಾಂತಿಯನು ಮೇಲಿನ ಮಾತುಗಳನ್ನು ಕೇಳಿ ತುಸು ಸುಮ್ಮನಿದ್ದು 'ಓಹೊ ದೇಸಾಯಿಯವರು ಸ್ವತಃ ಕಾರನ್ನು ನಡಿಸುತಿದ್ದರೇ? ದೇಸಾಯಿಯವರೆಂದರೆ ನೀವೆಯೋ (ಅವನ ಕಡೆಗೆ ನೋಡಿ)? ನಿಮ್ಮ ಕೈ ಮತ್ತು ಕಣ್ಣುಗಳ ಸಾಮರ್ಥ್ಯವು ವಿಶೇಷತರದ್ದಿರಬೇಕು?

**ದೇಸಾ:**—(ಸಂತೋಷದಿಂದ ಸ್ವಲ್ಪ ಉಬ್ಬಿ)ಹುಂ! ಹಾಗೆನ್ನಬಹುದು! ಆದರೆ ನನ್ನನ್ನು ನಾನೇ ಹೊಗಳುವುದು ಸರಿಯಲ್ಲ!

**ಶಾಂತಿಯ:**—ತಾಸಿಗೆ ಎಷ್ಟು ಮೈಲು ದೂರ ನಡಿಸುತ್ತೀರಿ?

**ದೇಸಾಯಿ:**—ತಾಸಿಗೆ 40ರಿಂದ 50ರ ವರೇಗೆ. ಆದರೆ ಸಮತಟ್ಟಾದ ಮಾರ್ಗವಿದ್ದರೆ—

**ಶಾಂತಿಯ:**—ವಾಯುವೇಗವೇ!

**ದೇಸಾಯಿ:**—ಆದರೆ ಕಾರು ಬೇಗನೆ ಹಾಳಾಗುತ್ತದೆ.

**ಶಾಂತಿಯ:**—ಆದರೂ ಇನ್ನೊಂದನ್ನು ಕೊಂಡುಕೊಳ್ಳಬಹುದಲ್ಲ! ದುಡ್ಡಿದ್ದರೆ ಎಷ್ಟೋ ಹೊಸಕಾರುಗಳು ಸಿಗುತ್ತೆ.' ಎಂದು ಹೇಳಿ ತನ್ನ ಬಳಿಗೆ ತಂದಿಟ್ಟ ಇನ್ನೊಂದು ಕಪ್ಪ ಚಾ ಕುಡಿದುಬಿಟ್ಟು 'ಹೀಗೆ ರಭಸದಿಂದ ಓಡಿಸುವಾಗ ದಾರಿಯಲ್ಲಿ ಅಭ್ಯಂತರಗಳು ಅಡ್ಡಕಟ್ಟುವುದಿಲ್ಲವೆ? ಅಪಘಡಗಳು ಸಂಭವಿಸುವುದಿಲ್ಲವೇ?

**ದೇಸಾಯಿ:**—ಅಪಘಡಗಳು, ಅಭ್ಯಂತರಗಳು—ಅಂದರೆ—

**ಶಾಂತಿಯು:**—(ಭಯಂಕರ ರೀತಿಯಾಗಿ ದೊಡ್ಡ ಸ್ವರದಿಂದ ನಕ್ಕು— ಅಲ್ಲಿದ್ದವರೆಲ್ಲರು ಇದನ್ನು ಕೇಳಿ ಕಂಪಿಸಿದರು)—ಅವಘಡಗಳೆಂದರೆ ಎಲ್ಲಿಯೂ ಒಂದೇ; ನಿಮ್ಮ ಕಾರು ರಭಸದಿಂದ ಓಡುವಾಗ ಯಾರಾದರೂ ಅಡ್ಡ ಸಿಕ್ಕಿ ಬಿದ್ದುಬಿಡುವುದು, ನೀವೇ ಕಾರು ಕಲ್ಲುಮರಗಳಿಗೆ ತಗಲಿ ಕಾರಿನಿಂದ ಬಿದ್ದು ಕೈಕಾಲು ಮುರಿದುಕೊಳ್ಳುವುದು—ಇವೆಲ್ಲ ಅವಘಡಗಳು.

**ದೇಸಾಯಿ:**—ನಮ್ಮ ಕೈಕಾಲು ಮುರಿದುಹೋಗದಷ್ಟು ಮುಂಜಾಗ್ರತೆ ನಾವು ಮಾಡುವುದಿಲ್ಲವೆ? ನನ್ನನ್ನು ನೋಡಿದರೆ ಅಂಥ ಪೆಟ್ಟು ತಗಲಿದ ಕುರುಹುಗಳೇನಾದರೂ ಕಾಣುತ್ತವೆಯೋ? ನಮಗೇನು ಜೀವದಾಶೆ ಇಲ್ಲವೇ?

ಈ ಪ್ರಶ್ನೆಗೆ ಉತ್ತರ ಬರುವಾಗ ಶಾಂತಿಯುನು ಕೂತಲ್ಲಿಂದ ಎದ್ದು 'ಹಾಗಲ್ಲ, ಜಟಕಾಭೂತ ಹಿಡಿದಂತೆ ಹೀಗೆ ಕಾರು ಓಡಿಸುವಾಗ ಯಾರಾದರೂ ಮುದುಕರು, ಅಪಂಗುಗಳು, ನಾಯಿಬೆಕ್ಕುಗಳು ನಿಮ್ಮ ಕಾರಿನ ಅಡಿಗೆ ಬಿದ್ದು ಜಜ್ಜಿಹೋಗಲಿಲ್ಲವೇ?' ಎಂದು ಹುಬ್ಬುಗಳನ್ನು ಎತ್ತಿ ಪುನಃ ಪ್ರಶ್ನಿಸಿದನು.

**ದೇಸಾಯಿ:**—(ತನ್ನ ಗೆಳೆಯನ ಕಡೆಗೆ ನೋಡಿ) ಹಾಗೊ! ಅದೆಲ್ಲಿ ನಮಗೆ ತಪ್ಪಿದೆ? ಅದರ ಎಣಿಕೆ ಇಟ್ಟವರ್‍ಯಾರು?

**ಪೆಂಡೆಕಾರ:**—ನಗುತ್ತ—ಅದು ನಿಜ; ಕಾರು ಜೋರಿನಿಂದ ಓಡುವಾಗ ಅದೇ ಒಂದು ತಮಾಷೆ!

**ದೇಸಾಯಿ:**—'ಹೌದ್ಹೌದು, ಹಾಗೆ ಪ್ರಾಣಿಗಳು ನಮಗೆ ಅಡ್ಡ ಬಂದಾಗ ಅವು ಎಡಕ್ಕಾಗಲಿ ಬಲಕ್ಕಾಗಲಿ ಹೋಗುವಂತೆ ನಮಗೆ ವಿರಾಮವೆಲ್ಲಿದೆ? ಆ ಮುದಿ ಕೋಳಿ ಒಂದು ಸಿಕ್ಕಿಲ್ಲವೆ, ಮಿಸ್ಟರ್ ಪೆಂಡೆಕಾರ್, ಅದು ಎಷ್ಟು ರಭಸದಿಂದ ಅಡ್ಡ ಹಾದು ತನ್ನ ಮರಿಗಳ ಕಡೆಗೆ ಹೋಗುತಿತ್ತು! ಆದರೆ ಅದೆಲ್ಲಿ, ನಮ್ಮ ಓಟವೆಲ್ಲಿ? ಅದು ಅಡಿಗೆ ಬಿದ್ದು ಜಜ್ಜಿ ಹೋಯಿತು.' ಎಂದು ಕಿರುನಗೆ ನಕ್ಕನು. ಆದರೆ ಆ ಮಾತುಗಳನ್ನು ಕೇಳಿದವರಿಗೆ ಮಾತ್ರ ನಗು ಬರಲಿಲ್ಲ. ದೇಸಾಯಿಯು ಮಾತುಗಳನ್ನು ಸಮರ್ಥಿಸುವುದಕ್ಕೆ ಪೆಂಡೆಕರನು ಬಾಯಿ ಎತ್ತಿ ಇನ್ನೂ ಕೆಲವು ಅಂಥ ದೃಷ್ಟಾಂತ

ಗಳನ್ನು ಹೇಳುತ್ತಾ, ಕೊನೆಗೆ 'ಮಿ! ದೇಸಾಯಿ! ಇನ್ನೊಂದು ಸಂಗತಿ, ಇಂದಿನದೇ! ನಮ್ಮ ಕಾರ್ ಬರುವಾಗ ತನ್ನ ಕೈಯಲ್ಲಿ ಹಿಡಿದ ಕಾಡುಹೂಗಳನ್ನು ನಮಗೆ ಕೊಡಲಿಕ್ಕೆಂದು ಕೈಚಾಚಿ ಮಾರ್ಗದಲ್ಲಿ ಅಡ್ಡ ನಿಂತ ಆ ಪಿಳ್ಳೆಯ ವಿಚಾರ ನೋಡಿ! ಅವನು ದಾರಿಯಲ್ಲಿ ದೆವ್ವ ಬಡಿದವನಂತೆ ನಿಂತಿದ್ದಾನೆಂದು ಕಾರನ್ನು ನಿಲ್ಲಿಸಲಿಕ್ಕಾಗುತ್ತದೆಯೆ?'

**ಹೊಟೆಲಿನವ:**—'ಆ ಮಗುವಿಗೇನಾಯಿತು!' ಎಂದು ಕಾತರನಾಗಿ ಕೇಳಿದನು.

**ದೇಸಾಯಿ:**—ಆಗೋದೇನು? ದಾರಿಯಲ್ಲಿ ಬಿದ್ದು ಅಲ್ಲಿಯೆ ಒಂದು ಪಲ್ಟಿ ಹೊಡೆಯಿತು; ಅಷ್ಟೆ. ಅಲ್ಲಿಂದ ಬದಿಯಲ್ಲಿರುವ ಹಳ್ಳಕ್ಕೆ ಬಿದ್ದಿರಬೇಕು.

**ಶಾಂತಿ:**—ಆಗ ನೀವು ಕಾರ್ ನಿಲ್ಲಿಸಿ, ಆ ಮಗುವಿನ ಗತಿಯೇನಾಯಿತು ಎಂದು ನೋಡಿದಿರಾ!

**ದೇಸಾಯಿ:**—ಕಾರ್ ನಿಲ್ಲಿಸುವುದು! ಇದು ಒಳ್ಳೆ ಕೆಲಸ! ಆ ಮಗುವಿಗೆ ಏನೂ ಅಪಾಯ ಬಂದಿರಲಾರದು.

**ಶಾಂತಿ:**—ಆದರೂ ನೀವು ಹೋಗಿ ವಿಚಾರಿಸಲಿಲ್ಲ!

**ದೇಸಾಯಿ:**—ಆ ಬಡ ತಿರುಕುಳಿ ಕುನ್ನಿಯ ವಿಚಾರವೆ? ಅಂಥ ಎಷ್ಟು ಮಕ್ಕಳು ದಾರಿಯಲ್ಲಿ ನಮಗೆ ಅಡ್ಡ ಬರುವುದಿಲ್ಲ! ಅವರ ವಿಚಾರ ಮಾಡುತ್ತಾ ನಿಂತರೆ ನಮ್ಮ ಆಯುಷ್ಯ ತೀರೀತು.

**ಶಾಂತಿಯು:**—'ಅದು ನಿಜ' ಎನ್ನುವಷ್ಟರಲ್ಲಿ ಶಾಂತಿಯನು ಅವನ ತೀರಾ ಸಮೀಪಕ್ಕೆ ಹೆಜ್ಜೆಯಿಟ್ಟು ತನ್ನ ಸೊಂಟದ ಒರೆಯಲ್ಲಿದ್ದ ಕತ್ತಿಯನ್ನು ಹಿರಿದನು. 'ದೂರ ಸರಿ' ಎಂದು ಭಯಗೊಂಡ ದೇಸಾಯಿಯು ಒದರುವಷ್ಟರಲ್ಲಿ ಬಲವಾಗಿ ಅವನ ಕುತ್ತಿಗೆಯನ್ನು ಒತ್ತಿ ಹಿಡಿದು ಕೋಳಿಯ ಕೊರಳು ಕಡಿದಂತೆ ಕೊಯ್ದುಬಿಟ್ಟನು. ದೇಸಾಯಿಯು ಗಾಯಪಡೆದು 'ಅಯ್ಯಯ್ಯೊ!' ಎಂದು ನೆಲಕ್ಕೆ ಉರುಳಿದನು. ಹೊಟೆಲಿನಲ್ಲಿ ಗಲಭೆ ಎದ್ದಿತು. ಪೆಂಡೆಕರನು 'ಕೊಲೆ, ಕೊಲೆ! ಭಯಂಕರ ಕೊಲೆ!' ಎಂದು

ಬೊಬ್ಬಿರಿಯುತ್ತ ಬೀದಿಗೆ ಓಡಿದನು. ಅಷ್ಟರಲ್ಲಿ ಪೋಲೀಸಿನವರು ಅಲ್ಲಿಗೆ ಓಡಿಬಂದರು. ಒಬ್ಬನು ತಾಂತಿಯನ ಕೈಗೆ ಕೋಳವನ್ನು ಬಿಗಿದನು.

ಆ ಮೇಲೆ ಹೊಟೆಲಿನ ಯಜಮಾನನನ್ನು ಕರೆದು ಪೋಲಿಸಿನವನು 'ಇದು ಹೇಗಾಯಿತು?' ಎಂದು ವಿಚಾರಿಸಿದನು. ಕೊಲೆಯಲ್ಲಿ ತನ್ನನ್ನೂ ಅಪರಾಧಿಯಾಗಿ ಮಾಡುತ್ತಾರೊ ಏನೊ ಎಂದು ಗಾಬರಿಯಿಂದ ಹೊಟೆಲಿನವನು ನಡುಗುತ್ತಿದ್ದನು. ಹಿಂದೆ ತಾಂತಿಯನಿಂದ ಅನೇಕ ಉಪಕಾರ ಪಡೆದವನಾದ್ದರಿಂದ ಅವನ ಮೇಲೆ ದೂರು ಹೊರಿಸಲಿಕ್ಕೆ ಆತನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಈ ಸಮಾಚಾರ ಊರೂರು ಹಬ್ಬಿದರೆ ತನ್ನ ಹೊಟೆಲನ್ನೆ ಮುಚ್ಚಬೇಕಾದೀತೆಂಬ ಭಯದಿಂದ ಅವನು ನಡೆದುದನ್ನೆಲ್ಲ ವಿವರಿಸಿದನು. ಅದರಲ್ಲಿ, ಒಂದು ಮಗುವಿನ ಮೇಲೆ ಅವರ ಮೋಟರಕಾರು ಹೋಯಿತು ಎನ್ನುವ ವರೆಗೆ ತಾಂತಿಯನಲ್ಲಿ ಕೊಲೆಯ ಉದ್ದೇಶವಿತ್ತೆಂದು ಯಾರಿಗೂ ಹೊಳೆಯಲಿಲ್ಲ. ಅದನ್ನು ಕೇಳಿದೊಡನೆ ಆತನು ಎಚ್ಚರ ತಪ್ಪಿದಂತಾಗಿ ಈ ಭಯಂಕರ ಕೃತ್ಯವನ್ನು ಮಾಡಿದನು ಎಂದು ಹೇಳಿದನು. ಆಗ ಪೋಲಿಸ ಜಮಾದಾರನು ತಾಂತಿಯನ ಕಡೆಗೆ ನೋಡಿ 'ನಾವು ಹೇಳಿದ್ದಲ್ಲಿಗೆ ಸುಮ್ಮನೆ ಬರುವೆಯಾ! ಇಲ್ಲವೆ ನಿನ್ನ ಕಾಲುಗಳಿಗೂ ಬೇಡಿಯನ್ನು ಸಿಕ್ಕಿಸಬೇಕೊ?' ಎಂದು ಕೇಳಿದನು.

'ನೀವು ಹೇಳಿದ್ದಲ್ಲಿ ಬರಲು ಸಿದ್ಧನೆ. ಆದರೆ ಒಂದೆರಡು ಮಾತು ಹೇಳಿ ಮುಗಿಸಲಿಕ್ಕೆ ಮಾತ್ರ ಬಿಡಿರಿ! ಆ ಮೂಟೆಯನ್ನು ಮೊದಲು ಬಿಡಿಸಿ ನೋಡಿರಿ. ಆ ಮೇಲೆ ನನ್ನ ಕೃತ್ಯದಲ್ಲಿ ಏನು ಅನ್ಯಾಯವೆಂದು ಹೇಳಿರಿ!' ಎಂದು ಮೂಟೆಯ ಕಡೆಗೆ ಬೆರಳು ತೋರಿಸಿದನು. ಪೋಲಿಸಿನವನು ಗಂಟನ್ನು ಬಿಚ್ಚಿದಾಗ ಅದರಲ್ಲಿ ಒಂದು ಮಗುವಿನ ಮೃತದೇಹ! ಒಳಗಿಂದ ಹೊಸ್ತಿಲು ಬಳಿಯಲ್ಲಿ ನಿಂತು ನೋಡುತಿದ್ದ ಆ ಹೊಟೆಲಿನವನ ಹೆಂಡತಿ ಅದನ್ನು ನೋಡಿ 'ಅಯ್ಯೊ! ತಾಂತಿಯನ ಕೂಸು!' ಎಂದು ಒದರಿ ಸ್ಮೃತಿ ತಪ್ಪಿ ಬಿದ್ದಳು.

ಮಗುವಿನ ಕೈಯಲ್ಲಿ ಹೂವಿನ ಚೆಂಡೊಂದು. ಮೋರೆಯ ಮೇಲೆ ನಸುನಗು! ತಲೆಯ ಮುಂಗುರುಳುಗಳು ಬಾಚಿದಂತೆ ಇದ್ದುವು. ಅದನ್ನು ನೋಡಿದವರೆಲ್ಲರ ಕಣ್ಣುಗಳು ಒದ್ದೆಯಾದವು.

'ಈಗ ನೋಡಿ! ಈ ನನ್ನ ಮುದ್ದು ಕಂದನು ಕಾರು ಬರುವ ದಾರಿಯಲ್ಲಿ ಹೂವಿನ ಚೆಂಡನ್ನು ಹಿಡಿದು ಕೈಚಾಚಿ ಕಾರಿನವರಿಗೆ ಅದನ್ನು ಕೊಡಲಿಕ್ಕೆ ಉತ್ಸಾಹ ತೋರಿಸಿದನು. ನಾನು ಕೆಲವೇ ಹೆಜ್ಜೆ ಹಿಂದೆ ಇದ್ದೆ. ಕಾರು ಡಿಕ್ಕಿ ಹೊಡೆದು ನನ್ನ ಮುದ್ದು ಕಂದನು ಮಡಿದನು! ಇನ್ನು ನನಗೆ ಇಹದಲ್ಲಿ ಯಾರಿದ್ದಾರೆ? ಆತನ ದೇಹವಿದು. ಅದನ್ನು ಒಮ್ಮೆ ಎತ್ತಿ ಹಿಡಿದು ಮುತ್ತು ಕೊಡಲೇ?' ಎಂದು ಪೋಲಿಸ ಜವಾದಾರನನ್ನು ಕೇಳಿದನು. ಜವಾದಾರನು ಕೂಡಲೆ ಅವನ ಬೇಡಿಗಳನ್ನು ಕಳಚಿದನು. ಅನಂತರ ತಾಂತಿಯನು ತನ್ನ ಮಗುವನ್ನು ಎತ್ತಿ ತನ್ನ ಎದೆಗೆ ಅವುಚಿಕೊಂಡು 'ನನ್ನ ಕಂದಾ! ಹೆದರಬೇಡ! ನಿನ್ನ ಹಿಂದೆಯೇ ನಾನು ಇದ್ದೇನೆ. ನಿನ್ನನ್ನು ಬಿಟ್ಟು ಹೋಗಲಾರೆ! ಸರ್ವಥಾ ಹೋಗಲಾರೆ!' ಎಂದು ಹೇಳಿ ಮುತ್ತು ಕೊಟ್ಟವನೇ 'ಹರಿ, ಹರಿ!' ಎಂದು ನೆಲಕ್ಕೆ ಒರಗಿದನು. ಅವನ ಎದೆಯೊಡೆದು ಪ್ರಾಣವು ಹಾರಿಹೋಗಿತ್ತು. 'ಪ್ರೇಮದ ಮಹಾತ್ಮೆ ಇದು' ಸೇಟಜಿಯು ಕೂತಲ್ಲೆ ಕಣ್ಣುಮುಚ್ಚಿ ಗೋಡೆಗೆ ಒರಗಿದನು.

---

## ೯ನೆ ಅಧ್ಯಾಯ

## ಸೇಟಜಿಯು ಗಹನ ವಿಚಾರಗಳು

ಈ ನೋಟವನ್ನೆಲ್ಲ ನೋಡಿ ಮರಕಟ್ಟಿದವನಂತೆ ತಟಸ್ಥನಾಗಿದ್ದ ಸೇಟಜಿಯು ಜನರೆಲ್ಲರೂ ಗುಂಪು ಕೂಡಿ ಹೊಟೆಲಿನ ಸುತ್ತಲೂ ನೆರೆದಾಗ ಮೆಲ್ಲಗೆ ಹೊರಗೆ ಇಳಿದು ಬೀದಿಗೆ ಬಂದನು. ಈ ಭಯಂಕರ ಸ್ಥಿತಿಯು ಅವನಲ್ಲಿ ಶಿರೋಭ್ರಮಣ ಉಂಟುಮಾಡಿತ್ತು. ಹೇಗೊ ಬೆಳಗಾಗುವವರೆಗೆ ರಸ್ತೆಯಲ್ಲಿ ಮುಂದರಿಸುವುದೇ ಅವನ ಉದ್ದೇಶ. ಹಿಟ್ಟು ಚೆಲ್ಲಿದಂತಿರುವ ಬೆಳದಿಂಗಳು, ತಂಪಾದ ಗಾಳಿ ಇವುಗಳಿಂದ ಅವನ ಬಿಸಿಯಾದ ತಲೆಯು ತಂಪಾಯಿತು. ದಣುವಿಲ್ಲದೆ ನಡೆಯಬಹುದೆಂಬ ಕಾಂಕ್ಷೆಯಿಂದಲೂ ಈ ನೋಟವನ್ನು ಮರೆಯಬೇಕೆಂಬ ಉತ್ಸುಕತೆಯಿಂದಲೂ ಅವನು ಕಾಲು ಹಾಕುತಿದ್ದನು. ಆದರೆ ಅದನ್ನು ಮರೆಯಿಸುವ ಪ್ರಯತ್ನವು

ಕೈಸಾಗಲಿಲ್ಲ. 'ನಿನ್ನೆ ಕಂಡ ತಾಂತಿಯನು, ಚೆನ್ನಾಗಿ ಬಲಿತ ಪುಷ್ಪನಾದ ತಾಂತಿಯನು, ಯಾವೊಂದು ಕೈಏಟು ಇಲ್ಲದೆ ಜೀವವನ್ನು ತೊರೆದನು! ಏನಾಶ್ಚರ್ಯ! ತಾಂತಿಯನ ಉದಾರಬುದ್ಧಿ, ದೀನರಕ್ಷಣೆಯ ಉತ್ಸಾಹ ಇವೆಲ್ಲ ನಾನು ಆತನನ್ನು ಕಂಡ ಬರಿ 24 ತಾಸುಗಳೊಳಗೆ ಮಣ್ಣು ಮುಕ್ಕಿದವೆಂದರೆ ಇದೇನು ವಿಚಿತ್ರ ದೈವಲೀಲೆ! ಮಗುವನ್ನು ನಿರ್ದಾಕ್ಷಿಣ್ಯ ದಿಂದ ಕೊಲೆಮಾಡಿದ ದೇಸಾಯಿಗೂ ಆತನಿಗೆ ಪ್ರತೀಕಾರ ಮಾಡಿದ ತಾಂತಿಯನಿಗೂ ವಿಚಿತ್ರ ತರದ ಮರಣಶಿಕ್ಷೆಯಾಯಿತಲ್ಲ! ಇದು ನ್ಯಾಯವೇ? ಊರವರ ದೃಷ್ಟಿಯಲ್ಲಿ, ಮಹಾಜನರ ದೃಷ್ಟಿಯಲ್ಲಿ ತಾಂತಿಯನು ಕೊಲೆ ಗಾರನು! ದೇಸಾಯಿಯ ಗುಣಕಥನವನ್ನು ಎಷ್ಟೋ ಪತ್ರಿಕೆಗಳು ಅತಿಶಯ ರೀತಿಯಿಂದ ಮಾಡುವವು! ತಾಂತಿಯನು ಸಾಯದಿದ್ದರೆ ಅವನಿಗೆ ಫಾಶೀ ಶಿಕ್ಷೆಯೇ ಪರಿಣಾಮವಿತ್ತು! ಆದರೆ ಇವರಿಬ್ಬರಲ್ಲಿ ಯಾರ ಆತ್ಮವು ದೊಡ್ಡದು ಎಂದು ವಿಚಾರಮಾಡುವವರೇ ಇಲ್ಲ. ತಾಂತಿಯನಿಗೆ ಅಳುವವರೂ ಇಲ್ಲ! ಆದರೆ ಯಃಕಶ್ಚಿತ್ ದರೋಡೆಕಳ್ಳ ತಾಂತಿಯನು ತನ್ನ ಕಂದನ ಮೇಲಣ ಪ್ರೇಮದಿಂದ, ಅದನ್ನು ಹಿಂಬಾಲಿಸುವ ತವಕದಿಂದ ಥಕ್ಕನೆ ಜೀವ ತೊರೆದ ನೆಂದರೆ ಆ ಪ್ರೇಮದ ಸಾಮರ್ಥ್ಯವೆಂಥದ್ದು! ಆ ಮನೋದಾರ್ಢ್ಯವೆಂಥದ್ದು! 'ದೈವೀ ವಿಚಿತ್ರಾ ಗತಿಃ!'

ಹೀಗೆ ವಿಚಾರಮಾಡುತ್ತ ತಿಂಗಳ ಬೆಳಕಿನಲ್ಲಿ ಜಗ್ಗುತ್ತ ನಡೆಯುತಿದ್ದ ಸೇಟಜಿಯ ದಾರಿಯು ಸಮುದ್ರಕರಾವಳಿಯ ಒತ್ತಾಗಿ ಬಂತು. ಸಮುದ್ರದ ಮೇಲಿನಿಂದ ಕೇಳಿಸುತಿದ್ದ ಕಿರುಗರ್ಜನೆಯು ಸೃಷ್ಟಿಯ ಮೊರೆಯೆಂಬಂತೆ ಕೇಳಿಸಿತು. ಸೃಷ್ಟಿಯಲ್ಲಿ ನಡೆಯುತಿದ್ದ ಅನಾಚಾರ, ಅವಿಚಾರಗಳಿಂದ ಪ್ರಕೃತಿಯು ಬೆಂದು ಬಸವಳಿದು ಭಗವಂತನಿಗೆ ಈ ಶಾಂತವಾದ ರಾತ್ರಿ ಯಲ್ಲಿ ಕೈಜೋಡಿಸಿ ಬೇಡಿಕೊಳ್ಳುವಂತೆ ಕೂಗುವಂತೆ ಕೇಳಿಸಿತು. ಎಲ್ಲಿ ಹೋಗುತ್ತೇನೆಂಬ ವಿಚಾರವಿಲ್ಲದೆ ಸೇಟಜಿಯು ವ್ಯಾಕುಲಚಿತ್ತನಾಗಿ ಎಚ್ಚರ ದಪ್ಪಿದಂತಾಗಿ ಕಾಲುಹಾಕುತಿದ್ದನು. ಈಗ ಅವನ ಮನಸ್ಸಿನಲ್ಲಿ ಸೇಟ ಜಿಯು ಏಕಾಕಿಯಾಗಿ ತೀರಾ ಪರದೇಶಿಯಾಗಿದ್ದು ತನಗಾಗಿ ಅಳುವ ನೆಂಟರಿಷ್ಟರಿಲ್ಲದೆ ಮೃತ್ಯುದೇವತೆಯ ಆಗಮನವನ್ನು ಹಾರೈಸಿ ಹಾತೊರೆಯು

ತಿದ್ದಂತೆ ಕಂಡಿತು. ಹೀಗೆ ನಡಿಯುತ್ತಿರುವಾಗ ದೂರದಿಂದ ಮಿಣುಗುವ ಬೀದಿದೀಪಗಳು ಆತನಿಗೆ ಕಾಣಿಸಿದುವು. ಚಿಕ್ಕದೊಂದು ಪೇಟೆಯನ್ನು ತಾನು ಪ್ರವೇಶಿಸುತ್ತೇನೆಂದು ಬೋಧೆಯಾಯಿತು. ರಾತ್ರೆ ಬಹಳವಾದ್ದರಿಂದ ಮನೆ-ಅಂಗಡಿಗಳ ಬಾಗಿಲುಗಳನ್ನೆಲ್ಲ ಹಾಕಿದ್ದರು. ಗಸ್ತಿನ ಪೋಲೀಸಿ ನವನು ಸೇಟಜಿಗೆ ಎದುರಾದನು. 'ಎಲ್ಲಿಂದ ಈ ಅಪರಾತ್ರಿಯಲ್ಲಿ ಬರುವೆ?' ಎಂದು ಆತನು ಸೇಟಜಿಗೆ ಕೇಳಿದನು. ಸೇಟಜಿಯು ಉತ್ತರ ಕೊಟ್ಟನು. 'ಅಲ್ಲಿ ಒಂದು ಭಯಂಕರ ಕೊಲೆಯಾಯಿತಂತೆ! ದೇಸಾಯಿಯವರನ್ನು ಯಾರೊ ಕೊಂದರಂತೆ! ಹೌದೇ?' ಎಂದು ಪೋಲೀಸಿನವನ ಪ್ರಶ್ನೆ. 'ಹೌದು!' ಎಂದು ಸೇಟಜಿಯ ಉತ್ತರ. 'ಕೊಲೆಪಾತಕಿಯನ್ನು ಹಿಡಿದರೇ?'

'ಹೌದು!'

'ಯಾರು?'

'ಯಮನು!'

ಪೋಲೀಸಿನವನಿಗೆ ಆಶ್ಚರ್ಯವಾಯಿತು. 'ಮುದುಕಾ! ನನ್ನನ್ನು ಗೇಲಿಮಾಡುತ್ತೀಯಾ?' ಎಂದು ಪೋಲಿಸಿನವನು ಅಂದನು. 'ಖೂನಿ ಮಾಡಿದ ತಾಂತಿಯನು ಖಂಡಿತವಾಗಿಯೂ ಹೊಟಲಿನಲ್ಲಿಯೇ ಸತ್ತು ಬಿದ್ದನು' ಎಂದು ಸೇಟಜಿಯು ನಡೆದ ಸಮಾಚಾರವನ್ನೆಲ್ಲ ವಿವರಿಸಿದನು. ಹಳ್ಳಿಯ ಪೋಲಿಸಿನವರಲ್ಲಿ ತಾಂತಿಯನ ಉದಾರತ್ವಕ್ಕೆ ನಾಲಿಗೆ ಚಾಚದ ಪೋಲಿಸಿನವರು ಬಹಳ ಕಡಿಮೆ. ಹೀಗಾಗಿ ಅವನು ಸರಕಾರದವರ ಕೈ ಯಿಂದ ಇದುವರೆಗೆ ತಪ್ಪಿಸಿಕೊಂಡು ಮಿಂಚಿನಂತೆ ಅಲ್ಲಲ್ಲಿ ಕಂಡು ಮಾಯ ವಾಗುತ್ತಿದ್ದನು. ಪೋಲಿಸಿನವನು ತಾಂತಿಯನ ವಿಚಿತ್ರಮರಣವನ್ನು ಕುರಿತು ಕೇಳಿ ತಲೆಬಾಗಿಸಿ ಮುಂದೆ ಸರಿದನು. ಮುದುಕನು ಮುಂದಕ್ಕೆ ನಡೆದನು. ಮತ್ತು ಹರಕು ಗುಡಿಸಲಿನ ಹೊರಜಗಲಿಯನ್ನು ಸೇರಿ ಅಲ್ಲಿ ದಣುವಾರಿಸಲು ಕುಳಿತುಕೊಂಡನು. ಅಲ್ಲಿ ಅವನಲ್ಲಿ ಹೊಸ ವಿಚಾರಗಳು ತಲೆದೋರಿ ದುವು. 'ಈ ನಾಯಿಮರಿಯ ಜೀವರಕ್ಷಣೆ ವಿಚಿತ್ರರೀತಿಯಿಂದ ಆಯಿತು. ನಿರಪರಾಧಿಯಾದ ಬಾಲಕನು—ತಾಂತಿಯನ ಮಗನು—ಕಾರಿನ ಅಡಿಗೆ ಬಿದ್ದು ಸತ್ತನು. ಹಾಗಿದ್ದರೆ ಇಂಥ ಕ್ಷಣಿಕ ಜೀವನದ ಉಪಯೋಗವೇನು?

ಅಥವಾ ಮನುಷ್ಯವರ್ಗವು ಪಾರಂಪರ್ಯವಾಗಿ ಬೆಳೆಯುವುದರ ಉದ್ದೇಶ ವೇನು? ಈಗ ನಾನೇ ತೀರಾ ಬಡವನಾಗಿ ಜೀವನವನ್ನು ಆರಂಭಿಸಿದೆ. ಆ ಮೇಲೆ ವಿಪುಲ ಧನದ ರಾಶಿಯಲ್ಲಿ ಓಲಾಡಿದೆ. ಈ ಧನದಿಂದ ಸಿಕ್ಕಿದ ಸುಖವೇನು? ನನ್ನ ಹೆಂಡತಿ ಮಕ್ಕಳ ಅಕಾಲಮರಣ, ನಾನು ಬಡತನದ ಕುಟುಂಬದಿಂದ ಆಯ್ದು ಸಂರಕ್ಷಿಸಿ ದೊಡ್ಡದಾಗಿ ಮಾಡಿದ ಕನ್ಯೆಗೆ ಆ ದುಡ್ಡಿನ ಮೇಲೆ ಕಣ್ಣಲ್ಲದೆ ನನ್ನ ಮೇಲೆ ವಿಶ್ವಾಸವಿಲ್ಲ, ಉಪಕಾರಸ್ಮರಣೆ ಕೂಡಾ ಇಲ್ಲ. ಈ ತಾಂತಿಯನು ನನ್ನ ಕಡೆಗೆ ತೋರಿಸಿದ ಉದಾರ ಬುದ್ಧಿಯ ಪ್ರತಿಫಲವಾಗಿ ಆತನಿಗೆ ನಾನು ಹಣ ಕೊಟ್ಟರೆ ಅದನ್ನು ಬೀದಿಗೆ ಎಸೆದುಬಿಡುತ್ತಿದ್ದನೊ ಏನೊ! ಅವನಿಗೆ ಕಸುಕೊಳ್ಳುವುದರಲ್ಲಿ ಪ್ರೇಮ, ಆತನು ಇತರರ ಸಹಾಯಧನಕ್ಕೆ ಕೈಯೊಡ್ಡುವವನಲ್ಲ. ಆತನ ಮಗುವಿ ಗಾದರೂ ಯಾರಿಗೂ ತಿಳಿಯದಂತೆ ಸಹಾಯಮಾಡಿ ಒಳ್ಳೆ ಸ್ಥಿತಿಗೆ ತಂದು ಸಭ್ಯನಾಗಿ ಮಾಡಬೇಕೆಂದು ನನ್ನ ಆಸೆಯಿತ್ತು. ಅದು ಮೊಳಿಕೆಯಲ್ಲಿಯೇ ಮುರಿದುಹೋಯಿತಲ್ಲ! ಹಾಗಿದ್ದರೆ ಹಣವಿದ್ದರೆ ಅದರಿಂದ ತಾನು ಸುಖ ಪಡೆಯಬಹುದು, ಇತರರಿಗೆ ಸುಖ ಕೊಡಬಹುದು ಎಂಬ ಮಾತು ತೀರಾ ಸುಳ್ಳು. ಭಿಕೂ ಪಂಡಿತನಿಂದ ಮೊದಲ್ಗೊಂಡು ನಾನು ಕಂಡವರಿಗೆಲ್ಲ ತಮ್ಮ ಬಡತನದಲ್ಲಿಯೇ ಹೀನಸ್ಥಿತಿಯಲ್ಲಿಯೇ ತೃಪ್ತಿಯಿದೆಯಲ್ಲ! ಹೇರಳ ಹಣವನ್ನು ವೆಚ್ಚಮಾಡಿ ಜನೋಪಕಾರಕ್ಕೆ ಸ್ಥಾಪಿಸಿದ ಹಲವು ಸಂಸ್ಥೆಗಳು ಇವೆ. ಅವುಗಳಿಂದ ನಿಜವಾಗಿ ಪ್ರಯೋಜನವನ್ನು ಹೊಂದುವವರು ಯಾರು? ಕೆಲವರಿಗೆ ಅವರ ಚಾಲಕತ್ವಕ್ಕಾಗಿ ದೊಡ್ಡ ದೊಡ್ಡ ಬಿರುದು ಬಹುಮಾನಗಳು ಸಿಗಬಹುದು. ಆದರೆ ಯಾರ ಹಿತಕ್ಕಾಗಿ ಉದ್ಧಾರಕ್ಕಾಗಿ ಈ ಸಂಸ್ಥೆಗಳು ಹಣವನ್ನು ವೆಚ್ಚಮಾಡುತ್ತವೊ ಅವರಿಗೆ ನಿಜವಾಗಿ ಈ ವ್ಯಯದ ಪ್ರಯೋಜನ ಸಿಗುತ್ತದೆಯೇ? ಆ ಸಂಸ್ಥೆಗಳ ಹೆಸರೇ ಕೇಳದ ಅಪಂಗುಗಳು, ಅಂಗವಿಹೀನರು, ದಾರಿದ್ರ್ಯಪೀಡಿತರು ಲಕ್ಷೋಪಲಕ್ಷ ಮಂದಿ ಇದ್ದಾರೆ. ಅವರು ತಮ್ಮ ಊನಗಳನ್ನು ಬಹಳ ತಾಳ್ಮೆಯಿಂದ ಸಹಿಸುತ್ತಾರೆ. ಯಾರಿಗೆ ಸಹಾಯವು ಅಗತ್ಯವಿಲ್ಲವೊ ಅಂಥವರು ಈ ಧರ್ಮದ ಸಹಾಯವನ್ನು ಹೊಂದುತ್ತಾರೆ. ಇದರಿಂದ ಲಂಚ ರುಷುವತ್ತು ಎಷ್ಟು ಜನರ ಕಿಸೆಗಳನ್ನು ತುಂಬಿ ಕಣ್ಮರೆಯಾಗುತ್ತದೆ? ದೇವರ ಹೆಸರಿನಲ್ಲಿ

ಎಷ್ಟು ದೇವಾಲಯುಗಳಿಗೆ ಕಾಣಿಕೆ ವಂತಿಗೆ, ಹರಕೆಗಳು ಬರುವುದಿಲ್ಲ! ಅವು ಯಾರ ಜೇಬಿಗೆ ಸೇರುತ್ತವೆ? ಸಮಾಜದಲ್ಲಿರುವ ನಿರ್ಗತಿಕರಿಗೆ, ಅಂಗಹೀನರಿಗೆ, ವೃದ್ಧಾಪ್ಯದಿಂದ ಬಳಲುವವರಿಗೆ ಈ ದೇವರ ಕಾಣಿಕೆ ದುಡ್ಡು ಸಹಾಯದ ಕೈಯನ್ನು ನೀಡುತ್ತದೆಯೇ? ಇಲ್ಲ. ದೇವರ ಹೆಸರೆತ್ತಿ ಸಂಗ್ರಹಿಸಿದ ದುಡ್ಡು ಯಾರ್ಯಾರ ಜೇಬಿಗೆ ಸೇರುತ್ತದೆ! ಅವರೇ ಸಮಾಜ ಸ್ಥಂಬರಾಗುತ್ತಾರೆ; ಮಾರ್ಗದರ್ಶಕರಾಗುತ್ತಾರೆ. ಅವರಿಗೆ ಎದುರಾಡುವು ದಕ್ಕೆ ಕೋರ್ಟು-ಕಚೇರಿಗಳು ಕೂಡಾ ಹೆದರುತ್ತವೆ. ದೇವರ ಹೆಸರಿನಿಂದ ಇಂಥ ಅನ್ಯಾಯಗಳು ನಿರ್ಭೀತಿಯಿಂದ ನಡೆಯುವುದಾದರೆ ಆ ದೇವರು ಏತಕ್ಕೆ ಸುಮ್ಮನಿದ್ದಾನೆ! ಅದೂ ದೇವರಿಗೆ ಒಂದು ಆಟವೇ! ಅಥವಾ ದೇವರೊಬ್ಬನು ಉಂಟೆಂದು ಹೇಳುವುದು ಏನೂ ಅರಿಯದ ಜನಗಳಿಗೆ ಗುಮ್ಮನೆಂದು ಬೆದರಿಸುವ ಬಗೆಯ ಒಂದು ವೈಚಿತ್ರ್ಯವೇ?'

'ಹಾಗೆನ್ನಲು ಬರುವುದಿಲ್ಲ. ಹಲವೊಂದು ವೇಳೆ ಮಾಡಿದ ಅಪ ರಾಧಕ್ಕೆ ವಿಚಿತ್ರರೀತಿಯಿಂದ, ಅನಿರೀಕ್ಷಿತ ರೀತಿಯಿಂದ ಶಿಕ್ಷೆ ಸಿಗುತ್ತದೆ. ಸರಕಾರದಲ್ಲಿ ಅಪರಾಧಿಯು ಶಿಕ್ಷೆಯಿಂದ ತಪ್ಪಿಸಿಕೊಳ್ಳಲಿ, ಆದರೂ ಹೆಚ್ಚು ಕಡಿಮೆ ಕಾಲದೊಳಗೆ ಯಾವುದೊಂದು ರೂಪದಿಂದ ಅವನಿಗೆ ಶಿಕ್ಷೆ ದೊರಕುತ್ತದೆ. ಇಂಥ ಶಿಕ್ಷೆರಕ್ಷೆಯ ಕರ್ತನು ಯಾರು? ವನ್ಯಸ್ಥಿತಿಯಲ್ಲಿ ಮನುಷ್ಯನು ನೀತಿ ಅನೀತಿಗಳ ತುಲನೆಯಲ್ಲಿ ವಿಚಕ್ಷಣನಲ್ಲದಿರಬಹುದು, ಆ ವಿಚಾರವು ಅವನಿಗೆ ಶಿಕ್ಷಣಬಲದಿಂದಲೆ ಒದಗುತ್ತದೆ. ಅವನ ಮನ ಸ್ಸಾಕ್ಷಿಯು—ಅವನ ವಿಚಾರಾತ್ಮಕ ಬುದ್ಧಿಯು—ಅವನಿಗೆ ನ್ಯಾಯವಾದ ತೀರ್ಮಾನಗಳನ್ನು ಕೊಡುತ್ತದೆ. ಆಗ ಅವನಿಗೆ ಜೀವನದಲ್ಲಿ ಬರೆ ಉದರ ಭರಣಕ್ಕಿಂತಲೂ ಮೇಲ್ಪಟ್ಟ ಉತ್ತಮ ಧ್ಯೇಯವಿದೆ ಎಂದು ಹೊಳೆಯು ತ್ತದೆ. ಪಶುತ್ವಕ್ಕಿಂತಲೂ ಮನುಷ್ಯನಲ್ಲಿ ಮೇಲ್ಪಟ್ಟ ಹಕ್ಕು-ಜವಾಬ್ದಾರಿ ಗಳು ಇವೆ ಎಂದು ಮನಗಾಣಿಸುತ್ತದೆ. ಇಂಥ ಮನಸ್ಸಾಕ್ಷಿ ಜಾಗ್ರೃತ ವಾಗದ ಮನುಷ್ಯರು ಎಷ್ಟೋ ಮಂದಿ ಇದ್ದಾರೆ, ಅವರು ಹುಟ್ಟುತ್ತಾರೆ, ಜೀವಿಸುತ್ತಾರೆ, ಸಾಯುತ್ತಾರೆ. ಆದರೂ ಪ್ರಕೃತಿಯ ನಿಯಮವನ್ನು ಅವರು ಅಜ್ಞಾನಿಗಳು ಎಂಬದರಿಂದ ಉಲ್ಲಂಘಿಸಲು ಬರುವುದಿಲ್ಲವೆಂಬಂತೆ ಕಾಣು

ತ್ತದೆ. ಹೀಗನ್ನುವಾಗ ಈ 'ಕರ್ಮಕ್ಕೆ ತಕ್ಕ ಫಲ'ವನ್ನು ಕೊಡುವ ನಿಯಾಮಕನೊಬ್ಬನು ಇದ್ದಾನೆ ಎಂಬ ಮಾತಿಗೆ ಪುಷ್ಟಿ ಕೊಡುತ್ತದೆ. ಇಲ್ಲಿಯ ನ್ಯಾಯಾನ್ಯಾಯಗಳ ಫಲವನ್ನು ಹೊಂದುವುದಕ್ಕೆ ಇಹದಲ್ಲಿ ಅವಕಾಶವಿಲ್ಲದಿದ್ದರೆ ಜೀವನಿಗೆ ಅದರ ಲೆಕ್ಕಾಚಾರ ತೀರಿಸುವುದಕ್ಕೆ ಇನ್ನೊಂದು ಜನ್ಮವು ಬೇಕೇ ಬೇಕು. ಇದರ ನಿಜತ್ವವೇನು ಎಂದು ತಿಳಿಯುವ ದಿವ್ಯಾಂಜನವನ್ನು ನಮ್ಮ ಕಣ್ಣಿಗೆ ಹಚ್ಚದಿರುವ ನಿಮಿತ್ತ—ನಮ್ಮ ಜ್ಞಾನಕ್ಕೆ ಒಂದು ಮಿತಿಯು ಇರುವ ನಿಮಿತ್ತ—ಮುಂದಿನದೊಂದು ಜನ್ಮವಿದೆ ಎಂಬ ಅನುಭವವು ಬರಲು ಸಾಧ್ಯವಿಲ್ಲ.' ಹೀಗನ್ನುತ್ತ ಈ ವಿಷಯವನ್ನು ಮನಸ್ಸಿನಲ್ಲಿ ಮಥಿಸುತ್ತಾ ಇರುವಾಗ ಸೇಟಜೀಗೆ ಅಲ್ಲಿಯೆ ನಿದ್ದೆ ಬಂತು. ಅವನು ಪರವಶನಾಗಿ ನಿದ್ದೆ ಮಾಡಿದನು. ಸೂರ್ಯನು ದಿಗಂತದಿಂದ ಎರಡು ತಾಸಿನ ಅಂತರಕ್ಕೆ ಬಂದಾಗ ಸೇಟಜೀಗೆ ಎಚ್ಚರವಾಯಿತು.

ಸೇಟಜೀಯು ಪ್ರಾತರ್ವಿಧಿಗಳನ್ನು ಮುಗಿಸಿ ಸಮೀಪವಿರುವ ಹೊಟೆಲಿಗೆ ಹೋದನು. 'ಇಲ್ಲಿ ತಿಂಡಿ ಮತ್ತು ಚಾ ಸಿಗಬಹುದೇ?' ಎಂದು ಕೇಳಿದನು. 'ದುಡ್ಡ ಕೊಟ್ಟರೆ ಸಿಗಬಹುದು' ಎಂದು ಹೊಟೆಲಿನ ನವುಕರ ಹುಡುಗನು ಅಂದನು. 'ಸರಿ! ಎರಡು ರೊಟ್ಟಿ ಒಂದು ಕಪ್ಪ ಚಾ ನನಗೆ, ಒಂದು ರೊಟ್ಟಿ ಮತ್ತು ಅರ್ಧ ಕುಡ್ತೆ ಹಾಲು ಈ ನಾಯಿಗೆ, ಒಟ್ಟಿಗೆ ಎಷ್ಟು ಹಣ ತೆರಬೇಕು?' ಎಂದು ಪುನಃ ಸೇಟಜೀಯು ಕೇಳಿದನು. 'ಎರಡಾಣೆ!' ಎಂದು ಹುಡುಗನ ಉತ್ತರ. 'ಬರೇ ಎರಡಾಣೆ! ಎಲ್ಲರಿಗೂ ಒಂದೇ ದರ! ಇಲ್ಲಿ ಬಡವರು ಧನಿಕರು ಎಂಬ ಭೇದವಿಲ್ಲ!' ಎಂದನು ಹುಡುಗನು. ಸೇಟಜೀಗೆ ಆಶ್ಚರ್ಯವಾಯಿತು. 'ಈ ಹಳ್ಳಿಯಲ್ಲಿ ಬಡವರು ಧನಿಕರು ಎಂಬ ಭೇದವಿಲ್ಲವಂತೆ!' ಎಂದು ತನ್ನೊಳಗೆ ಅಂದುಕೊಂಡನು. ಅನಂತರ ಉಪಾಹಾರ ಮಾಡಿ ದುಡ್ಡು ತೆತ್ತನು.

ಅಷ್ಟರಲ್ಲಿ ಅಲ್ಲಿ ಹಲವರು ಬಂದಿದ್ದರು. ಅವರ ಬಾಯಲ್ಲೆಲ್ಲ ದೇಸಾಯಿಯ ಕೊಲೆಯ ಸಮಾಚಾರವೇ! ಆದರೆ ಒಬ್ಬರಾದರೂ ದೇಸಾಯಿಯ ಮರಣಕ್ಕಾಗಿ ಅಳುವವರಿದ್ದಿಲ್ಲ. ಎಲ್ಲವರ ಅನುತಾಪವು ತಾಂತಿಯನ ಕಡೆಗೆ. ಅವರಲ್ಲೊಬ್ಬನ ಕಂಕುಳಲ್ಲಿ ಒಂದು ಮರಾಠಿ ವಾರಪತ್ರಿಕೆಯಿತ್ತು.

ಅದನ್ನು ಅವನು ಬಿಡಿಸಿ ಇನ್ನೊಮ್ಮೆ ಅಲ್ಲಿ ನೆರೆದವರ ಎದುರಿಗೆ ಓದತೊಡಗಿದನು. 'ದೇಸಾಯಿಯ ಅಕಾಲಿಕ ಮರಣದ ವಾರ್ತೆಯಿಂದ ಮುಂಬಯಿ ಮತ್ತು ಪೂನೆಯ ಅವರ ಅನೇಕಾನೇಕ ಇಷ್ಟಮಿತ್ರರ ಮನೆಗಳಲ್ಲಿ ಸಿಡಿಲು ಬಡಿದಂತಾಗಿದೆ. ಅವರು ಜನಪ್ರೀತರಾಗಿ ಸಮಾಜಕ್ಕೆ ಒಂದು ಧ್ವಜಸ್ಥಂಬದಂತಿದ್ದರು. ಅವರ ಆತ್ಮನಿಗೆ ದೇವರು ಶಾಂತಿಯನ್ನೀಯಲಿ!' ಎಂದು ಓದಿದೊಡನೆ ಅಲ್ಲಿ ಕೂಡಿದವರೆಲ್ಲ 'ಹ! ಹ! ಹ! ಸಮಾಜಧ್ವಜಸ್ಥಂಬವೊ, ಬಲಿಹರಣದ ಸ್ಥಂಬವೊ! ಆತ್ಮನಿಗೆ ಶಾಂತಿ! ಇಂಥ ಆತ್ಮನಿಗೆ ಯಮನ ಕಿಂಕರರೇ ಶಾಂತಿ ಸುಖ ಕೊಡಬೇಕು!' ಎಂದು ಹೊಟ್ಟೆ ಹುಣ್ಣಾಗುವಂತೆ ನಕ್ಕರು. ಇದನ್ನು ಕೇಳಿ ಸೇಟಜೀಗೆ ಆಶ್ಚರ್ಯವಾಯಿತು. 'ಪತ್ರಿಕೆಗಳೂ ಈ ರೀತಿಯ ಕೃತಕ ಅಭಿಮಾನದ ತೌರುಮನೆಗಳೇ! ಹಾಗಿದ್ದರೆ ಎಲ್ಲೆಲ್ಲಿಯೂ ಸಮಾಜದಲ್ಲಿ ಸುಳ್ಳಿನ ಎಳೆಯನ್ನು ಹಾಸುಹೊಕ್ಕಾಗಿ ಹೆಣೆದಿದೆಯಲ್ಲ! ಇಂಥ ಸಮಾಜದ ಜೀವನವು ಹೇಗೆ ಸುಖಜೀವನವಾದೀತು? ಆದರೂ ಈಗ ನಾನು ಕೈಕೊಂಡ ಯಾತ್ರೆಯಲ್ಲಿ ಒಂದೇ ಒಂದಾದರೂ ನಿಶ್ಚಲಮನಸ್ಸಿನ ನಿಷ್ಕಾಮ ಪ್ರೇಮದ ದೃಷ್ಟಾಂತವು ಕಣ್ಣಿಗೆ ಬಿದ್ದೀತೇ? ಆ ಪ್ರೇಮವೆಂದರೆ ಗಂಡಹೆಂಡರೊಳಗಿನ ಪ್ರೇಮಕ್ಕಿಂತಲೂ ಉತ್ಕೃಷ್ಟವಾದ, ಒಂದಾದರೂ ಕಲೆಯಿಲ್ಲದ ಅಚ್ಚ ವಸ್ತುವಾಗಿ ಈ ಲೋಕದಲ್ಲಿ ಇರಬಹುದೇ? ಅದನ್ನು ಹುಡುಕುವುದಕ್ಕೆ ನನ್ನ ಸರ್ವ ಸಂಪತ್ತನ್ನಾದರೂ ವ್ಯಯಿಸಲು ಸಿದ್ಧನಿದ್ದೇನೆ.' ಹೀಗೆಂದು ಹೇಳುವಾಗಲೇ ಬಿರುಗಾಳಿಯು ಬೀಸಲಾರಂಭಿಸಿತು. ಒಡನೆ ಕಡಲುಕಡೆಯಿಂದ ಆಕಾಶದಲ್ಲಿ ಮೋಡಗಳು ಹಬ್ಬಿ ಸೂರ್ಯನ ಪ್ರಕಾಶವನ್ನು ಕಡಿಮೆಮಾಡತೊಡಗಿದವು. ಆದರೂ ಪರದೇಶಿಯಂತೆ ತಿರುಗುವ ಭ್ರಮೆಯು ಅವನನ್ನು ಆವರಿಸತೊಡಗಿದ್ದರಿಂದ ಅವನು ಆ ಊರಲ್ಲಿ ನಿಲ್ಲದೆ ಕಡಲಿಗೆ ಒತ್ತಾದ ಒಳದಾರಿಯಿಂದ ಮುಂದರಿಸತೊಡಗಿದನು. ದಾರಿಯು ಕಡಲಿನಿಂದ ಒಂದೆರಡು ಸಾವಿರ ಅಡಿ ಎತ್ತರವಾದ ನಿರ್ಜನಪ್ರದೇಶದಲ್ಲಿ ಹೋಗುತಿತ್ತು. ಅವನು ಹೆದರದೆ ಕೋಲನ್ನು ಊರುತ್ತ ನಾಯಿಯನ್ನು ನೆಲದ ಮೇಲೆ ತನ್ನ ಹಿಂದೆಯೇ ಓಡಿಬರುವಂತೆ ಬಿಟ್ಟು ಹಿಂದು ಮುಂದೆ ನೋಡದೆ ಹೆಜ್ಜೆ ಹಾಕುತಿದ್ದನು. ಅವನು

ಹೋಗುತಿದ್ದ ಹಾಗೆ ಗಾಳಿಯ ರಭಸವು ಹೆಚ್ಚಿ ಮಳೆಯು ಹನಿಯುತೊಡ
ಗಿತು. ಅವನಿಗಾಗಲಿ ಅವನ ನಾಯಿಗಾಗಲಿ ಮರೆಯು ಸಿಗುತ್ತಿರಲಿಲ್ಲ.
ಅವನ ದಾರಿಯಿಂದ ಕಡಲು ದೂರವಾಗಿರಲಿಲ್ಲ. ಆ ಕಡಲಿನ ತೆರೆಗಳು
ಬೆಟ್ಟದೋಪಾದಿ ತಲೆ ಎತ್ತಿ ದಡಕ್ಕೆ ಬಡಿಯುವುದು ಅವನ ಕಿವಿಗೆ ಕೇಳಿ
ಸುತ್ತಲಿತ್ತು. ತಾನು ದಾರಿತಪ್ಪಿರಬಹುದೆಂದು ಅವನಿಗೆ ಸಂಶಯ
ವಾಯಿತು. ಆದರೆ ಕೆಳಕ್ಕಿಳಿದು ಹಿಂದಿರುಗಲಿಕ್ಕೆ ಅವನ ಮನಸ್ಸು ಒಪ್ಪುವ
ಹಾಗಿದ್ದಿಲ್ಲ. ಆ ಗುಡ್ಡದ ಶಿಖರದಿಂದ ಒಂದು ಅಡ್ಡದಾರಿ ಕಾಣುತಿತ್ತು.
ಅದು ಯಾವುದಾದರೂ ಹಳ್ಳಿಯಿಂದ ಕಡಲ ದಡಕ್ಕೆ ಬರುವ ದಾರಿಯಿರ
ಬೇಕೆಂದು ಅವನಿಗೆ ಭಾಸವಾಯಿತು. ಅದನ್ನು ಹಿಡಿದನು. ಆಗಲೇ
ಸಿಡಿಲು ಮಿಂಚು ಮಳೆಯ ಪ್ರಭಾವವು ಹೆಚ್ಚುತ್ತ ಬಂತು. 'ಈ ಮಿಂಚು
ಮಳೆಗಾಳಿಗಳ ಹೊಡೆತದಲ್ಲಿ ನನ್ನ ಸಾವು ಬರುವುದೇ? ನಾನು ಸತ್ತುಬಿದ್ದು
ಕೆಲವು ದಿನಗಳ ಮೇಲಾದರೂ ಇಲ್ಲಿ ಅತ್ತಿತ್ತ ಸುಳಿದಾಡುವವರು ನನ್ನ
ಅಂಗಿಯಲ್ಲಿರುವ ಕಾಗದಪತ್ರಗಳನ್ನು ಜಹಾಂಗೀರ ಭಾಯಿಗೆ ಕಳುಹಿಸುವರೆ?
ಅಥವಾ 500 ರೂಪಾಯಿಯ ನೋಟುಗಳನ್ನು ಅಪಹರಿಸಿ ನನ್ನ ದೇಹವನ್ನು
ಯಾವುದಾದರೂ ಕುಣಿಯಲ್ಲಿ ಬಿಸುಡುವರೇ? ಒಂದು ವೇಳೆ ಜಹಾಂಗೀರ
ನಿಗೆ ನನ್ನ ಸಮಾಚಾರ ತಿಳಿದರೆ ನನಗೆ ಮುದಿಭ್ರಾಂತಿ ಹಿಡಿದಿತ್ತು ಎಂದು
ನಗುವನೇ? ನಾನು ಏತಕ್ಕೆ ಊರು ಬಿಟ್ಟೆನೆಂದು ಯಾರಿಗೂ ತಿಳಿದಿಲ್ಲ.
ನಾನೊಂದು ಮರೀಚಿಕೆಯ ಜಲವನ್ನು ಹುಡುಕುವ ಹವ್ಯಾಸದಿಂದ ಪ್ರಾಣ
ಕಳಕೊಂಡೆನೆಂದು ಯಾರಿಗಾದರೂ ತಿಳಿಯುವುದೇ?' ನಾಯಿ ಮರಿಯು
ತನ್ನ ಹುಟ್ಟುಗುಣದಿಂದಲೆ ಗಾಳಿಮಳೆಯ ಅಪಾಯುಗಳನ್ನು ತಿಳಿದು
ಕೊಳ್ಳುತ್ತದೆಂಬಂತೆ ಸಣ್ಣ ಸ್ವರದಿಂದ ಬೊಗಳುತಿತ್ತು. ಅದನ್ನು ಹಿಂತಿರುಗಿ
ನೋಡಿ 'ಓಹೊ! ನಿನಗೆ ಜೀವದಾಸೆಯಿಲ್ಲವೆಂದು ನನ್ನನ್ನು ಈ ಗಾಳಿಮಳೆಗೆ
ಆಹುತಿಮಾಡುವುದು ನ್ಯಾಯವೇ ಅನ್ನುವೆಯಾ? ಸರಿ ಸರಿ! ಅಂಥ ಅನ್ಯಾ
ಯಕ್ಕೆ ನಾನು ಕೈಹಾಕಲಾರೆ. ಎಲ್ಲಿ ಮರೆ ಸಿಗುತ್ತದೊ ಅದನ್ನು ಹುಡುಕಿ
ಹೋಗೋಣ. ಆ ವರೆಗೆ ನಿನ್ನನ್ನು ಎತ್ತಿಕೊಂಡು ನನ್ನ ಕೌಬಳಿಯ ಮರೆ
ಯಲ್ಲಿರಿಸುವೆನು' ಎಂದು ನಾಯಿಯನ್ನು ಎತ್ತಿಕೊಂಡು ನಡೆಯತೊಡಗಿ

ದನು. ಗುಡುಗು ಮಿಂಚು ಒಂದರ ಹಿಂದೆ ಒಂದಾಗಿ ಕಿವಿಕಣ್ಣುಗಳನ್ನು ಕುಕ್ಕುವಂತಿತ್ತು. ಗಾಳಿಯ ರಭಸಕ್ಕೆ ಮರಗಿಡಗಳು ಮುರಿದು ಬೀಳುತಿದ್ದುವು. ಮಳೆಯು ಮುಸಲಧಾರೆಯಿಂದ ಬೀಳತೊಡಗಿತು. ಮುದುಕನು ಮುಂದೆ ನಡೆಯಲಾರದೆ ಮಾರ್ಗದ ಬದಿಯಲ್ಲಿರುವ ಒಂದು ಬಂಡೆಕಲ್ಲಿನ ಮೇಲೆ ಕುಳಿತುಬಿಟ್ಟನು. 'ಇಲ್ಲಿಗೆ ನನ್ನ ಈ ಭ್ರಮೆ ಸಾಕು, ನಾನು ಈ ಮಳೆಗಾಳಿ ನಿಂತೊಡನೆ ಒಂದು ಬಂಡಿ ಬಾಡಿಗೆಗೆ ಮಾಡಿ ರೈಲ್ವೆಗೆ ಸಮೀಪವಿರುವ ಪಟ್ಟಣವನ್ನು ಸೇರಿ ಮುಂಬಯಿಗೆ ತೆರಳುವೆನು. ಇನ್ನೂ ಹುಚ್ಚಾಟದಲ್ಲಿ ಉಪಯೋಗವಿಲ್ಲ' ಎಂದು ಕೈಯ ಕೋಲನ್ನು ನೆಲಕ್ಕೆ ಊರಿ ಅದಕ್ಕೆ ಮುಖವನ್ನು ಆನಿಸಿ ಕುಳಿತನು. ಅಲ್ಲಿಂದ ಬಹುದೂರದ ವರೆಗೆ ಆಕಾಶವೂ ಕಡಲೂ ಒಂದಕ್ಕೊಂದು ಕೂಡಿ ಕೈಕೈಹಿಡಿದು ತಾಂಡವ ಮಾಡುವಂತೆ ಭಯಂಕರವಾದ ನೋಟವು ಕಾಣುತಿತ್ತು. ಇದನ್ನು ನೋಡುತ್ತ ನೋಡುತ್ತ ಸೇಟಜೀಯು ಕಣ್ಣುಕತ್ತಲೆ ಬಂದಂತಾಗಿ ಅಲ್ಲಿಯೆ ಬಿದ್ದುಬಿಟ್ಟನು.

---

## ೧೦ನೆ ಅಧ್ಯಾಯ

## ಸೇಟಜಿಯ ಕಠಿಣ ದೇಹಾಲಸ್ಯ

ತುಫಾನು ಸಾಯಂಕಾಲದ ವರೆಗೆ ಜೋರಿನಿಂದ ಬೀಸುತ್ತ ಇತ್ತು. ಕೊನೆಗೆ ಪ್ರಕೃತಿಯ ರೌದ್ರಾವತಾರವು ಅಲ್ಲಲ್ಲಿಯೆ ತಣ್ಣಗಾಯಿತು ಎಂಬಂತೆ ಕಾರ್ಮೋಡಗಳು ಆಕಾಶದಿಂದ ಮಾಯವಾಗಿ ಗಾಳಿಯು ತನ್ನ ರಭಸವನ್ನು ತಗ್ಗಿಸಿತು. ಪಶ್ಚಿಮದಿಗಂತದ ಮೇಲೆ ಬಗೆಬಗೆಯ ಹಾಸುಮೋಡಗಳು ಹಬ್ಬಿ ದೂರದಿಂದ ಭಯಂಕರವಾದ ಕಾಡಿಗೆ ಬಿದ್ದ ಕಾಳ್ಗಿಚ್ಚಿನಂತೆ ಕೆಂಪು ಕಿತ್ತಳೆ ಬಣ್ಣವು ವ್ಯಾಪಿಸಿತ್ತು. ಶುಕ್ರನೂ ಆಕಾಶದಲ್ಲಿ ಚೆನ್ನಾಗಿ ಮಿನುಗತೊಡಗಿದ್ದನು. ಆಗ ಕಣ್ಣುಕತ್ತಲೆಯಿಂದ ಕಣ್ಣು ಬಿಟ್ಟು ಬಿರಬಿರನೆ ನೋಡುತಿದ್ದ ಸೇಟಜಿಯ ಸಮೀಪದಲ್ಲಿ ಅವನನ್ನು ಎತ್ತಿ ಹಿಡಿದು ಒಬ್ಬ ಸ್ತ್ರೀಯು ಕುಳಿತಿದ್ದಳು. ಅವನ ಭ್ರಮೆಗೊಂಡ ಮನಸ್ಸಿಗೆ ಯಾವಳೊ ದೇವಕನ್ನೆಯು ಕಡಲಿನಿಂದ ಹೊರಬಿದ್ದು ತನ್ನನ್ನು ತಾಯಿಯಂತೆ ಆರೈಕೆ ನೋಡುತಿದ್ದಾಳೆ ಎಂಬಂತೆ ಕಾಣಿಸಿತ್ತು. ಅವನ ಬಾಯಿಂದ ಮಾತು

ಹೊರಡುತ್ತಿರಲಿಲ್ಲ. ಬರಿ ಉಪಕಾರಸ್ಮರಣೆಯ ದೃಷ್ಟಿಯಿಂದ ಅವಳನ್ನು ನೋಡುತಿದ್ದನು.

'ತಾತಾ! ಈಗ ತುಸು ಸೌಖ್ಯವಾಯಿತೆ? ಎದ್ದು ನಿಲ್ಲುವ ಹವ್ಯಾಸಕ್ಕೆ ಹೋಗಬೇಡ. ನಿನ್ನಲ್ಲಿ ಅಷ್ಟು ಶಕ್ತಿ ಇನ್ನೂ ಬಂದಿಲ್ಲ.' ಎಂದು ಆ ಸ್ತ್ರೀಯು ಹೇಳಿದಳು.

**ಸೇಟಜೀ:**—ನೀನು ಯಾರು? ತಾಯಿ, ನಿನ್ನ ಉಪಕಾರ ದೊಡ್ಡದು, ನೋಡು! ನನ್ನ ಆಯುಸ್ಸು ಇಂದಿಗೇ ತೀರಿತು ಎಂದು ಎಣಿಸಿದ್ದೆ. ಇಂದು ಬೆಳಗ್ಗಿನಿಂದ ಬಹಳ ದೂರ ನಡೆದು ಚೆನ್ನಾಗಿ ಬಳಲಿದ್ದೆ. ಕೈಕಾಲುಗಳು ಸೋತು ಹೋಗಿ ಸ್ಮೃತಿ ತಪ್ಪಿ ಬಿದ್ದಿದ್ದೆ. ನನ್ನ ಪಾಲಿಗೆ ನೀನೆ ನನ್ನ ತಾಯಿ!

**ಸ್ತ್ರೀ:**—ನೀನು ಈಗ ಮಾತನಾಡಿ ಆಯಾಸ ಮಾಡಿಕೊಳ್ಳ ಬೇಡ. ಈ ಬಿಸಿ ಹಾಲನ್ನು ಒಂದಿಷ್ಟು ಕುಡಿ. ನಿನಗೆ ಕೊಂಚ ತ್ರಾಣವಾಗುವುದು.

**ಸೇಟಜೀ:**—(ಅತ್ತಿತ್ತ ನೋಡಿ) ನನ್ನ ನಾಯಿ ಮರಿ ಎಲ್ಲಿ?

**ಸ್ತ್ರೀ:**—ಕಳವಳಪಡಬೇಡ. ನಿನ್ನ ನಾಯಿ ಸುಖವಾಗಿದೆ. ಅದು ಬೊಗಳಿ ನನ್ನ ಬಳಿಗೆ ಓಡಿ ಬಾರದೆ ಇದ್ದರೆ ನೀನು ಇಲ್ಲಿ ಬಿದ್ದಿದ್ದ ಸಮಾಚಾರ ನನಗೆ ಗೊತ್ತಾಗುತಿದ್ದಿಲ್ಲ. ಅದು ಮಳೆಯಲ್ಲಿ ನೆನೆದು ಒದ್ದೆ ಮುದ್ದೆಯಾಗಿತ್ತು. ಆದರೂ ತನ್ನ ಶಕ್ತಿ ಮೀರಿ ಬೊಗಳುತಿತ್ತು.

**ಸೇಟಜೀ:**—(ಕಣ್ಣೀರು ಸುರಿಸುತ್ತ) ನಾನು ಸತ್ತು ಹೋದರೆ ಆ ನಾಯಿಯನ್ನು ನೋಡಿಕೊಳ್ಳುವೆಯಾ?

**ಸ್ತ್ರೀ:**—ಛೆ! ಛೆ! ಅಂಥ ಅವಾಚ್ಯ ಶಬ್ದಗಳನ್ನು ಉಚ್ಚರಿಸ ಬೇಡ. ಈ ಗುಡ್ಡದ ತಪ್ಪಲಲ್ಲಿ ಸಾಯಲಿಕ್ಕೆ ಬಿಟ್ಟೇನೊ? ಅದರ ಯೋಚನೆ ಬೇಡ. ನಿನಗೆ ಏಳಲಿಕ್ಕೆ ತ್ರಾಣವಾದೊಡನೆ ನನ್ನ ಮನೆಗೆ ಕರೆದುಕೊಂಡು ಹೋಗುವೆ!

**ಸೇಟಜೀ:**—ನಿನ್ನ ಮನೆ ಸಮೀಪದಲ್ಲಿಯೆ ಇದೆಯೇನು?

**ಸ್ತ್ರೀ:**—'ಹೌದು! ಈ ಗುಡ್ಡದ ಬುಡದಲ್ಲಿಯೆ! ಈಗ ನಿನ್ನ ಭುಜಗಳನ್ನು ಹಿಡಿದು ಎತ್ತುವೆನು. ನನ್ನ ಮೈಗೆ ಆನಿಸಿಕೊಂಡು ನಿಧಾನವಾಗಿ ಹೆಜ್ಜೆ

ಹಾಕು! ಹಾಗೆ! ಹಾಗೆ! ಹೆದರ ಬೇಡ!' ಎಂದು ಮೆಲ್ಲಮೆಲ್ಲಗೆ ಆತನನ್ನು ನಡೆಯಿಸಿ ನಾಯಿ ಮರಿಯನ್ನೂ ಒಂದು ಕೈಯಿಂದ ಎತ್ತಿಕೊಂಡು ಆ ಗುಡ್ಡದ ಇಳಿಜಾರು ದಾರಿಯನ್ನು ಇಳಿದು ಅವಳು ಮನೆಗೆ ಸಮೀಪಿಸಿದಳು. ಸೇಟಜೀಯು 'ಮನೆ ಸಮೀಪಿಸಿತು' ಎಂಬ ಮಾತು ಕಿವಿಗೆ ಬಿದ್ದೊಡನೆ ಮೈ ಎಲ್ಲಾ ನೋಯುತ್ತಿರುವಾಗಲೂ ತುಸು ಬೇಗನೆ ಕಾಲು ಹಾಕಿದನು. ಅವಳು ನಿಜವಾಗಿ ದೇವತೆಯಲ್ಲ, ಸಾಮಾನ್ಯ ಸ್ತ್ರೀ ಎಂದಾಗ ಅವಳು ಯಾರು, ಅವಳ ಮನೆ ಹೇಗಿದೆ ಎಂದು ತಿಳಿಯುವ ಕುತೂಹಲವು ಅವನಲ್ಲಿ ಹೆಚ್ಚಿತು. ಅವಳು ತನ್ನ ಚಿಕ್ಕ ಮನೆಯ ಸುತ್ತಲಿನ ಪ್ರಾಕಾರದ ಬಾಗಿಲನ್ನು ತಳ್ಳಿ, ಮನೆಯ ಮೊಗಸಾಲೆಯ ಜಗಲಿಯಲ್ಲಿ ಸೇಟಜೀಯನ್ನು ಕುಳ್ಳಿರಿಸಿ, ಒಳಗಿನಿಂದ ಬಿಸಿನೀರನ್ನು ತಂದು ಆತನ ಕೈಮೋರೆಗಳನ್ನು ಚೆನ್ನಾಗಿ ತೊಳೆದು ಆತನ ಒದ್ದೆಯಾದ ಬಟ್ಟೆಗಳನ್ನು ತೆಗೆಯಿಸಿ, ಆತನನ್ನು ಒಳಕೋಣೆಯ ಒಂದು ಚಾಪೆಯ ಮೇಲೆ ಹಾಸಿದ ಗೊಂಗಡಿಯ ಮೇಲೆ ಮಲಗಿಸಿದಳು. ಅವಳೊಡನೆ ಮಾತನಾಡಲಿಕ್ಕೆ ಅವನಿಗೆ ಶಕ್ತಿಯಿರಲಿಲ್ಲ. ಆದರೆ ನಿರ್ಮಲವಾದ ಕೋಣೆ, ಅದರಲ್ಲಿ ನಿರ್ಮಲವಾದ ಕಾಲುದೀಪ, ಅದರ ಮೇಲ್ಗಡೆಯಲ್ಲಿ ಒಂದು ಕಿಟಿಕಿಯಂತಿರುವ ಗೂಡಿನಲ್ಲಿ ಹೂಮುಡಿಸಿ ಇಟ್ಟ ದೇವರ ಪ್ರತಿಮೆ, ಅದರ ಬದಿಯಲ್ಲಿ ಹೂ ಹಚ್ಚಿ ತೂಗಿಸಿದ ಒಬ್ಬ ಮುದುಕನ ತಸಬೀರು, ಇವನ್ನೆಲ್ಲಾ ನೋಡಿದಾಗ ಅವಳು ಯಾರೊ ಸುಶಿಕ್ಷಿತ ಸ್ತ್ರೀ ಎಂದು ಬೋಧೆಯಾಗುತಿತ್ತು.

ಆ ಚಿತ್ರದ ಕಡೆಗೆ ಸೇಟಜೀಯ ದೃಷ್ಟಿ ಹೋದುದನ್ನು ಕಂಡು ಅವಳು 'ಅದು ನನ್ನ ತಂದೆಯ ತಸಬೀರು. ಆತನು ಬಿದ್ದು ಹೋಗಿ ಈಗ ಸುಮಾರು ಒಂದು ವರ್ಷವಾಯಿತು. ಈಗ ನಾನೊಬ್ಬಳೇ ಇಲ್ಲಿ ವಾಸಮಾಡುತ್ತೇನೆ. ನಾನು ಇಲ್ಲೊಂದು ಚಿಕ್ಕ ಮಕ್ಕಳ ಶಾಲೆಯ ಉಪಾಧ್ಯಾಯಿನಿ!' ಎಂದು ಹೇಳಿದಳು.

ಆಗ ಸೇಟಜಿಯು 'ನೀನು ಈಗ ಮಾಡುತ್ತಿರುವ ಕೆಲಸದ ಪರಿಣಾಮವನ್ನು ಆಲೋಚಿಸಿದೆಯಾ? ಇಲ್ಲಿ ನೀನೊಬ್ಬಳೆ ಇರುವೆಯಂತೆ! ಅಪರಿಚಿತನಾದ ಒಬ್ಬ ಪರದೇಶಿಗೆ ನಿನ್ನ ಮನೆಯಲ್ಲಿ ಆಶ್ರಯ ಕೊಡುವೆ! ನಾನು ಕಳ್ಳ

ನಾಗಿರಬಹುದು, ಖೂನಿಮಾಡಿ ಓಡಿ ಹೋದವನಾಗಿರಬಹುದು, ಜೈಲಿನಿಂದ ಬಿಡುಗಡೆ ಹೊಂದಿದವನಾಗಿರಬಹುದು. ಅಪರಿಚಿತನೊಬ್ಬನಿಗೆ ಆಶ್ರಯ ಕೊಡುವುದೆಂದರೆ ಯಾರೇನು ಅಂದಾರು?'

**ಸ್ತ್ರೀ:**—ಓಹೊ! ಅದೇನೊ! ಆ ವಿಚಾರ ನನಗಿಲ್ಲ. ಒಬ್ಬ ಮುದುಕನು—ನನ್ನ ತಂದೆಯು ಇಂದಿಗೆ ಜೀವಂತನಾಗಿದ್ದರೆ ಅವನಿಗಿಂತಲೂ ವೃದ್ಧನು—ನಿಸ್ಸಹಾಯನಾಗಿ ಮಳೆಗಾಳಿಗೆ ಸಿಲುಕಿ ಜೀವವನ್ನು ತೊರೆಯುವ ಸಂಕಷ್ಟದಲ್ಲಿದ್ದನು. ಆತನನ್ನು ಉಳಿಸಿ ನನ್ನ ಬಡ ಗುಡಿಸಲಿನಲ್ಲಿ ಆಶ್ರಯ ಕೊಟ್ಟಿರುವೆನು. ಅವನು ಆರೋಗ್ಯ ಹೊಂದುವ ವರೆಗೆ ನನ್ನ ಆಶ್ರಯದಲ್ಲಿರುವನು. ಅಷ್ಟರ ವರೆಗೆ ನಾನು ಹೇಳಿದಂತೆ ಅವನು ಕೇಳಬೇಕಾಗುವುದು, ಅಷ್ಟೆ!

**ಸೇಟಜೀ:**—ಇಗೊ! ನಾನು ತೀರಾ ಅಪರಿಚಿತನು. ನಿನ್ನ ಉಪಕಾರಕ್ಕೆ ಪ್ರತ್ಯುಪಕಾರ ಮಾಡುವಷ್ಟು ಯೋಗ್ಯತೆ ಕೂಡ ನನ್ನಲ್ಲಿಲ್ಲ!—

**ಸ್ತ್ರೀ:**—ಇಗೊ ತಾತಾ! ಬರಿದೆ ನನ್ನ ಮನಸ್ಸಿಗೆ ವೇದನೆ ಉಂಟುಮಾಡಬೇಡ. ನಿನ್ನೊಡನೆ ಪ್ರತಿಫಲಕ್ಕೆ ಕೈಚಾಚಿದೆನೇ? ಕುಚೇಲನಿಗೆ ವರದ ಹಸ್ತವನ್ನು ತೋರಿಸುವಾಗ ಕೃಷ್ಣನು ಪ್ರತಿಫಲವನ್ನು ಹಾರೈಸಿದನೇ? ನಮ್ಮ ಪುರಾಣಗಳಲ್ಲಿ ಇಂಥ ಎಷ್ಟು ಕಥೆಗಳು ಇಲ್ಲ! ನಾವು ಮಾಡಬೇಕಾದ್ದನ್ನು ಪ್ರತಿಫಲಾಕಾಂಕ್ಷೆಯಿಂದ ಮಾಡಬಾರದೆಂದು ಗೀತೆಯಲ್ಲಿ ಶ್ರೀಕೃಷ್ಣಭಗವಾನನು ಹೇಳಲಿಲ್ಲವೆ?

**ಸೇಟಜೀ:**—ಅದೊಂದೇ ಕಾರಣದಿಂದ ನನ್ನನ್ನು ಆರೈಕೆ ಮಾಡಲೆಳಸುವೆಯಾ?

**ಸ್ತ್ರೀ:**—ಇಲ್ಲ. ಇನ್ನೊಂದು ಸ್ವಾರ್ಥವೂ ಇದೆ. ನನ್ನ ತಂದೆಯು ತೀರಿ ಹೋದ ಮೇಲೆ ನಾನೊಬ್ಬಳೆ ಮನೆಯಲ್ಲಿದ್ದು ಬೇಸತ್ತಿದ್ದೇನೆ. ಈಗ ನನ್ನ ತಂದೆಗಿಂತಲೂ ಹೆಚ್ಚು ಪ್ರಾಯ ದಾಟಿದವನೊಬ್ಬನು ನಿರಾಶ್ರಯನಾಗಿ ಇಲ್ಲಿ ಮರೆಹೊಕ್ಕಿದ್ದಾನೆ. ಆಗ ಮನೆಯಲ್ಲಿರುವುದಕ್ಕೆ ಒಂದು ಜನವೂ ಸಿಕ್ಕಿತು. ನನಗೆ ಒಂಟಿಯಾಗಿದ್ದುದರ ಬೇಸರವೂ ಅವನ ಆರೈಕೆ ನೋಡುವುದರಲ್ಲಿ ಹೋದಂತಾಯಿತು.

ಇದನ್ನು ಕೇಳಿದೊಡನೆ ಸೇಟಜೀಯ ಕಣ್ಣುಗಳಲ್ಲಿ ನೀರು ಉಕ್ಕಿ ಬಂತು. 'ನೀನು ಹೇಳಿದಂತೆ ಇರುವೆನು. ನಿನ್ನ ಮನಸ್ಸು ಶುದ್ಧವಾಗಿದೆ. ನಿನ್ನ ದಯಾಭಾವವು ವಿಶೇಷವಾಗಿದೆ. ಈಗ ನಿನ್ನ ಹೆಸರೇನು ಹೇಳು.'

ಸ್ತ್ರೀ:-ನನ್ನ ಹೆಸರು ರಾಧೆ. ನಿನ್ನನ್ನು ತಾತಾ ಎಂದು ಸಂಬೋಧಿಸಲೇ?

**ಸೇಟಜೀ:**—ನನ್ನ ಹೆಸರು ಜೀವನದಾಸ. ನಾನು ನಾಸಿಕಕ್ಕೆ ನನ್ನೊಬ್ಬ ಬಾಲ್ಯಪರಿಚಿತನನ್ನು ಹುಡುಕಿಕೊಂಡು ಹೋಗುತ್ತಿದ್ದೆ.

**ರಾಧೆ:**—'ಸರಿ ಸರಿ! ಅವನು ನಿನಗೆ ಸಿಗಬಹುದು. ಆದರೆ ನಿನಗೆ ನಡೆಯುವಷ್ಟು ತ್ರಾಣವಾಗುವ ವರೆಗೆ ನೀನು ಇಲ್ಲೇ ಇರಬೇಕಾಗುವುದು.' ಹೀಗೆಂದು ಹೇಳಿ ಒಂದು ದಪ್ಪ ಕಂಬಳಿಯನ್ನು ಹೊದಿಸಿ ಅವಳು ಕೋಣೆಯ ಬಾಗಿಲನ್ನು ಅಡ್ಡಮಾಡಿ ಹೊರಗೆ ಹೋದಳು. ಅವನ ಒದ್ದೆಯಾದ ಬಟ್ಟೆಗಳನ್ನು ಅಡಿಗೆ ಕೋಣೆಯ ಬೆಂಕಿಯ ಬಳಿ ಹಿಡಿದು ಒಣಗಿಸಿ 'ಇಗೋ! ನಿನ್ನ ಬಟ್ಟೆಗಳೆಲ್ಲ ಇಲ್ಲಿಯೇ ಇವೆ,' ಎಂದು ಅವನ ಬಳಿಯಲ್ಲಿ ತಂದಿಟ್ಟಳು. ಆಗ ಸೇಟಜೀಯು 'ಈ ತುಂಡಂಗಿಯ ಕಿಸೆಯಲ್ಲಿ ನನ್ನ ಅಮೌಲ್ಯವಾದ ಕೆಲವು ಕಾಗದಪತ್ರಗಳಿವೆ. ಅವನ್ನು ಭದ್ರವಾಗಿರಿಸುವೆಯಾ? ಅವನ್ನು ಯಾರಿಗೂ ತೋರಿಸಕೂಡದು' ಎಂದನು. ಆಗ ಅವಳು 'ಇಗೋ, ಈ ಗೋಡೆಯ ಕಪಾಟಿನಲ್ಲಿ ಇಟ್ಟಿರುವೆನು. ಇದರ ಬೀಗದ ಕೈ ನಿನ್ನ ತಲೆ ದಿಂಬಿನ ಅಡಿಯಲ್ಲಿಯೇ ಇರಿಸು' ಎಂದು ಅವನ ದಿಂಬಿನ ಅಡಿಗಿಟ್ಟು ಹೊರಗೆ ಹೋದಳು.

ಸೇಟಜೀಯು ರಾಧೆಯನ್ನು ಪುನಃ ಕರೆದು 'ಅಮ್ಮಾ ರಾಧಾಬಾಯಿ, ನಾನು ಗುಡ್ಡದ ತುದಿಯಲ್ಲಿ ಸ್ಮೃತಿ ತಪ್ಪಿ ಬಿದ್ದುದು ನಿನಗೆ ಹೇಗೆ ಗೊತ್ತಾಯಿತು?' ಎಂದು ಕೇಳಿದನು.

**ರಾಧೆ:**—ಜೋರಾದ ಬಿರುಗಾಳಿ ಬೀಸಿ ಮಳೆ ಬೀಳತೊಡಗಿತು. ಆಗ ಅಲೆಗಳ ಶಬ್ದವನ್ನು ಕೇಳುತ್ತಾ ನಾನು ಹೊಸ್ತಿಲಲ್ಲಿ ನಿಂತಿದ್ದೆನು. ಅಷ್ಟರಲ್ಲಿ ಒಂದು ಚಿಕ್ಕ ನಾಯಿ ನಮ್ಮ ಮನೆ ಬಾಗಿಲಿಗೆ ಬಂದು ನನ್ನನ್ನು ಕಂಡು ಬೊಗಳುತ್ತಾ ಗುಡ್ಡದ ಕಡೆಗೆ ತುಸು ದೂರ ಓಡುತ್ತಾ ಪುನಃ ಬಂದು ಬೊಗಳುತ್ತ ಇತ್ತು. ಅದರ ಈ ಚರ್ಯೆಯು ನನಗೆ ವಿಚಿತ್ರವಾಗಿ ಕಂಡಿತು.

ನಾನು ಅದನ್ನು ಹಿಂಬಾಲಿಸಿದೆನು. ನಾನು ಹಿಂಬಾಲಿಸಿದ ಹಾಗೆ ಅದು ಮುಂದೆ ಓಡುತ್ತಲೂ ಪುನಃ ನನ್ನ ಬಳಿಗೆ ಬರುತ್ತಲೂ ಇದ್ದುದರಿಂದ ನಾನು ಅದರ ಬೆನ್ನ ಹಿಂದೆ ನಡೆದು ಗುಡ್ಡದ ತುದಿಗೆ ಬಂದೆನು. ಆಗ ನೀನು ಅಲ್ಲಿ ಕಣ್ಣುಕತ್ತಲೆ ಬಂದು ಬಿದ್ದಿದ್ದೆ. ಇಲ್ಲಿಂದ ನಾನು ಅಂಜನಮಾತ್ರೆಯನ್ನು ಕೊಂಡುಹೋಗಿ ನಿನ್ನ ಕಣ್ಣಿಗೆ ಹಚ್ಚಿದೆನು. ಸ್ವಲ್ಪ ಹೊತ್ತಿನ ಮೇಲೆ ನಿನಗೆ ಸ್ಮೃತಿ ಬಂತು. ಆಗ ಒಂದೆರಡು ಗುಟುಕು ಬಿಸಿ ಹಾಲನ್ನು ಕುಡಿಸಿದೆನು. ಅಷ್ಟೆ!

**ಸೇಟಜೀ:**—ಹಾಗಿದ್ದರೆ ಮೊದಲಾಗಿ ಈ ನಾಯಿಯಿಂದಲೇ ನನ್ನ ಸ್ಥಿತಿ ನಿನಗೆ ಗೊತ್ತಾಯಿತು. ಅದರಿಂದಲೇ ನನ್ನ ಜೀವ ಉಳಿಯಿತು.

**ರಾಧೆ:**—'ಹೌದು ಹೌದು! ಒಳ್ಳೆ ಚುರುಕುಬುದ್ಧಿಯ ನಾಯಿ!' ಎಂದು ಹೇಳಿ ಆ ನಾಯಿಯನ್ನು ಎತ್ತಿ ಅದಕ್ಕೆ ಪ್ರೀತಿ ತೋರಿಸಿ ಬೆನ್ನು ಸವರಿದಳು. ಅದು 'ನಿನ್ನ ಮಾತು ಸರಿ!' ಎನ್ನುವಂತೆ ಬಾಲವನ್ನು ಅಲ್ಲಾಡಿಸಿ ಅವಳ ತೊಡೆಗಳ ಮೇಲೆ ಕುಳಿತುಕೊಂಡಿತು.

**ಸೇಟಜೀ:**—ಇಲ್ಲಿ ನೀನೊಬ್ಬನೆ ಇರುವೆಯೆಂದೆ. ನಿನಗೆ—

**ರಾಧೆ:**—ಅದರಲ್ಲಿ ಅಳುಕು ಬೇಡ. ನಾನೇ ಹೇಳುತ್ತೇನೆ. ನಾನು ಅವಿವಾಹಿತೆ. ನನ್ನ ತಂದೆಯು ವೈದ್ಯನೂ ಜೋಯಿಸನೂ ಆಗಿದ್ದನು. ನನಗೆ 20 ವರ್ಷ ದಾಟುವ ಮೊದಲು ವಿವಾಹವಾದರೆ ನಾನು ವಿಧವೆಯಾಗಬಹುದು ಎಂದು ನನ್ನ ಜಾತಕದಲ್ಲಿ ಕಂಡುಬಂತಂತೆ. ಹೀಗಾಗಿ ಬ್ರಾಹ್ಮಣಕುಲದಲ್ಲಿ ಹುಟ್ಟಿದರೂ ನನ್ನ ತಂದೆಯು ನನಗೆ ವಿವಾಹಮಾಡಲಿಲ್ಲ. ನಮ್ಮ ಜಾತಿಯವರು ನಮ್ಮನ್ನು ಬಹಿಷ್ಕರಿಸಿದರು. ಅದರನಂತರ ನಮ್ಮ ರತ್ನಾಗಿರಿ ಊರನ್ನು ಬಿಟ್ಟು ಈ ಕಾಡುಗುಡ್ಡಗಳಲ್ಲಿ ಒಂದು ಗುಡಿಸಲನ್ನು ಕಟ್ಟಿ ವಾಸಮಾಡಿದೆವು. ಅವನು ಸ್ವತಃ ಓದುಬರಹ ಬಲ್ಲವನಾದುದರಿಂದ ನನಗೆ ವೈದ್ಯವನ್ನೂ ಓದುಬರಹವನ್ನೂ ಕಲಿಸಿದನು. ನಾನು ಅವನ ಸಹಾಯಕಳಾಗಿ ಇಲ್ಲೊಂದು ಚಿಕ್ಕ ಪಾಠಶಾಲೆಯನ್ನು ಏರ್ಪಡಿಸಿದೆವು. ಅವನು ಸ್ವರ್ಗವಾಸಿಯಾದನಂತರ ಅದನ್ನು ನಾನೊಬ್ಬಳೆ ನಡಿಸುತ್ತಿದ್ದೇನೆ. ವೈದ್ಯ ಮತ್ತು ವಿದ್ಯಾದಾನದ ಬಲದಿಂದ ನಮ್ಮ ಜೀವನವು ಸಾಗು

ತ್ತಿದೆ. ಉಳಿದ ವೇಳೆಯಲ್ಲಿ ನಾನು ಹೊಲಿಗೆ ಯಂತ್ರದಿಂದ ಹೊಲಿಗೆ ಮಾಡುತ್ತಿದ್ದೇನೆ. ಹೀಗಾಗಿ ನನಗೆ ದಾರಿದ್ರ್ಯದ ವೇದನೆಯಿಲ್ಲದೆ ಇರಲು ಸಾಧ್ಯವಾಗಿದೆ. ಅವಿವಾಹಿತೆಯೆಂದು ಯಾರೂ ನನ್ನನ್ನು ತಿರಸ್ಕರಿಸುವು ದಿಲ್ಲ. ನನ್ನ ತಂದೆ ಮತ್ತು ನನ್ನ ಮೇಲೆ ಇಲ್ಲಿಯ ಜನರಿಗೆ ಅಷ್ಟು ಗೌರವ ಇದೆ. ಈಗ ನೀನು ಸುಮ್ಮನೆ ನಿದ್ದೆಹೋಗಬೇಕು' ಎಂದು ಪುನಃ ಕೋಣೆಯ ಬಾಗಿಲು ಅಡ್ಡ ಮಾಡಿ, ಅವಳು ಹೊರಗೆ ಹೋದಳು. 'ದೇವರು ನಿನಗೆ ಒಳ್ಳೇದನ್ನು ಮಾಡಲಿ!' ಎಂದು ಸೇಟಜೀಯು ಅವಳನ್ನು ಹರಸಿದನು.

ಈಗ ಅವನಲ್ಲಿ ಒಂದು ಹೊಸ ವಿಚಾರ ಬಂತು. 'ನನ್ನ ತುಂಡಂಗಿ ಯಲ್ಲಿರುವ ನೋಟುಗಳು ಕಾಗದಪತ್ರಗಳು ಇವನ್ನು ಈ ರಾಧೆಯು ನೋಡಿ ಅಪಹರಿಸುವಳೇ? ಇಲ್ಲ ಇಲ್ಲ, ಸರ್ವಥಾ ಇಲ್ಲ; ಆದರೆ ನನ್ನ ಮತ್ತು ಅವಳ ಪರಿಚಯು ಬರೀ ಒಂದೆರಡು ತಾಸಿನದು. ಅಷ್ಟರಲ್ಲಿ ಇಷ್ಟು ನಿರ್ಧಾರವಾಗಿ ಹೇಳಲು ನಾನು ಮುಂದರಿಸಿದೆನೆ? ಅದರಲ್ಲಿ ಏನೂ ಸಂದೇಹ ಬೇಡ. ಅವಳು ನಿಜವಾಗಿಯೂ ನಿಷ್ಕಳಂಕಬುದ್ಧಿಯ ಒಂದು ಸ್ತ್ರೀರತ್ನ!' ಎಂದು ಹೇಳುತ್ತಾ ಆ ಗೊಂಗಡಿಯ ಮೇಲೆ ಮಲಗಿದನು. ರಾತ್ರೆ ಅವನಿಗೆ ನಿದ್ರೆಯೇ ಬರಲಿಲ್ಲ. ಕಠಿಣ ಜ್ವರ ಬಂದು ಏನೊ ಏನೊ ಯದ್ವಾತದ್ವಾ ಮಾತನಾಡಹತ್ತಿದನು. ಜ್ವರವು ತಗ್ಗಲಿಲ್ಲ. ಈ ಜ್ವರದ ಕಾಲದಲ್ಲಿ ಯಾರೋ ಒಬ್ಬ ವೈದ್ಯನು ಅವನ ನಾಡಿಪರೀಕ್ಷೆ ಆಗಾಗ ನೋಡು ತಿದ್ದಂತೆಯೂ ಒಬ್ಬ ಸ್ತ್ರೀಯು ಅವನಿಗೆ ಪಥ್ಯ ಕೊಡುತ್ತಿದ್ದಂತೆಯೂ ಅವನಿಗೆ ಕಂಡಿತು. ಅವನ ದೇಹವು ಬಹಳ ಕೃಶವಾಗಿ ಬಂದು ಅವನಿಗೆ ಸ್ಮೃತಿಯೂ ಕೆಲವು ದಿನಗಳ ವರೆಗೆ ಇರಲಿಲ್ಲ.

ಒಂದು ದಿನ ಹೀಗೆ ಅರೆಮರವಿನಲ್ಲಿದ್ದಾಗ ಯಾರೊ ಅಳುತ್ತಿದ್ದಂತೆ ಅವನಿಗೆ ಕೇಳಿಸಿತು. 'ಯಾರದು?' ಎಂದು ಪ್ರಶ್ನಿಸಿದನು. ಆಗ ರಾಧೆಯು ಸಮೀಪಿಸಿ 'ನಾನು ರಾಧೆ! ನನ್ನ ಪರಿಚಯವಿಲ್ಲವೇ? ನೀನು ಗುಡ್ಡದ ತುದಿ ಯಲ್ಲಿ ಕಣ್ಣುಕತ್ತಲೆ ಬಂದು ಬಿದ್ದಾಗ ನಾನೇ ಅಲ್ಲವೆ ನಿನ್ನನ್ನು ಇಲ್ಲಿಗೆ ಕರೆದು ತಂದೆ! ನನ್ನ ಗುರುತು ಸಿಗಲಿಲ್ಲವೇ?' ಎಂದು ಕಣ್ಣೊರಸಿ ರಾಧೆ ಹೇಳಿದಳು.

ಸೇಟಜೀಯು ಅವಳ ಕಡೆಗೆನೆ ತುಸು ಹೊತ್ತು ನೋಡಿ ಏನೊ ನೆನಪಿಗೆ ಬಂದಂತಾಗಿ 'ಹೌದು ಹೌದು! ನಾನು ಕಠಿಣ ಕಾಯಿಲೆಯಾಗಿದ್ದೆಯಲ್ಲವೇ? ನನ್ನ ಅನುಪಾನ ನೋಡಿದವಳು ನೀನೆ! ಹೌದು ಈಗ ತಿಳಿಯಿತು. ನೀನು ರಾಧೆ! ಯಾರೊ ದೇವಲೋಕದ ಕನ್ಯೆ, ನಾನು ದೇವಲೋಕದಲ್ಲಿದ್ದೇನೆ ಎಂದೆ ನನ್ನ ಭ್ರಾಂತಿ. ಇಲ್ಲ ಇಲ್ಲ, ನಾನು ನಿನ್ನ ಮನೆಯಲ್ಲಿಯೇ ಇದ್ದೇನೆ, ನೀನೇ ನನ್ನ ಎರಡನೆ ತಾಯಿ. ನಾನೇ ನಿನ್ನ ಋಣಪುತ್ರನು' ಎಂದು ಹೇಳುತ್ತ ಅವಳನ್ನೆ ನೋಡಿ ನೋಡಿ ಅಲ್ಲಿಯೇ ನಿದ್ದೆಮಾಡ ಹತ್ತಿದನು.

ಅವನಿಗೆ ಜ್ವರ ಬರತೊಡಗಿದಂದಿನಿಂದ ಇಂದೇ ಅವನು ಗಾಢನಿದ್ರೆ ಮಾಡಿದುದು! ಈಗ ಕೆಲವು ದಿನಗಳಿಂದ ಹಗಲು ರಾತ್ರೆ ಅನ್ನಾಹಾರಗಳ ಮೇಲೆಯೂ ಆಸೆಯಿಲ್ಲದೆ ಅವಳು ಅವನ ಆರೈಕೆ ನೋಡಿದ್ದಳು. ಸರಿಯಾಗಿ ಯಮನ ದಾಡೆಯಿಂದಲೇ ಅವನನ್ನು ಕಿತ್ತುತಂದಿದ್ದಳು. ಗುಂಡು ಬುವಾಸ ಚಿಕಿತ್ಸೆ, ರಾಧೆಯ ಅವಿರತವಾದ ಆರೈಕೆಯಲ್ಲದೆ ಇದ್ದರೆ ಸೇಟಜಿಯು ಎಂದೊ ಯಮನಪಟ್ಟಣವಾಸಿಯಾಗುತಿದ್ದನು. ಗಾಢನಿದ್ರೆ ಬಿದ್ದುದು ಜ್ವರ ಬಿಟ್ಟು ಹೋದ ಚಿಹ್ನೆ ಎಂದು ಅವಳು ತಿಳಿದು ಉಸುರುಗರೆದಳು. ನೋಡಬಂದವರಿಗೆಲ್ಲ ಅವನು ತನ್ನ ತಂದೆಯ ಪೂರ್ವಪರಿಚಿತನೆಂದೂ ತಂದೆಯ ಮರಣದ ಸಮಾಚಾರವರಿಯದೆ ಆತನನ್ನು ಹುಡುಕಿ ಬಂದವನೆಂದೂ ಅವಳು ಸುಳ್ಳುಹಾರಿಸಿದ್ದಳು. ಅವನು ಸತ್ತುಹೋಗಿದ್ದರೆ ಅವನ ಉತ್ತರಕ್ರಿಯೆಗಳನ್ನು ಸಾಂಗವಾಗಿ ಅವಳೇ ಮಾಡಿಸುತಿದ್ದಳು, ಅವನ ಜೀವವೊಂದು ಉಳಿದರೆ ನಿಜವಾಗಿಯೂ ತನ್ನ ತಂದೆಯ ಗೆಳೆಯನೆಂಬಂತೆ ಅವನನ್ನು ನೋಡಿಕೊಳ್ಳುವುದಕ್ಕೂ ಅವಳು ಸಿದ್ಧಳಾಗಿದ್ದಳು.

ಹಾಗೂ ಹೀಗೂ ಮುದುಕನಿಗೆ ವೈತರಣಿಯನ್ನು ದಾಟುವ ಯೋಗ ಬಂದದ್ದಿಲ್ಲ. ದಿನ ಹೋಗುತ್ತ ಅವನ ಸ್ಮರಣಾಶಕ್ತಿಯು ಸರಿಯಾಯಿತು. ರಾಧೆಯು ಎಡೆಬಿಡದೆ ತನ್ನ ಆರೈಕೆ ನೋಡುತ್ತಿರುವಾಗ ಅವಳ ಮೇಲೆ ಒಂದು ಬಗೆಯ ಪಿತೃವಾತ್ಸಲ್ಯವೂ ಅವಳ ಉಪಕಾರದ ಸ್ಮರಣೆಯೂ ಬಲಗೊಂಡವು. ಆದರೆ ಅವನು ಬಹಳ ಕಾಲದ ವರೆಗೆ ತನ್ನ ಪ್ರತಿಯೊಂದು ಕಾರ್ಯವನ್ನು ದುಡ್ಡಿನ ಮಾನದಿಂದ ಅಳೆಯತೊಡಗಿದ್ದನು. ಆ ಅಭ್ಯಾಸಬಲದಿಂದ ಈ

ನಿಷ್ಕಲಂಕಬುದ್ಧಿಯ ಸ್ತ್ರೀಯು ಮಾಡುತಿದ್ದ ಆರೈಕೆಯ ಉದ್ದೇಶವೇನು, ತನ್ನ ಜ್ವರದ ವಿಭ್ರಮಣೆಯ ಕಾಲದಲ್ಲಿ ತಾನು ಯಾರೆಂದು ಹರಟಿರಬಹುದೇ, ಅದರಿಂದ ದ್ರವ್ಯಸಹಾಯವನ್ನು ಪಡೆಯಬಹುದೆಂಬ ಆಸೆಯಿಂದ ಈ ಸ್ತ್ರೀಯು ತನ್ನ ಆರೈಕೆ ನೋಡುತ್ತಾಳೇನು ಎಂಬ ಸಂದೇಹವು ಅವನ ಮನಸ್ಸಿನಲ್ಲಿ ಆಗಾಗ ಇಣಿಕಿನೋಡುತಲಿತ್ತು. ಒಂದು ದಿನ ಆತನು 'ನಾನು ಕಾಯಿಲೆಯಲ್ಲಿ ಬಿದ್ದು ಒಂದು ವಾರವಾಯಿತೇ?' ಎಂದು ರಾಧೆಯನ್ನು ಕೇಳಿದನು.

**ರಾಧೆ:**—ಅದಕ್ಕಿಂತ ಸ್ವಲ್ಪ ಹೆಚ್ಚು!

**ಸೇಟಜೀ:**—ಸ್ವಲ್ಪ ಹೆಚ್ಚೆಂದರೆ ಒಂದು ಪಕ್ಷವೇ, ಒಂದು ತಿಂಗಳೇ? ಎಷ್ಟು?

**ರಾಧೆ:**—ಇನ್ನೂ ಸ್ವಲ್ಪ ಹೆಚ್ಚು!

**ಸೇಟಜೀ:**—ಈ ದಿನ ತಾರೀಕು ಎಷ್ಟು?

**ರಾಧೆ:**—(ನಸುನಗುತ್ತ)—ಜುಲೈ ತಿಂಗಳ 8ನೆ ತಾರೀಕು.

**ಸೇಟಜೀ:**—ಹಾಗಾದರೆ ನಾನು ಸುಮಾರು 3 ತಿಂಗಳು ಕಾಯಿಲೆಯಲ್ಲಿದ್ದೆನೇ? ಅದಷ್ಟು ದಿನವೂ ನೀನೊಬ್ಬಳೆ ನನ್ನ ಆರೈಕೆ ನೋಡಿದೆಯಾ? ಚೋದ್ಯ! ಚೋದ್ಯ! ಅದಷ್ಟು ದಿನವೂ ನಿನ್ನ ಆದರ ಆತಿಥ್ಯದ ದುರುಪಯೋಗ ಮಾಡಿದೆನೇ?

**ರಾಧೆ:**—ದುರುಪಯೋಗ, ಎಂಬ ಮಾತನ್ನು, ತಾತಾ! ದಯಮಾಡಿ ಹೇಳಬೇಡ.

**ಸೇಟಜೀ:**—ನನಗೆ ಅಷ್ಟು ದಿನವೂ ಆರೈಕೆ ನೋಡುವ ಕಷ್ಟವನ್ನು ನೀನು ಆತ್ಮಸಂತೋಷದಿಂದ ವಹಿಸಿದೆಯಾ?

**ರಾಧೆ:**—ಹೇಗೂ ಇರಲಿ. ನೀನು ದೇಹದಲ್ಲಿ ತ್ರಾಣ ತುಂಬಿ ಒಮ್ಮೆ ಅತ್ತಿತ್ತ ನಡೆಯಲು ಶಕ್ತನಾದರೆ ಅದೇ ನನಗೆ ಪರಮ ಸಂತೋಷ.

**ಸೇಟಜೀ:**—'ಹೌದು. ನಾನು ಅದೇ ದಿನ ಯಾವಾಗ ಬಂದೀತೆಂದು ಕಾಯುತ್ತೇನೆ. ಕಬ್ಬು ಸಿಹಿ ಎಂದು ಅದರ ಜಲ್ಲೆ ವರೆಗೆ ಜಗಿಯುವುದು ಸರಿಯಲ್ಲ. ಒಮ್ಮೆ ನನಗೆ ನಡೆಯುವ ಸಾಮರ್ಥ್ಯ ಬಂದರೆ ನಾನು ನಾಸಿಕದ

ಕಡೆಗೆ ಹೊರಡಬೇಕು' ಎಂದು ಅವಳ ಕಡೆಗೆನೆ ನೋಡಿದನು. ಅವಳ ಮೋರೆಯ ಮೇಲಣ ನಗುವು ಅಡಗಿ ಹುಬ್ಬು ಗಂಟಿಕ್ಕಿತು.

ಅಷ್ಟರಲ್ಲಿ ಸೇಟಜಿಯು 'ಜ್ವರದಲ್ಲಿ ನನಗೆ ಸರಿಯಾಗಿ ಸ್ಮೃತಿಯಿಲ್ಲದೆ ನಾನು ಯದ್ವಾತದ್ವಾ ಮಾತನಾಡುತ್ತಿರಬಹುದು ಅಲ್ಲವೆ?'

**ರಾಧೆ:**— ಹೌದು, ಜ್ವರವು ತಲೆಗೇರಿದಾಗ ನಿನ್ನ ಮಾತುಗಳಲ್ಲಿ ಅರ್ಥವಿರಲಿಲ್ಲ.

**ಸೇಟಜೀ:**— ನಾನೇನು ಹರಟುತಿದ್ದೆ!

**ರಾಧೆ:**— ತಾಂತಿಯಾ, ಅವನ ಮಗು, ದೇಸಾಯಿಯ ಮೋಟರಿನಿಂದ ಆ ಮಗುವಿಗೆ ಆದ ಅಕಾಲಮರಣ, ತಾಂತಿಯಾ ತೀರಿಸಿದ ಸೇಡಿನ ಕ್ರಮ ಇವನ್ನೆಲ್ಲ ಆಗಾಗ ಹೇಳುತಿದ್ದೆ.

**ಸೇಟಜೀ:**— ಅದು ನಾನು ಕಣ್ಣಾರೆ ಕಂಡ ವಿಷಯ! ಈಗಲೂ ನನ್ನ ಕಣ್ಣೆದುರಿಗೆ ನಲಿಯುವಂತಿದೆ! ಆ ತಾಂತಿಯನ ವಿಚಿತ್ರ ಮರಣದ ಕಥೆಯು ವಿಸ್ಮಯಕರವಾಗಿದೆ.

**ರಾಧೆ:**— ತಾಂತಿಯನ ಮಹಿಮೆಯೂ ವಿಚಿತ್ರವೇ! ಅವನ ಕೂಸನ್ನು ಕಂಡವರು ಅದನ್ನು ಮುದ್ದಿಸದೆ ಇರುತ್ತಿರಲಿಲ್ಲ. ಅಷ್ಟು ಮುದ್ದಾದ ಮಗು! ಆದರೆ ಅದನ್ನು ಕುರಿತು ಈಗ ಚಿಂತಿಸುತ್ತಿರಬೇಡ. ಪುನಃ ಕಾಯಿಲೆ ಬಂದೀತು, ನೋಡಿಕೊ! ನಿನಗೆ ಚೆನ್ನಾಗಿ ಶಕ್ತಿ ಬರುವ ವರೆಗೆ ನೀನು ಸ್ವಸ್ಥ ಚಿತ್ತನಾಗಿರಬೇಕು.

**ಸೇಟಜೀ:**— ಬೇರೆ ಏನನ್ನೂ ನಾನು ಹರಟಲಿಲ್ಲವೇ?

**ರಾಧೆ:**— 'ಹಣ, ಸಂಪತ್ತು, ಜೀವನ ವ್ಯರ್ಥ' ಎಂದು ದಡಬಡಿಸುತಿದ್ದೆ. ಆದ್ದರಿಂದ ಹಣದ ಅಭಾವವು ನಿನಗೆ ಅನೇಕ ಕಷ್ಟಗಳನ್ನು ತಂದೊಡ್ಡಿರಬೇಕೆಂದು ಊಹಿಸಿದೆ. ಅಷ್ಟೆ!

**ಸೇಟಜೀ:**— ನನ್ನ ತುಂಡಂಗಿ, ಕಾಗದಪತ್ರಗಳೆಲ್ಲಿ!

**ರಾಧೆ:**—'ಅಂದೇ ನಿನ್ನೆದುರಿಗೆ ಕಪಾಟಿನಲ್ಲಿಟ್ಟು ಬೀಗ ಹಾಕಿ ಬೀಗದ ಕೈಯನ್ನು ನಿನ್ನ ದಿಂಬಿನ ಅಡಿಗೆ ಇಟ್ಟೆ. ಅನಂತರ ನಾನು ಅದನ್ನು ಮುಟ್ಟಲೇ ಇಲ್ಲ' ಎಂದು ಅದನ್ನು ತೆಗೆದು ತೋರಿಸಿದಳು. ಸೇಟಜಿಯು ಒಮ್ಮೆ ಕಣ್ಣುಬಿಚ್ಚಿ 'ಮಗೂ! ನಿನಗೆ ದೇವರು ಒಳ್ಳೇದು ಮಾಡಲಿ' ಎಂದು ಪುನಃ ನಿದ್ದೆಹೋದನು.

---

## ೧೧ನೆ ಅಧ್ಯಾಯ

## ಸೇಟಜಿಯ ಆರೈಕೆ

ಹೀಗೆ ಕೆಲವು ದಿನಗಳು ಕಳೆದುವು. ಒಂದು ದಿನ ಮಧ್ಯಾಹ್ನ ಸೇಟಜಿಯು ಊಟ ತೀರಿಸಿದ ಮೇಲೆ ತನ್ನ ಹಾಸಿಗೆಯ ಮೇಲೆ ಮಲಗಿ ನಿದ್ದೆಮಾಡಿದ್ದನು. ನಿದ್ದೆಯಿಂದ ಎಚ್ಚತ್ತರೂ ಆಲಸ್ಯದಿಂದ ಅಲ್ಲೆ ಹೊದ್ದು ಕೊಂಡು ಬಿದ್ದಿದ್ದನು. ಆಗ ಅಡಿಗೆಕೋಣೆಯ ಬಾಗಿಲನ್ನು ಸರಿಯಾಗಿ ಮುಚ್ಚದ್ದರಿಂದ ಒಳಗೆ ರಾಧೆಗೂ ಇನ್ನೊಬ್ಬ ಹೆಂಗಸಿಗೂ ನಡೆದ ಸಂಭಾಷಣೆ ಕೇಳಿಸುತ್ತಿತ್ತು. ಅದರಲ್ಲಿ ತನ್ನ ವಿಷಯವೇ ಇದ್ದುದರಿಂದ ತಾನು ನಿದ್ದೆ ಹೋಗುವಂತೆ ನಟಿಸಿ ಸೇಟಜಿಯು ಕಿವಿಗಳನ್ನು ನಿಗುರಿಸಿ ಸಂಭಾಷಣೆಗೆ ಕಿವಿಕೊಟ್ಟಿದ್ದನು. ಸಂಭಾಷಣೆ ಈ ಪರಿಯಾಗಿತ್ತು:—

**ರಾಧೆ:**—ಬನ್ನಿ ಸಂಕಮ್ಮ! ಮಧ್ಯಾಹ್ನದ ಊಟ ಆಯಿತೆ?

**ಸಂಕಮ್ಮ:**—ಹೇಗೂ ತೀರಿಸಿದೆ. ಹುಟ್ಟಿದಂದಿನಿಂದ ಸಾಯುವ ವರೆಗೆ ಹೇಗೂ ಜೀವಿಸಬೇಕಲ್ಲ! ಕೈಯಲ್ಲಿ ಕಾಸು ಇಲ್ಲವೆಂದು ಸಾಯ ಲಿಕ್ಕಾಗುತ್ತಿದೆಯೆ?

**ರಾಧೆ:**—ಅದೇನು ಹಾಗೆನ್ನುತ್ತೀರಿ? ಅಂಥ ವೈರಾಗ್ಯವೇನು?

**ಸಂಕಮ್ಮ:**—ಅಲ್ಲ! ನಮ್ಮ ಕೈಯಲ್ಲಿ ಕಾಸಿಲ್ಲವೆಂದು ಯಾರಾದರೂ ಸಾಯಬೇಕೆಂದು ಹಾರೈಸುವುದೇ? ಆಯುಸ್ಸು ಮುಗಿದಾಗ ಸಾಯುತ್ತಾರೆ! ಈಗ ಎಂಟು ದಿನಗಳಿಂದ ಯಾರೂ ಸತ್ತಿಲ್ಲ.

ಇಲ್ಲಿ ಇವರ ಪರಿಚಯವನ್ನು ಸ್ವಲ್ಪ ಮಾಡಿಸಬೇಕಾಗಿದೆ. ಸಂಕಮ್ಮನ ಗಂಡನ ಹೆಸರು ಸುಬ್ಬಾಭಟ್ಟರು. ಇವರ ತಂದೆ ಪುರೋಹಿತರಾಗಿದ್ದರು. ಆದರೆ ಇವರಿಗೆ ಪೌರೋಹಿತ್ಯದ ಮಂತ್ರಗಳನ್ನು ಕಲಿಸುವ ಮೊದಲೇ ತಂದೆ ತೀರಿಹೋದ್ದರಿಂದ ಮಂತ್ರೋಪದೇಶವಿಲ್ಲದೆ ಹೋಯಿತು. ಜೀವನಕ್ಕಾಗಿ ಕಟ್ಟಿಗೆ ವ್ಯಾಪಾರ ನಡೆಸತೊಡಗಿದರು. ಜನೋಪಕಾರಬುದ್ಧಿ ಇದ್ದುದರಿಂದ ಸ್ವಲ್ಪ ಕಟ್ಟಿಗೆಯನ್ನು ಊರ ಶ್ಮಶಾನದ ಬಳಿಯಲ್ಲಿಯೆ ಸಂಗ್ರಹಿಸಿಟ್ಟು ಶವದಹನ ಸಂಸ್ಕಾರವನ್ನು ಸಾಂಗವಾಗಿ ಆದಷ್ಟು ಕಡಿಮೆ ಖರ್ಚಿನಿಂದ ನಿರ್ವಹಿಸುತ್ತಿದ್ದರು. ಆದ್ದರಿಂದ ಕುತ್ಸಿತಬುದ್ಧಿಯವರು ಅವರಿಗೆ ಸುಡುಗಾಡು ಸುಬ್ಬಾಭಟ್ಟರೆಂದು ನಾಮಕರಣ ಮಾಡಿದರು. ಈ ಹೆಸರು ಕಾಯಂ ನಿಂತಿತು. ಅವರ ಹೆಂಡತಿಗೆ ಶಕುನದ ಸಂಕಮ್ಮ ಎಂದು ಕರೆಯುತ್ತಿದ್ದರು. ಅವಳು ಮಾತುಮಾತಿಗೆ ಶಕುನಗಳ ಫಲವನ್ನು ಹೇಳುತ್ತಿದ್ದುದರಿಂದ ಆ ಹೆಸರು ಉಪನಾಮವಾಯಿತು. ಸಂಕಮ್ಮನ ಕೊನೆಯ ಮಾತುಗಳ ಅರ್ಥವು ಇದರಿಂದ ಗೊತ್ತಾಗಬಹುದು.

**ರಾಧೆ:—** ಉಂಟುಮಾಡಿದ ದೇವರು ಹೇಗೂ ಜೀವನದ ದಾರಿ ತೋರಿಸುತ್ತಾನೆ!

**ಸಂಕಮ್ಮ:—** ಅದಿರಲಿ! ನಿಮ್ಮ ಮನೆಯಲ್ಲಿ ನಿಮ್ಮ ಆಗಿಹೋದ ತಂದೆಯ ಗೆಳೆಯರೊಬ್ಬರು ಬಂದು ಅಸ್ವಸ್ಥದಲ್ಲಿ ಬಿದ್ದಿದ್ದರು ಎಂದು ಕೇಳಿದೆ. ಎಷ್ಟೋ ದಿನಗಳಿಂದ ಆ ಸಮಾಚಾರವೇನೆಂದು ತಿಳಿಯಬೇಕೆಂದಿದ್ದೆ. ಬರಲಾಗಲಿಲ್ಲ. ಈಗ ಅವರಿಗೆ ಹೇಗೆ ಇದೆ?

**ರಾಧೆ:—** ಈಗ ಜ್ವರ ಬಿಟ್ಟು ಹತ್ತು ದಿನಗಳಾದವು. ಆದರೆ ಎದ್ದು ಕುಳಿತುಕೊಳ್ಳಲು ಇನ್ನೂ ತ್ರಾಣ ಬರಲಿಲ್ಲ.

**ಸಂಕಮ್ಮ:—** ಆ ದಿನವೇ ನನಗೆ ಒಂದು ಶಕುನ ಕಂಡಿತು. ನಮ್ಮ ಮನೆ ಮಾಡಿನ ಮೇಲೆ ಒಂದು ಕಾಗೆ ಬಂದು ಕುಳಿತು ಪದೇ ಪದೇ 'ಕರ್‍ರ ಕಾ' ಎನ್ನುತಿತ್ತು. ಯಾರೊ ನೆಂಟರು ಬರುತ್ತಾರೆಂದು ಖಂಡಿತ ಮಾಡಿದೆ. ಅದೇ ದಿನ ನಿಮ್ಮ ಮನೆಗೆ ಆ ಮುದುಕ ಗೆಳೆಯ ಬಂದುದು. ಆ ಕಾಗೆ ಎಡದಿಕ್ಕಿನ ಮಾಡಿನ ಮೇಲೆ ಕುಳಿತುದರಿಂದ ಆ ಮುದುಕನು ರೋಗಪೀಡಿತನಾಗುತ್ತಾನೆಂದು ನನಗೆ ಖಂಡಿತವಿತ್ತು.

**ರಾಧೆ:**—(ನಸುನಕ್ಕು) ನೀನು ಬಹು ಜಾಣೆ, ಕಾಣೆ!

**ಸಂಕಮ್ಮ:**—ನಿಮ್ಮಂತಹ ಎಳೇ ಮಕ್ಕಳಿಗೆ ನಮ್ಮಂತಹವರ ಮಾತಿನ ಮೇಲೆ ವಿಶ್ವಾಸವಿಲ್ಲ. ಆಚೆ ಮನೆ ಆಚಾರ್ಯರಿಗೆ ಕಠಿಣ ಕಾಯಿಲೆ ಇದ್ದಾಗ ರಾತ್ರೆ ಎಲ್ಲಿಂದಲೊ ಒಂದು ನಾಯಿ ಬಂದು ಮನುಷ್ಯರು ಗೋಳೊ ಎನ್ನುವಂತೆ ಬೊಗಳತೊಡಗಿತು. ಎರಡೇ ತಾಸುಗಳಲ್ಲಿ ಆಚಾರ್ಯರು ಪರಲೋಕಕ್ಕೆ ಹೊರಟೇ ಹೋದರು. ಅದಿರಲಿ. ಈಗ ಈ ಮುದುಕನು ನಿಜವಾಗಿಯೂ ನಿಮ್ಮ ತಂದೆಯ ಗೆಳೆಯನೆಂಬದು ನಿಜವೇ? ಜನರು ಎಷ್ಟೊ ವೇಷವಮಾಡಿಕೊಂಡು ಬರುತ್ತಾರೆ. ಅವರ ಮೇಲೆ ನಮ್ಮ ವಿಶ್ವಾಸವನ್ನು ಬಲಗೊಳಿಸಿದ ಮೇಲೆ ಮನೆಯಲ್ಲಿ ಇದ್ದುಬಿದ್ದುದನ್ನೆಲ್ಲ ದೋಚಿಕೊಂಡು ನಡುರಾತ್ರೆಯಲ್ಲಿಯೆ ಪಲಾಯನಸೂತ್ರ ಪಠಣಮಾಡುತ್ತಾರೆ. ಈಗಿನ ಕಾಲದಲ್ಲಿ ಎಷ್ಟು ಎಚ್ಚರವಿದ್ದರೆ ಅಷ್ಟು ಒಳ್ಳೆಯದು.

**ರಾಧೆ:**—'ಸಂಕಮ್ಮ! ನೀನು ನನ್ನ ಹಿತಕ್ಕಾಗಿ ಹೇಳುತ್ತಿ ಎಂಬದನ್ನು ನಾನು ಬಲ್ಲೆ. ಆದರೆ ಅವನು ನಿಜವಾಗಿಯೂ ನನ್ನ ತಂದೆಯ ಗೆಳೆಯ ಹೌದು. ಓಹೊ ಮರೆತೆ. ಅಡಿಗೆಕೋಣೆಯಿಂದ ಅವನಿರುವ ಕೋಣೆಗೆ ಹೋಗುವ ಬಾಗಿಲನ್ನು ನಾನು ಮುಚ್ಚಲಿಲ್ಲ. ನಿನ್ನ ಮಾತುಗಳನ್ನೇನಾದರೂ ಆತನು ಕೇಳಿದನೆ? ಒಳಕ್ಕೆ ಹೋಗಿ ನೋಡಿ ಬರುತ್ತೇನೆ' ಎಂದು ಮುದುಕ ನಿರುವ ಕೋಣೆಯೊಳಗೆ ಹೋದಳು. ಅಷ್ಟರಲ್ಲಿ ಅವನು ಕಣ್ಮುಚ್ಚಿಕೊಂಡು ಗಾಢ ನಿದ್ರೆಯಲ್ಲಿರುವಂತೆ ನಟಿಸಿದನು. 'ನಾನು ಅವಳ ತಂದೆಯ ಸ್ನೇಹಿ ತನು ಎಂದು ಯುಕ್ತಿಯಿಂದ ಜನರ ಬಾಯಿ ಮುಚ್ಚಿದ್ದಾಳೆ. ನಾನು ನಿಜ ವಾಗಿಯೂ ಯಾರೆಂಬ ಸಂಗತಿ ಅವಳಿಗೆ ಗೊತ್ತಿಲ್ಲ, ಖರೆ. ಎಷ್ಟೊ ಕರುಣಾರಸಭರಿತಳು! ಎಷ್ಟೊ ದಯಾಪೂರಿತಳು! ಆದರೆ ನನ್ನಂಥ ಹಳೇ ಗೊಡ್ಡಿನ ಮೇಲೆ ಇಷ್ಟು ಮಮತೆಯೆಂಬದು ನಿಜವೇ? ವಿಚಿತ್ರ! ವಿಚಿತ್ರ!' ಎಂದು ಯೋಚಿಸುತ್ತ ಇದ್ದನು. ಆದರೆ ಈ ಮಾತುಗಳು ಅವನ ಬತ್ತಿ ಹೋದ ಹೃದಯಕ್ಕೆ ಹೊಸ ನೀರಿನ ಒರತೆ ಹುಟ್ಟಿದಂತೆ ಮಾಡಿದವು.

ಸಾಯಾಹ್ನ ೪ ಗಂಟೆಗೆ ಅವನು ಮೆಲ್ಲಗೆ ಹಾಸಿಗೆಯಿಂದೆದ್ದು ಕೋಣೆ ಯಲ್ಲಿಯೇ ಒಂದೆರಡು ಹೆಜ್ಜೆ ರಾಧೆಯ ಕೈಹಿಡಿದು ನಡೆಯತೊಡಗಿದನು.

ಹೆಜ್ಜೆ ಇಡುತ್ತಿದ್ದ ಹಾಗೆ ಅವನಿಗೆ ಹೊಸ ಚೇತನ ಬಂದಂತಾಯಿತು. ಅನಂತರ 'ಹಾಗಾದರೆ ನಾನು ನಿನ್ನ ತಂದೆಯ ಗೆಳೆಯನೇ?' ಎಂದು ನಸು ನಗುತ್ತ ಕೇಳಿದನು. ಆಗ ಅವಳ ಮೋರೆಯು ಕೆಂಪಿಟ್ಟಿತು. ತಾನು ಸಂಕಮ್ಮನೊಡನೆ ಮಾತಾಡುತ್ತಿದ್ದುದನ್ನು ಮುದುಕನು ಕೇಳಿದ್ದಾನೆಂದು ಅವಳಿಗೆ ಗೊತ್ತಾಯಿತು. 'ಹೌದು, ನಾನು ಹಾಗೆ ಹೇಳಬೇಕಾಯಿತು. ಇಲ್ಲವಾದರೆ ತೀರಾ ಅಪರಿಚಿತನಾದೊಬ್ಬನಿಗೆ ಮನೆಯಲ್ಲಿರಿಸಿ ಆರೈಕೆ ನೋಡುವುದಕ್ಕೆ ಮತ್ತೇನು ಕಾರಣ ಹೇಳಲಿ?'

**ಸೇಟಜೀ:**—ಓಹೊ! ನಾನೂ ನಿನ್ನ ತಂದೆಯ ಹಳೆಗೆಳೆಯನಂತೆ ನಟಿಸಬೇಕಲ್ಲ! ಅವನ ಪರಿಚಯವನ್ನಾದರೂ ನನಗೆ ಮಾಡಿಸು!

**ರಾಧೆ:**—(ಗೋಡೆಗೆ ತೂಗಿಸಿದ ಫೊಟೊವನ್ನು ತೋರಿಸಿ)-ಇದೇ ನನ್ನ ತಂದೆ. ಅವನು ನಮ್ಮ ಹಳೇ ಊರನ್ನು ಬಿಟ್ಟು ಇಲ್ಲಿಗೆ ಬರುವಾಗ್ಗೆ ಅವನ ಚಿಕಿತ್ಸೆಯಿಂದ ಗುಣಹೊಂದಿದ ಗೆಳೆಯನೊಬ್ಬನು ತೆಗೆಸಿದ ಫೊಟೊ ಇದು. ನಮ್ಮಪ್ಪನು ಜೀವಂತವಾಗಿರುವ ವರೆಗೆ ಅದನ್ನು ನಾನು ಪೆಟ್ಟಿಗೆ ಯಲ್ಲಿ ಬಚ್ಚಿಟ್ಟಿದ್ದೆನು. ಅನಂತರ ನನ್ನ ಪೂಜೆಯ ವಿಗ್ರಹದ ಜತೆಯಲ್ಲಿ ಅದನ್ನು ತೂಗಿಸಿದ್ದೇನೆ. ಅವನು ಇನ್ನೂ ಜೀವಂತನಾಗಿದ್ದಿದ್ದರೆ ಅವನೇ ನಿನ್ನ ಆರೈಕೆ ನೋಡುವುದಕ್ಕೆ ಸಂತೋಷಪಡುತ್ತಿದ್ದನು ಎಂಬ ಭಾವನೆ ಯಿಂದಲೇ ನಾನು ನಿನ್ನ ಆರೈಕೆಗೆ ಕೈಹಾಕಿದೆ.

**ಸೇಟಜೀ:**—ಸರಿ ಸರಿ! ಮಾವಿನ ಗೊರಟಿನಿಂದ ಬೇವಿನ ಗಿಡ ಹುಟ್ಟಲಾರದು.

**ರಾಧೆ:**—ನನ್ನ ತಾಯಿಯು ನನ್ನ 6ನೆ ವರ್ಷದಲ್ಲಿ ಬಿದ್ದುಹೋದಳು. ಅನಂತರ ಆತನೇ ತಂದೆಯೂ ತಾಯಿಯೂ ಆಗಿ ನನ್ನನ್ನು ಸಾಕಿದನು. ಬಹಳ ಮಮತೆಯಿಂದ ಸಾಕಿದನು. ಸ್ವಾಭಾವಿಕವಾಗಿ ಅವನಲ್ಲಿ ಸೌಜನ್ಯವಿದ್ದರೂ ಅವನು ವಿದ್ಯಾವಂತನಾದುದರಿಂದ ಸಮಾಜದ ದುಷ್ಟ ನಿರ್ಬಂಧಗಳಿಗೆ ಸೊಪ್ಪು ಹಾಕುತ್ತಿರಲಿಲ್ಲ. ಅದರಿಂದ ಬರುವ ಕಷ್ಟನಷ್ಟ ಗಳನ್ನೂ ತಲೆಬಾಗಿಸದೆ ಸಹಿಸಿಕೊಳ್ಳುತ್ತಿದ್ದನು. ನನಗೂ ಅವನದೇ ಒಲಟು

ತನ ಬಂದಿದೆ. ಅಷ್ಟೆ. ನಿನಗೆ ದಣುವಾಗುತ್ತಿದೆ. ಇಲ್ಲಿ ಕಿಟ್ಟಿಯ ಮೇಲೆ ಕುಳಿತುಕೊ.

**ಸೇಟಜೀ:**—ಇಲ್ಲ, ಇಲ್ಲ, ನಿನ್ನ ಮಾತುಗಳನ್ನು ಕೇಳುತಿದ್ದಷ್ಟಕ್ಕೆ ನನಗೆ ನಿನ್ನ ಮೇಲಣ ಅಭಿಮಾನವು ಹೆಚ್ಚುತ್ತಿದೆ. ಆದರೆ ನನಗೆ ಇದೇ ಬಲು ಕಷ್ಟದ ಸಮಸ್ಯೆ. ನೀನು ಇಷ್ಟು ಹಗಲು ರಾತ್ರಿ ಕಷ್ಟಪಟ್ಟು ನನ್ನ ಜೀವವನ್ನು ಉಳಿಸಿದ್ದಕ್ಕೆ ನನ್ನಿಂದ ಏನೊಂದು ಬಗೆಯ ಪ್ರತ್ಯುಪಕಾರವನ್ನು ಮಾಡಲಾಗದೆ ಹೋಯಿತಲ್ಲ! ಇದೇ ನನ್ನ ವ್ಯಸನ. ನನ್ನ ಹರೆಯದಲ್ಲಿ ಬರೀ ಬರಹ-ಲೆಕ್ಕಗಳ ವೃತ್ತಿಯಲ್ಲದೆ ಮತ್ತೇನನ್ನೂ ನಾನು ಕಲಿಯಲಿಲ್ಲ. ಈ ವೃದ್ಧಾಪ್ಯದಲ್ಲಿ ಈಗ ಹೊಸತೊಂದು ವೃತ್ತಿಯನ್ನು ಕಲಿಯುವ ಚೈತನ್ಯವಿಲ್ಲ.

**ರಾಧೆ:**—ಹಾಗಿದ್ದರೆ ಚರ್ಕದಲ್ಲಿ ನೂಲು ತೆಗೆಯುವೆಯಾ? ಇಲ್ಲವಾದರೆ ಅದಕ್ಕಿಂತಲೂ ಸುಲಭವಾಗಿ ತಕ್ಲಿಯಲ್ಲಿ ನೂಲು ತೆಗೆಯುವೆಯಾ? ದಿನಕ್ಕೆ ನಾಲ್ಕೈದು ಆಣೆ ಸಂಪಾದಿಸಬಹುದು. ಅಂದರೆ ನಿನ್ನ ಊಟದ ಖರ್ಚು ಅದರಿಂದ ಹೋದೀತು. ನೀನು ಇಲ್ಲೇ ಇದ್ದುಬಿಡು. ನೀನು ಮಾಡಿದ ನೂಲನ್ನು ನಾನು ಪೇಟೆಗೆ ಕೊಂಡುಹೋಗಿ ಮಾರಿ ದುಡ್ಡು ತರುವೆನು. ಅದನ್ನು ಮೊದಲು ನಿನ್ನದಾಗಿ ಪೋಸ್ಟಾಫೀಸಿನಲ್ಲಿ ಇಡುವೆನು. ಆ ಮೇಲೆ ಅದನ್ನು ಬೇಕಾದ ಹಾಗೆ ವೆಚ್ಚಮಾಡು.

**ಸೇಟಜೀ:**—'ಅಮ್ಮಾ ರಾದಮ್ಮ! ನನ್ನ ಊಟದ ಪ್ರತಿಫಲವನ್ನು ನಿನಗೆ ಕೊಡುವೆನೆನ್ನೋಣ. ಆದರೆ ನಿನ್ನ ದಯಾಭಾವದ ಆರೈಕೆಯ ಪ್ರತಿಫಲವನ್ನು ನಿನಗೆ ಈ ಜನ್ಮದಲ್ಲಿ ಕೊಟ್ಟು ತೀರಿಸಲು ಸಾಧ್ಯವುಂಟೇ?' ಎನ್ನುವಾಗ ಅವನ ಕಣ್ಣುಗಳು ಒದ್ದೆಯಾಗಿದ್ದವು. ಕೋಮಲೆಯಾದ ರಾಧೆಯ ಕಣ್ಣುಗಳಲ್ಲಿಯೂ ನೀರು ಉಕ್ಕಿ ಬಂದಿತ್ತು. ತನ್ನ ನಡುಗುವ ಕೈಯನ್ನು ಸೇಟಜಿಯು ಅವಳ ತಲೆಯ ಮೇಲಿಟ್ಟು 'ಅಮ್ಮಾ! ಇಹಪರಗಳಲ್ಲಿ ನಿನಗೆ ದೇವರು ಸುಖಶಾಂತಿಗಳನ್ನು ಕೊಡಲಿ! ಮತ್ತೇನು ಬೇಡಲಿ ನಾನು!' ಇಬ್ಬರೂ ತಟಸ್ಥರಾಗಿ ಕೆಲ ನಿಮಿಷಗಳ ವರೆಗೆ ಕುಳಿತುಕೊಂಡಿದ್ದರು. ಕಡೆಗೆ ರಾಧೆಯು ಫಕ್ಕನೆ ನಸುನಕ್ಕು 'ತಾತಾ! ಈ ದಿನ ಮಧ್ಯಾಹ್ನ

ನನಗೂ ಸಂಕಮ್ಮನಿಗೂ ಮಾತುಕಥೆ ನಡೆಯುವಾಗ ನಿನಗೆ ನಿದ್ರೆ ಬಂದಿರ ಲಿಲ್ಲವೇ? ನನ್ನೊಡನೆ ನಟನೆ ಮಾಡಿದಿಯಾ? ಸಂಕಮ್ಮನು ಒಂದು ವಿಚಿತ್ರ ರೀತಿಯ ಹೆಂಗಸು. ಅವಳ ಹೃದಯ ಒಳ್ಳೆಯದು. ನಾಲಗೆ ಮಾತ್ರ ಸ್ವಲ್ಪ ಹರಿತವಾಗಿದೆ. ಅಷ್ಟೆ. ಶಕುನಗಳ ಹುಚ್ಚು ಅವಳಿಗೆ ಹೆಚ್ಚು. ಅವಳ ಗಂಡ ಸುಬ್ಬಾಭಟ್ಟನು ಪೌರೋಹಿತ್ಯದ ಕೆಲಸ ಬಿಟ್ಟು ಈಗ ಕಟ್ಟಿಗೆ ವ್ಯಾಪಾರಿಯಾಗಿದ್ದಾನೆ. ಶವದಹನಸಂಸ್ಕಾರಗಳನ್ನೆಲ್ಲ ಅವನೇ ನಡಿಸು ತ್ತಾನೆ. ಹೀಗಾಗಿ ಅವನ ಸಂಸರ್ಗದಿಂದ ಅವಳ ಮಾತುಗಳಲ್ಲಿ ಬಿರುಸು ಹೆಚ್ಚು. ಅದಿರಲಿ. ನೀನು ನನಗೆ ವಂಚಿಸಲು ನೋಡಿದೆಯಾ ನಿದ್ದೆ ಬಿದ್ದಂತೆ ನಟಿಸಿ!'

**ಸೇಟಜೀ:**—'ನನ್ನನ್ನು ಕ್ಷಮಿಸು. ನಿನ್ನ ಮೇಲೆ ನನಗೆ ನಿಜವಾಗಿ ವಿಶ್ವಾಸಹುಟ್ಟಿದ್ದರೂ ನಿಮ್ಮ ಸಂಭಾಷಣೆಯು ನಿರ್ವಾಹವಿಲ್ಲದೆ ನನ್ನ ಕಿವಿ ಯಲ್ಲಿ ಬಿತ್ತು. ಸಂಪೂರ್ಣ ಕೇಳಬೇಕೆಂದು ದುಷ್ಟ ಕುತೂಹಲವು ನನ್ನ ಹೃದಯದಲ್ಲಿ ವ್ಯಾಪಿಸಿತು. ಅದರಿಂದ ನಿನ್ನ ತಂದೆಯು ಗೆಳೆಯನೆಂದು ವರ್ಣಿಸುವುದಕ್ಕೆ ನನಗೆ ಎಚ್ಚರಕೊಟ್ಟಂತಾಯಿತು. ಅಷ್ಟೆ. ಇಲ್ಲವಾದರೆ ನನಗೆ ಅದು ತಿಳಿಯದೆ ನಿನ್ನ ಮಾತು ಸುಳ್ಳಾಗುವ ಸಂಭವವಿತ್ತು, ಅಲ್ಲವೆ?' ಎಂದು ನಾಯಿಯ ಕಡೆಗೆ ನೋಡಿದನು. ಅದು ಹೌದೆಂದು ಹೇಳುವಂತೆ ಒಮ್ಮೆ ಮುದುಕನ ಮತ್ತು ಇನ್ನೊಮ್ಮೆ ರಾಧೆಯ ಕೈ ನೆಕ್ಕಿತು.

'ಓಹೊ ನಾವಿಬ್ಬರೂ ಸರಿಯೆಂದು ನಮ್ಮೊಳಗೆ ಕಚ್ಚಾಟ ಬರಬಾರ ದೆಂದು ನಿನ್ನ ಅಂಬೋಣವೆ? ಹಾಗೇ ಆಗಲಿ' ಎಂದು ಅವಳು ಅದನ್ನು ಪ್ರೀತಿಯಿಂದ ತಲೆ ಸವರಿದಳು. ಆ ಮೇಲೆ ಅವಳು 'ಇಗೊ ತಾತಾ! ನೀನಿನ್ನು ಏನೆಲ್ಲಾ ಮನಸ್ಸಿಗೆ ಹಚ್ಚಿಕೊಂಡು ತ್ರಾಣಕುಂದಿಸಿಕೊಳ್ಳಬೇಡ. ವೈದ್ಯನು ಆ ಕುರಿತು ನನ್ನೊಡನೆ ತುಂಬಾ ಎಚ್ಚರಿಸಿದ್ದಾನೆ.' ಎಂದಳು.

**ಸೇಟಜೀ:**—ವೈದ್ಯನಿಗೆ ಅದರಲ್ಲೇನಿದೆ?

**ರಾಧೆ:**—ವೈದ್ಯನಿಗೆ ಏನಿದೆಯೊ? ಆತನು ವಿಲಾಯತಿಯ ಚಿಕಿತ್ಸೆ ಯನ್ನೂ ರೀತಿಯನ್ನೂ ಅನುಸರಿಸುವವನಲ್ಲ. ಬಡವರ ಮೇಲೆ ತುಂಬಾ ಕನಿಕರವಿದೆ. ಆತನು ದುಡ್ಡಿನ ಗುಲಾಮನಲ್ಲ. ನಿನ್ನಿಂದ ಏನೂ ಪ್ರತಿ ಫಲ ಸಿಗುವ ಆಸೆ ಇಲ್ಲದಿದ್ದರೂ ಚೆನ್ನಾಗಿ ಕಷ್ಟಪಟ್ಟು ಪೇಚಾಡಿದ್ದಾನೆ.

**ಸೇಟಜೀ:**—ನಾನು ಅವನಿಗೆ ತುಂಬಾ ಆಭಾರಿಯಾಗಿದ್ದೇನೆ. ಆದರೆ ನಿನ್ನ ಉಪಕಾರದ ಮುಂದೆ ಅವನ ಉಪಕಾರವೇ?

**ರಾಧೆ:**—ಉಪಕಾರ ನನ್ನದೂ ಅಲ್ಲ, ವೈದ್ಯನದೂ ಅಲ್ಲ, ಆ ಸರ್ವಾಂತರ್ಯಾಮಿಯಾದ ದೇವರದೇ!

**ಸೇಟಜೀ:**—ಇಂಥ ಜ್ಞಾನವನ್ನು ನೀನೆಲ್ಲಿ ಕಲಿತೆ, ಶಾಲೆಯಿಂದಲೇ?

**ರಾಧೆ:**—ಶಾಲೆ! ಪ್ರಪಂಚವೇ ನಮ್ಮ ಶಾಲೆ! ನಾನು ಯಾವ ಶಾಲೆಗೂ ಹೋಗಲಿಲ್ಲ. ನಮ್ಮಪ್ಪನ ತೊಡೆಗಳ ಮೇಲೆಯೇ ಅಕ್ಷರಾಭ್ಯಾಸ ಮಾಡಿದೆನು. ಮಧ್ಯಾಹ್ನ ಮತ್ತು ರಾತ್ರೆ ಅವನಿಗೆ ವಿರಾಮವಿದ್ದಾಗ ಅವನು ಕೆಲವು ಗ್ರಂಥಗಳನ್ನು ಓದಿ ನನಗೂ ಅಷ್ಟುಷ್ಟು ವಿವರಿಸುತ್ತಿದ್ದನು. ಅವನಿಗೆ ಗ್ರಂಥವಾಚನದಲ್ಲಿ ಅಭಿರುಚಿ ಹೆಚ್ಚು.

ಇಷ್ಟು ಮಾತುಗಳು ನಡೆಯುವಷ್ಟರಲ್ಲಿ ಗುಂಡುಬುವಾನು ಬಂದೇ ಬಿಟ್ಟನು. 'ಈ ದಿನ ಹ್ಯಾಗೆ ಇದೆ ಪ್ರಕೃತಿ?' ಎಂದು ನಾಡಿಪರೀಕ್ಷೆ ನೋಡಿ 'ಈಗ ಚೆನ್ನಾಗಿದೆ' ಎಂದನು.

**ಸೇಟಜೀ:**—ನಿಮ್ಮಿಬ್ಬರ ಪ್ರಯತ್ನದಿಂದ ನಾನು ಹೇಗೂ ಈಚೆ ದಡವನ್ನೆ ಸೇರಿದೆ.

**ಗುಂಡುಬುವಾ:**—ಅದಿರಲಿ. ಈಗ ಬಹಳ ಎಚ್ಚರವಿರಬೇಕು. ಇನ್ನೂ ತ್ರಾಣ ಬರಲಿಲ್ಲ ನಿಮಗೆ! ಸ್ವಲ್ಪ ಅಜಾಗ್ರತೆ ಮಾಡಿದರೆ ತಿರಿಗಿ ಜ್ವರ ಬಂದೀತು! ಈಗ ಹಾಸಿಗೆಯಿಂದ ದಿನಕ್ಕೆ ಒಂದೆರಡು ಸಲ ಎದ್ದು ಕುಳಿತುಕೊಳ್ಳಬಹುದು. ಒಂದೆರಡು ಹೆಜ್ಜೆ ನಡೆದು ಮಧ್ಯಾಹ್ನ ಹೊರಗಿನ ಮೊಗಸಾಲೆಯಲ್ಲಿ ಸ್ವಲ್ಪ ಕುಳಿತುಕೊಳ್ಳಬಹುದು. ಎದೆಗುಂಡಿಗೆ ಇನ್ನೂ ಬಲವಾಗಿಲ್ಲ. ಆದ್ದರಿಂದ ಯಾವುದಕ್ಕೂ ದುಡುಕಬಾರದು.

ಸೇಟಜಿಗೆ ಇದನ್ನೆಲ್ಲ ನೋಡಿದಾಗ ತಾನು ನಿಜವಾಗಿಯೂ ಯಾರೆಂದು ಹೇಳಲೆ ಅನ್ನಿಸಿತು. ಆದರೆ ಹಾಗೆ ಹೇಳಿದೊಡನೆ ಈ ನಿಷ್ಕಾಮಪ್ರೇಮಿಗಳು ತಾನು ಮೋಸಮಾಡಿದೆನೆಂದು ತನ್ನನ್ನು ಓಡಿಸಿಬಿಡುವರೆ ಎಂಬ ಸಂದೇಹ ಬಂದಿತು. 'ವೈದ್ಯರೇ! ನಿಮಗೆ ದೇವರು ಒಳ್ಳೇದನ್ನು ಮಾಡಲಿ!' ಎಂದಷ್ಟೆ ಹೇಳಿ ಸುಮ್ಮಗಾದನು. ಗುಂಡುಬುವಾನು ತನ್ನ ಮನೆಗೆ ಹಿಂತೆರಳಿದನು.

---

## ೧೦ನೆ ಅಧ್ಯಾಯ

## ಗೋಪಾಲನ ಪರಿಚಯ

ಸೇಟಜಿಗೆ ದಿನ ಹೋಗುತ್ತ ಮೈಯಲ್ಲಿ ತ್ರಾಣ ತುಂಬಿತು. ಅವನು ದಿನಕ್ಕೆ ಒಂದೆರಡು ತಾಸು ತಕ್ಲಿಯಲ್ಲಿ ನೂತು ದಿನಕ್ಕೆ 3 ಆಣೆಯಂತೆ ದುಡಿಯಲು ಕಲಿತನು. ಮೊದಲನೆ ಸಲ 3 ಆಣೆ ತಂದಾಗ ಅವನಿಗೆ ತುಂಬಾ ಸಂತೋಷವಾಯಿತು. 'ಈ ಹಣವನ್ನು ನೀನೆ ಇಟ್ಟುಕೊ!' ಎಂದು ಉಲ್ಲಾಸದಿಂದ ಹೇಳಿದನು. ಅವಳು ಅವನಿಗೆ ತಿಳಿಯದಂತೆ ಪೋಸ್ಟಾಫೀಸ ಸೇವಿಂಗ್ಸ್ ಬೇಂಕಿನಲ್ಲಿ ಅವನ ಹೆಸರಿನಿಂದ ಕಟ್ಟಿದಳು. ಅವನು ಈಗ ಸಾಯಂಕಾಲ ಒಂದು ಕೋಲನ್ನೂರಿ ಕಡಲ ದಡದ ವರೆಗೆ ನಡೆದು ಅಲ್ಲಿ ತೆರೆಗಳ ಹೊಡೆತವನ್ನು ನೋಡುತ್ತ ಕುಳಿತು, ಕತ್ತಲಾಗು ವಷ್ಟರಲ್ಲಿ ಮನೆ ಸೇರುವನು. ಅವನು ಒಂಟಿಯಾಗಿಯೇ ಹೋಗಿ ಬರುತಿದ್ದನು. ಬರಬರುತ್ತ ಊರಿನ ಜನರೆಲ್ಲ ಅವನಿಗೆ ಪರಿಚಿತರಾದರು. ಸಣ್ಣ ಮಕ್ಕಳಂತೂ 'ತಾತಾ! ತಾತಾ!' ಎಂದು ಅವನ ಸುತ್ತು ಮುತ್ತಿ 'ಒಂದು ಕಥೆ ಹೇಳು' ಎಂದು ಹಿಂಬಾಲಿಸುವರು. ಅವನು ಅವರ ತಲೆ ಮೇಲೆ ಕೈ ಇಟ್ಟು, ಬೆನ್ನು ತಟ್ಟಿ, ಅವರನ್ನು ಒಮ್ಮೊಮ್ಮೆ ಜತೆಯಲ್ಲಿ ಕರೆದುಕೊಂಡು ಹೋಗುತಿದ್ದನು. ಹೀಗಾಗಿ ಎಲ್ಲರೂ ಅವನು ತಮ್ಮ ಊರಿನವನು ಎಂಬಂತೆ ಪರಿಭಾವಿಸುತಿದ್ದರು. ಅವನ ಪೂರ್ವಕಥೆ ಏನೆಂದು ಯಾರೊಬ್ಬರೂ ಕೇಳಿದ್ದಿಲ್ಲ; ರಾಧೆ ಕೂಡಾ ಕೇಳಿದ್ದಿಲ್ಲ. ಎಲ್ಲರಿಗೂ ಅವನು ತಾತನಾಗಿದ್ದನು. ಅವನನ್ನು ದಾರಿಯಲ್ಲಿ ಮಾತನಾಡಿಸದವರು ಯಾರೂ ಇಲ್ಲ. ಅವನ ಪರಿಚಿತರಲ್ಲಿ ಸುಡುಗಾಡು ಸುಬ್ಬಾಭಟ್ಟನು ಒಬ್ಬನು. ಅವನ ಕಟ್ಟಿಗೆ ಸಂಗ್ರಹಿಸಿದ ಚಪ್ಪರವನ್ನು ದಾಟಿಯೇ ಕಡಲ ದಡಕ್ಕೆ ಹೋಗುವ ದಾರಿ. ಹೋಗುವಾಗ ಅಥವಾ ಬರುವಾಗ ಸುಬ್ಬಾಭಟ್ಟನು ಆತನನ್ನು ಮಾತನಾಡಿಸದೆ ಇಲ್ಲ. ಅವನು ಸಾಮಾನ್ಯವಾಗಿ ಆ ಹಳ್ಳಿಯ ಗಜೇಟು. ಅವನಲ್ಲಿಲ್ಲದ ವರ್ತಮಾನವೇ ಇಲ್ಲ. ಹೀಗಾಗಿ ಸೇಟಜಿಯ ಕಾಲವು ಸುಖವಾಗಿ ಕಳೆಯಿತು. ಅವನಿಗೆ ನಾಸಿಕಕ್ಕೆ ಹೋಗುವ ವಿಚಾರವೇ ಮನಸ್ಸಿನಿಂದ ಕಳಚಿಹೋಯಿತು.

ಒಂದು ದಿನ ಸೇಟಜಿಯು ಎಂದಿನಂತೆ ಸುಬ್ಬಾಭಟ್ಟನ ಚಪ್ಪರಕ್ಕೆ ಸಮೀಪಿಸಿದನು. ಆಗ ಅವನು ಅಂದೇ ಬಂದ ಹೊಸ ಕಟ್ಟಿಗೆಯನ್ನು ಒಟ್ಟಿ ರಾಶಿಯಾಗಿ ಇಡುತಿದ್ದನು. 'ಏನು ಭಟ್ಟರೇ! ತುಂಬಾ ಕೆಲಸದಲ್ಲಿದ್ದೀರಿ. ಒಹೊ, ಕಟ್ಟಿಗೆ ಒಟ್ಟುತ್ತೀರೇನು? ನನಗೋಸ್ಕರ ಕಟ್ಟಿಗೆ ಒಟ್ಟುವ ದಿನ ಬಹಳ ದೂರವಾಗಿಲ್ಲ' ಎಂದು ನಸುನಗುತ್ತ ಹೇಳಿದನು.

**ಸುಬ್ಬಾ:**— ನಿಮಗೋಸ್ಕರವೇ! ನೀವೇನೂ ಸಂದೇಹಪಡಬೇಡಿ. ನಿಮ್ಮ ದೇಹವನ್ನು ಉಳಿಯದಂತೆ ಸುಟ್ಟು ಬೂದಿಮಾಡುವುದು ನನಗೆ ಒಪ್ಪಿತು. ದೇಹವನ್ನು ಸುಡಬೇಕೆಂದು ನಮ್ಮ ಪೂರ್ವಜರು ಎಂಥ ಒಳ್ಳೇ ಕ್ರಮವನ್ನು ಮಾಡಿದ್ದಾರೆ!

**ಸೇಟಜೀ:**— ಅದು ಒಳ್ಳೆಯ ಕ್ರಮವೇ! ಪಾಶ್ಚಾತ್ಯರಲ್ಲಿಯೂ ಇಲ್ಲಿ ಬ್ರಾಹ್ಮಣೇತರರಲ್ಲಿಯೂ ಹೂಳುವ ಕ್ರಮವಿದೆಯಲ್ಲ!

**ಸುಬ್ಬಾ:**— ಹಾಗಿದ್ದುದರಿಂದ ಪಾಶ್ಚಾತ್ಯರಲ್ಲಿ ಬಾವಿ ನೀರನ್ನು ಕುಡಿಯುವುದಿಲ್ಲ, ಎಲ್ಲಾ ನಳಿಗೆ ನೀರೇ! ಬಾವಿ ನೀರಿನಲ್ಲಿ ಸತ್ತ ದೇಹಗಳೊಂದಿಗೆ ಸೇರಿದ ಮಣ್ಣಿಂದ ನೀರು ಹರಿಯುವುದರಿಂದ ಅದು ನಿರ್ಮಲ ವಾಗಿರುವುದಿಲ್ಲವಂತೆ. ಇಲ್ಲಿ ನಾವು ಹರಿದುಹೋಗುವ ನದಿಯ ನೀರನ್ನು ಅಥವಾ ಬಾವಿಯ ನೀರನ್ನು ಕುಡಿಯುವುದರಿಂದ ಊರಿಗೆ ಹತ್ತಿರವಾಗಿ ಅಂಥ ಹೂಳುವ ಶ್ಮಶಾನಗಳಿಲ್ಲ. ಇನ್ನೊಂದು ಗುಟ್ಟು ಇದೆ. ಸತ್ತ ಮೇಲೆ ದೇಹವನ್ನು ತ್ಯಜಿಸಿದ ಜೀವನು ಆ ದೇಹದ ಮೇಲಣ ಪ್ರೀತಿಯಿಂದ ಅದನ್ನು ಹುಡುಕಿ ಪುನಃ ಇಲ್ಲಿಗೆ ಬರುತ್ತಾನೆ. ಆಗ್ಗೆ ಆ ದೇಹವನ್ನು ಸುಟ್ಟು ಬಿಟ್ಟರೆ ಅವನು ಸತ್ತ ತಿಥಿಯ ದಿನವಲ್ಲದೆ ಇತರ ದಿನಗಳಲ್ಲಿ ಇಲ್ಲಿಗೆ ಬರುವುದೇ ಇಲ್ಲ. ಇಲ್ಲವಾದರೆ ಬೇರೊಂದು ದೇಹವನ್ನು ಸೇರಿ ಹೊಸ ಜನ್ಮ ಹೊಂದುತ್ತಾನೆ. ಹೀಗೆ ಅವನು ಪುನಃ ಬಾರದಂತೆ ಮಾಡುವುದು ನಮ್ಮ ಉದ್ದೇಶ. ಹೂಳುವ ಜಾತಿಗಳ ಆತ್ಮನು ಆ ಶ್ಮಶಾನದಲ್ಲಿ ಪ್ರೇತ ವಾಗಿ ಸುಳಿಯುತ್ತಾನೆ ಎಂದು ನಮ್ಮ ಅಪ್ಪ ಹೇಳುತಿದ್ದರು. ಆದ್ದರಿಂದ ಎಲ್ಲಾ ಕೆಲಸಗಳಿಗಿಂತಲೂ ಈ ದೇಹ ಸುಡುವ ಕೆಲಸವು ಮಹತ್ವದ್ದು. ಅದಕ್ಕೋಸ್ಕರ ನಾನು ಆ ಕೆಲಸಕ್ಕೆ ಕೈಹಚ್ಚಿದ್ದೇನೆ, ಬರೇ ಜೀವನ ಸಾಗಿ

ಸುವ ಉದ್ದೇಶದಿಂದಲ್ಲ. ಜನರು ಬೇಕಾದ ಹಾಗೆ ಆಡಿಕೊಳ್ಳಲಿ. ನಾನು ಮಾಡುವ ಕೆಲಸವು ಬಹಳ ಪುಣ್ಯಕರವಾದದ್ದು. ಈಗ ನೋಡಿ, ಆ ತಾಂತಿಯು ಎಂಬವನೊಬ್ಬನು ಇದ್ದ!—

**ಸೇಟಜೀ:**—ಯಾರು? ಹೆಸರುಗೊಂಡ ದರೋಡೆ ಕಳ್ಳನೇ?

**ಸುಬ್ಬಾ:**—ಹೌದು ಹೌದು, ನೀವು ಅವನ ಹೆಸರನ್ನು ಕೇಳಿದ್ದೀರಾ!

**ಸೇಟಜೀ:**—ಕೇಳಿದ್ದಷ್ಟೆ ಅಲ್ಲ. ಅವನ ಮರಣಕಾಲದಲ್ಲಿ ನಾನು ಆ ಹೊಟೆಲಿನಲ್ಲಿದ್ದೆ.

**ಸುಬ್ಬಾ:**—ಇಗೊ ನೋಡಿ! ಅವನ ಮಗುವಿಗೆ ದೇಸಾಯಿಯ ಕಾರಿನಿಂದ ಅಕಾಲಮರಣ ಪ್ರಾಪ್ತವಾಯಿತಲ್ಲ! ಎಂಥ ಚೆಲೊ ಹುಡುಗ, ಅದು! ಕಾರಿನಲ್ಲಿ ಹೋಗುವವರಿಗೆ ಹೂಗೊಂಚಲು ಸಮರ್ಪಣೆಯೇ? ಭೂತಪಿಶಾಚಿಗಳಿಗಾದರೂ ಸಮರ್ಪಣೆ ಮಾಡಬಹುದಿತ್ತು. ಭೂತ ಪಿಶಾಚಿಗಳು ಕೂಡಾ ಆ ಮಗುವನ್ನು ನೋಯಿಸುತ್ತಿರಲಿಲ್ಲ. ಅಂಥ ಮಗುವದು! ಈ ಹಾಳು ಮೋಟರುಗಳು ನಮ್ಮ ಹಳ್ಳಿಗೆ ಬರುವುದಿಲ್ಲ, ಅದೊಂದು ಕ್ಷೇಮ ನಮಗೆ! ಅಂತು ಎಲ್ಲಿಯ ಮಾತು ಎಲ್ಲಿಗೊ ಹೋಯಿತು! ಆ ತಾಂತಿಯನಿಗೆ ಅವನ ಜಾತಿಯ ದರೋಡೆ ಕಳ್ಳರು ಜಲ ಸಮಾಧಿಯನ್ನು ಕೊಟ್ಟರಂತೆ. ಅವನನ್ನೂ ಮಗುವನ್ನೂ ಒಂದು ದೋಣಿ ಯಲ್ಲಿ ಮಲಗಿಸಿ ಕಡಲಲ್ಲಿ ಒಂದು ಮೈಲು ದೂರದ ವರೆಗೆ ಕೊಂಡು ಹೋಗಿ ಅಲ್ಲಿ ಬಂಡೆಕಲ್ಲಿನ ಆವರಣವಿರುವ ಒಂದು ಹಳ್ಳದಲ್ಲಿ ಇಳೀ ಬಿಟ್ಟರಂತೆ! ಈಗ ತುಫಾನಿನ ಸಮಯದಲ್ಲಿ ಅವನು ತೆರೆಗಳ ಮೇಲೆ ನಿಂತು ಕುಣಿದಾಡಿ ಬೊಬ್ಬಿರಿದುದನ್ನು ಕೇಳಿದ್ದೇವೆಂದು ಬೆಸ್ತರು ಹೇಳುತ್ತಾರೆ. ಅವನನ್ನು ಸುಟ್ಟಿದ್ದರೆ ಹಾಗಾಗುತ್ತಿರಲಿಲ್ಲ.

ಈ ಮಾತುಗಳನ್ನು ಕೇಳುವಾಗ ಸುಬ್ಬಾಭಟ್ಟನಲ್ಲಿರುವ ಅಂಧವಿಶ್ವಾಸ ವನ್ನು ನೋಡಿ ಸೇಟಜಿಗೆ ತುಸು ನಗೆ ಬಂತು. ಆದರೆ ಮೂಗನ್ನು ಸುರಿಯುವವನಂತೆ ನಟಿಸಿ ಅದನ್ನು ಮರೆಪಡಿಸಿದನು. ಅದರೊಂದಿಗೆ ತಾಂತಿಯನ ಮರಣದ ಪ್ರಸ್ತಾಪದಿಂದ 'ನಾನು ಯಾರಿಗೂ ಲಕ್ಷಿಸುವವ

ನಲ್ಲ, ಇಡೋದು ಕೊಲ್ಲೋದು ನನ್ನಿಚ್ಛೆ' ಎಂದು ಗಂಗೂಬಾಯಿಯ ಹೊಟೆಲಿನಲ್ಲಿ ಆತನು ಆಡಿದ ಮಾತು ಜ್ಞಾಪಕಕ್ಕೆ ಬಂತು. ಅದನ್ನು ಯೋಚಿಸುತ್ತ ಅವನು ಸುಬ್ಬಾಭಟ್ಟನೊಡನೆ ಮಾತು ಮುಗಿಸಿ ಕಡಲ ದಡಕ್ಕೆ ಹೋಗಿ ಆ ದೊಡ್ಡದಾದ ತೆರೆಗಳು ಒಂದರ ಹಿಂದೆ ಒಂದಾಗಿ ಹೊರಟು ದಡಕ್ಕೆ ಅಪ್ಪಳಿಸಿ ಹಿಂತಿರುಗುವುದನ್ನೂ ಅವನ ಕಾಲ ಬುಡದಲ್ಲಿರುವ ಹೊಯಿಗೆಯನ್ನು ಸೆಳೆದುಕೊಂಡು ಹೋಗುವುದನ್ನೂ ನೋಡುತ್ತ ನಿಂತನು. ಆಗ ಅವನಲ್ಲಿ ಇನ್ನೊಂದು ಹೊಸ ವಿಚಾರವು ಹೊಳೆಯಿತು.

'ಆತ್ಮಹತ್ಯವೆಂದರೆ ಎಂಥ ಅವಿಚಾರದ ಕೆಲಸ! ಮೆದುಳಿನ ದ್ರವವು ಬತ್ತಿಹೋಗಿ ಮೆದುಳಿನ ಶಕ್ತಿ ಶೂನ್ಯವಾದುದರಿಂದ ಸಂಭವಿಸುವ ಆಪತ್ತು ಅದು! ಈ ಶುದ್ಧವಾಯು, ಆಕಾಶದಲ್ಲಿ ತಪ್ಪದೆ ಹೊಳೆಯುವ ಈ ನಕ್ಷತ್ರ ಗಳು, ನೆಲದ ಮೇಲೆ ಹುಲುಸಾಗಿ ಬೆಳೆದು ನೆರಳನ್ನು ಕೊಡುವ ಈ ತರು ಗಿಡಗಳು, ಈ ಗಂಭೀರವಾದ ಸಮುದ್ರ ಇವುಗಳ ಅಂದವಾದ ರಚನೆಯನ್ನು ನೋಡಿ ಸುಖಪಡೆಯುವುದನ್ನು ಬಿಟ್ಟು ಆತ್ಮಹತ್ಯಮಾಡಿಕೊಳ್ಳುವುದೆಂದರೆ ಎಂಥ ಭ್ರಮೆ! ಆದರೂ ಇದಕ್ಕಿಂತಲೂ ಉತ್ತಮವಾದ ಇನ್ನೊಂದು ಲೋಕ ವಿದೆ ಎಂದು ನಮ್ಮ ಜೀವಾತ್ಮನಿಗೆ ಅಸ್ಪಷ್ಟವಾದ ಏನೋ ಒಂದು ತಿಳಿ ವಳಿಕೆಯು ಇದೆ. ಅದು ರೂಪುಗೊಂಡಿಲ್ಲ. ಹೇಗಿದ್ದರೂ ಈಗೀಗಲೆ ನಾನು ಹೊಸತೊಂದು ಸುಖಜೀವನದ ದಾರಿಯಲ್ಲಿ ಅಡಿ ಇಟ್ಟಾಗ ಇದನ್ನು ತೊಲಗಿ ಏನೊಂದು ಹೊಲಬು ಅರಿಯದ ಇನ್ನೊಂದು ಲೋಕದ ಆಸೆಯನ್ನು ಮಾಡುವುದು ನ್ಯಾಯವೇ? ಈ ರಾಧೆ ಇದು ನಿಜವಾಗಿಯೂ ಕಮಲ, ಕೆಸರಿನಲ್ಲಿದ್ದರೂ ನಿರ್ಲೇಪಿಯಾದ ಹೂ, ಶುದ್ಧಾಂತಃಕರಣ, ಪ್ರಾಮಾಣಿಕತೆ ಗಳಿಂದ ಕೂಡಿದ ಕೋಮಲೆ! ಬರೆ ಬಡ ಬ್ರಾಹ್ಮಣನ ಮಗಳಾದರೆ ಏನಾಯಿತು? ಜಾತಿಬಹಿಷ್ಕಾರದ ಪೀಡೆಗೆ ಒಳಗಾದರೆ ಏನಾಯಿತು? ಅವಳ ನಿಷ್ಕಲಂಕವಾದ ದೇವಭಕ್ತಿ, ಶುದ್ಧಾಚರಣೆ, ಭೂತದಯೆ ಇವುಗಳಿಗೇನಾ ದರೂ ಕಡಿಮೆಯೇ? ಒಂದೇ ಒಂದು ಗಳಿಗೆಯಾದರೂ ಒಣ ಹರಟೆಗೆ ಅವಳ ನಾಲಗೆ ಅವಕಾಶಕೊಡುವುದಿಲ್ಲ. ಕೈತುಂಬಾ ಕೆಲಸವಿದೆ. ಅವಳು ದಣುವಿನಿಂದ ಬೇಸರಪಟ್ಟಿಲ್ಲ. ಇಂಥವಳಿಗೆ ನಿಜವಾಗಿಯೂ ವಿವಾಹವಾಗ

ಬೇಕಿತ್ತು. ಇವಳಲ್ಲಿ ಹುಟ್ಟುವ ಮಕ್ಕಳು ದೇವಾಂಶದಿಂದ ತುಂಬಿಹೋಗು ತಿದ್ದರು. ಬಡತನದಲ್ಲಿದ್ದರೂ ಮಹಾಪುರುಷರಾಗುತಿದ್ದರೊ ಏನೊ? ಇವಳ ದಿನಚರ್ಯೆಯೆಂಬದು ಯಂತ್ರರೂಪದಿಂದ ಎಡೆಬಿಡದೆ ನಡೆಯುವ— ಕ್ರಮುವಾಗಿ ವ್ಯವಸ್ಥೆಯಿಂದ ನಡೆಯುವ ಕಾರ್ಯಸರಣಿ. ಇಂಥ ಸ್ತ್ರೀರತ್ನವು ನ್ಯಾಯವಾದ ಕುಂದಣದಲ್ಲಿ ಸೇರಿ ಸಂಸಾರಸುಖವನ್ನು ಹೇಗೆ ಅನು ಭವಿಸುವಳೊ ಎಂದು ನಾನು ಸತ್ತ ಮೇಲೂ ಇಲ್ಲಿ ಬಂದು ನೋಡಲು ಸಾಧ್ಯವುಂಟೇ? ದಿನ ಹೋಗುತ್ತ ಅವಳನ್ನು ಕಂಡ ಹಾಗೆ ಇಂಥದ್ದೊಂದು ಮಗು ನನ್ನಲ್ಲಿದ್ದಿದ್ದರೆ—ಎಂದು ನನ್ನ ಹೃದಯವು ಚಿಂತೆಯಿಂದ ಸುಡುತ್ತಿದೆ. ಇದು ಉಪಶಮನವಾಗಲು ದಾರಿ ಇಲ್ಲ, ದಿಕ್ಕು ಇಲ್ಲ. ಹೇಗೂ ಇರಲಿ. ಕಾಲ ಬಂದಾಗ ಅವನನ್ನು ಧಿಕ್ಕರಿಸಲು ಸಾಧ್ಯವಿಲ್ಲ. ಅವನ ದಾರಿ ನೋಡು ವುದೇ ಉತ್ತಮ' ಎಂದು ಹೇಳುತ್ತಾ ಅವನು ದಡದ ಮೇಲೆ ಹತ್ತಿ ಬರುವಾಗ ಒಂದು ಕಾಗದದ ಚೂರು ಗಾಳಿಗೆ ಹಾರಿ ಅವನ ಊರುಕೋಲಿನ ಅಡಿಗೆ ಸಿಕ್ಕಿಕೊಂಡಿತು. ಅದರ ಹಿಂದೆಯೆ ಒಬ್ಬ ತರುಣನು ಒಂದು ಬಂಡೆಯಿಂದ ಹಾರಿ ಅವನ ಎದುರಿಗೆ ಬಂದು ನಿಂತು 'ಆ ಕಾಗದ ನನ್ನದು. ಗಾಳಿಗೆ ಹಾರಿ ಹೋಗಿ ಕಡಲ ಪಾಲಾಗುತ್ತಿತ್ತು ನೀವು ಕೋಲಿನಿಂದ ತಡಿಸದಿದ್ದರೆ' ಎಂದು ಕಾಗದಕ್ಕೆ ಕೈಚಾಚಿದನು. ಸೇಟಜಿಯು ಆ ಕಾಗದದ ಚೂರನ್ನು ಆ ತರುಣನಿಗೆ ಒಪ್ಪಿಸಿದನು. ಆ ಯುವಕನು ಸುಮಾರು 25 ವರ್ಷ ಪ್ರಾಯದವನು; ಸುರೂಪಿಯೂ, ಸುಲಕ್ಷಣಗಳುಳ್ಳವನೂ ಅಂಗಸೌಷ್ಠವ ವುಳ್ಳವನೂ ಎಂದು ಸೇಟಜಿಗೆ ಕಂಡಿತು. ಆತನನ್ನು ಮಾತನಾಡಿಸಬೇಕೆಂಬ ಅಭಿಲಾಷೆಯೂ ಆತನನ್ನು ಆವರಿಸಿತು.

**ಸೇಟಜೀ:—** ನೀವು ಸಮುದ್ರತೀರವನ್ನು ನೋಡಿ ಅದರ ಅಂದ ವನ್ನು ವರ್ಣಿಸುತ್ತ ಕುಳಿತಿದ್ದಂತೆ ಕಾಣುತ್ತದೆ.

**ತರುಣ:—** ಹಾಗೆನ್ನಬಹುದು. ನಾನು ಇಲ್ಲಿಯ ಒಂದು ಗುಡಿಸಲಿ ನಲ್ಲಿ ವಾಸವಾಗಿದ್ದೇನೆ. ಇಲ್ಲಿಗೆ ಬಂದು ಎಂಟು ದಿನಗಳಾದುವು. ಇಲ್ಲಿಗೆ ಶುದ್ಧವಾಯುಸೇವನೆಗೆ ಬಂದು ಕುಳಿತುಕೊಂಡಿದ್ದೆ. ಈಗ ನಿಮ್ಮ ಜತೆಗೆ ಬಂದು ನಿಮ್ಮನ್ನು ರಾಧಾಬಾಯಿಯ ಮನೆ ವರೆಗೆ ಮುಟ್ಟಿಸಲೇ? ನೀವು ಜೀವನದಾಸರಲ್ಲವೇ?

**ಸೇಟಜೀ:**—ನೀವು ಬಂದ ಎಂಟು ದಿನಗಳೊಳಗೆ ನನ್ನ ಹೆಸರು, ನಾನಿರುವ ಮನೆಯ ಹೆಸರು ಇಷ್ಟನ್ನು ಕಂಡುಹಿಡಿದಿರಾ?

**ತರುಣ:**—ನಿಮ್ಮ ಪರಿಚಿತಿಯಿಲ್ಲದವರು ಈ ಹಳ್ಳಿಯಲ್ಲಿ ಯಾರೂ ಇಲ್ಲ. ಎಲ್ಲರ ಬಾಯಿಯಲ್ಲಿ ನಿಮ್ಮ ಮಾತು. ಆದ್ದರಿಂದ ನನಗೆ ಅದನ್ನು ತಿಳಿಯಲು ಕಷ್ಟವಾಗಿಲ್ಲ. ನನ್ನ ಹೆಸರು ಗೋಪಾಲ. ನಾನು ಚಿಪ್ಳುಣಕರ ಮನೆತನದ ಚಿತ್ಪಾವನ ಬ್ರಾಹ್ಮಣನು. ಬನ್ನಿ, ನನ್ನ ಹೆಗಲನ್ನು ಆಧರಿಸಿರಿ. ನಾನು ನಿಮ್ಮ ಕೈಹಿಡಿದು ನಿಮ್ಮೊಂದಿಗೆ ಮೆಲ್ಲಗೆ ನಡೆಯುವೆನು.

ಯುವಕನ ಮಾತುಗಳನ್ನು ಕೇಳುವಷ್ಟರಲ್ಲಿ ಸೇಟಜಿಯ ಮನಸ್ಸು ಅವನ ಕಡೆಗೆ ಆಕರ್ಷಿತವಾಯಿತು. ಇಬ್ಬರೂ ಸಲ್ಲಾಪಮಾಡುತ್ತ ರಸ್ತೆಯನ್ನು ಹಿಡಿದರು.

'ನಾನು ಮುಂಬಯಿಗೆ ಸಮೀಪದ ಹಳ್ಳಿಯವನು. ಪೂನೆಯ ಡೆಕ್ಕನ ಕಾಲೆಜಿನಲ್ಲಿ ಯಮ್. ಎ. ಪಾಸು ಮಾಡಿದವನು. ಮುಂಬಯಿಯಲ್ಲಿ ಒಂದು ದೈನಿಕ ವರ್ತಮಾನಪತ್ರಿಕೆಯ ಉಪಸಂಪಾದಕರಲ್ಲಿ ಒಬ್ಬನಾಗಿದ್ದೆನು. ಅಲ್ಲಿ ತಿಂಗಳಿಗೆ ನೂರು ರೂಪಾಯಿ ನನಗೆ ಸಿಗುತಿತ್ತು. ಮುಂಬಯಿಯಲ್ಲಿ ಖರ್ಚಿಗೆ ಪೂರೈಸಲಿಲ್ಲ. ಅಲ್ಲಿ ಖಾನಾವಳಿಯ ಊಟ, ಇರಾನಿಯವರ ಅಂಗಡಿಯ ತಿಂಡಿ ಚಾ ಇವುಗಳಿಗೆನೇ ಹೆಚ್ಚು ವೆಚ್ಚವಾಗುತಿತ್ತು. ಈಗ ಚಾ ಮತ್ತು ತಿಂಡಿಯನ್ನು ಬಿಟ್ಟಿದ್ದೇನೆ. ದಿನಕ್ಕೆ ಎರಡೆ ಊಟ, ಕೈಅಡಿಗೆ, ಅನ್ನುವಾಗ ಒಂದು ಹಪ್ತೆಗೆ 2 ರೂಪಾಯಿ ಇಲ್ಲಿ ಖರ್ಚು ಬೀಳುತ್ತದೆ. ನಾನು ಉಳಿಸಿದ ಹಣದಿಂದ ಒಂದು ವರ್ಷ ಕಾಲ ಇಲ್ಲಿ ನೂಕಬಹುದು.

**ಸೇಟಜೀ:**—ಚಾ ಮತ್ತು ತಿಂಡಿ ಬಿಟ್ಟಿದ್ದರಿಂದ ನಿಮಗೆ ಆಯಾಸವಾಗುವುದಿಲ್ಲವೇ?

**ಗೋಪಾಲ:**—ಛೆ! ಛೆ! ಒಂದೆರಡು ದಿನ ಹೊಟ್ಟೆಯಲ್ಲಿ ಆ ಹೊತ್ತಿಗೆ 'ಚುಯಿಂ' ಅಂದಿತು. ನಾನು ಲಕ್ಷ್ಯಮಾಡಲಿಲ್ಲ. ಈಗ ನನಗೆ ಊಟ ಚೆನ್ನಾಗಿ ಸೇರುತ್ತಿದೆ. ನಿದ್ದೆ ಸರಿಯಾಗಿ ಬೀಳುತ್ತದೆ; ಮತ್ತೆ ಆಯಾಸ ಆಗುವುದು ಹೇಗೆ?

**ಸೇಟಜೀ:**—ನೀವು ಪತ್ರಿಕೆಯ ಉಪಸಂಪಾದಕರಾಗಿದ್ದಿರಿ ಅನ್ನುತ್ತೀರಿ. ಈಗ ಅಲ್ಲಿ ಇಲ್ಲವೇ?

**ಗೋಪಾಲ:**—ಈಗ ಇಲ್ಲ! 'ನನಗೂ ಚಾಕರಿ ಬೇಡ, ನಾಯಕರೂ ಥೂ ಅಂದರು' ಎಂಬಂತಾಯಿತು. ನನ್ನ ಉಪಸಂಪಾದಕೀಯ ಲೇಖನದಲ್ಲಿ ಮುಂಬಯಿಯ ಒಬ್ಬ ಗೃಹಸ್ಥನ ಕೃತ್ರಿಮೋಪಾಯದ ಟೀಕೆಯನ್ನು ಬರೆದೆನು. ಆತನು ಪತ್ರಿಕೆಯ ಮ್ಯಾಲಿಕರಲ್ಲಿ ಒಬ್ಬನೆಂದು ನಾನು ತಿಳಿದಿರಲಿಲ್ಲ. ಅವನ ಹೊಗಳಿಕೆಯನ್ನು ಬರೆಯುವ ಬದಲಾಗಿ ತೆಗಳಿಕೆ ಮಾಡಿದ್ದರಿಂದ ದೊಡ್ಡ ಗಲಭೆಯುಂಟಾಯಿತು. ಮುಖ್ಯ ಸಂಪಾದಕರು ನನ್ನನ್ನು ಕರೆಯಿಸಿ 'ನೀನು ತಿಳಿಗೇಡಿ! ನಿನ್ನಿಂದ ನನಗೆ ಕಷ್ಟ ಬಂತು!' ಎಂದರು. ಆದ್ದರಿಂದ ನಾನು ಅವರಿಂದ ಕಾಯಂ ರಜೆ ಪಡೆದೆ. ಹ! ಹ! ಹ! ಕಾಯಂ ರಜೆ. ಈಗ ನಾನು ಸ್ವತಂತ್ರನು. ಹೇಗೆ ಕೈಬೀಸಿದರೂ ನನ್ನನ್ನು ಕೇಳುವವರಿಲ್ಲ. ನನ್ನ ಮನಸ್ಸಾಕ್ಷಿಯನ್ನು ವಿಕ್ರಯಿಸಲಿಕ್ಕೆ ನಾನು ಒಡಂಬಡಲಿಲ್ಲ! ಅಷ್ಟೆ. ಆ ಮೇಲೆ ಕೆಲಸ ಹುಡುಕಿದೆ. ಪತ್ರಿಕೆಯ ಆಫೀಸಿನಿಂದ ಹೊರಪಟ್ಟವನೆಂದು ತಿಳಿದು ಯಾರೂ ನನ್ನನ್ನು ನೇಮಿಸಲಿಲ್ಲ. ಹಳ್ಳಿಯ ದಾರಿ ಹಿಡಿದೆ. 'ಕೆಟ್ಟರೆ ಪಟ್ಣ ಸೇರಬೇಕು' ಎನ್ನುವ ಬದಲಾಗಿ 'ಹಳ್ಳಿ ಸೇರಬೇಕು' ಎಂದೆ.

**ಸೇಟಜೀ:**—ಈಗ ಜೀವನಕ್ಕೆ ದಾರಿ?

**ಗೋಪಾಲ:**—ಬಹಳ ಮಿತವ್ಯಯದಿಂದ ಒಂದು ವರ್ಷದ ವರೆಗೆ ಖರ್ಚಿಗೆ ನನ್ನ ಬಳಿಯಲ್ಲಿ ಹಣವಿದೆ ಎಂದೆನಲ್ಲ! ನಾನೊಂದು ಕಾದಂಬರಿಯನ್ನು ಬರೆಯುತಿದ್ದೇನೆ. ಶಾಂತಚಿತ್ತನಾಗಿ ಅದನ್ನು ಪೂರೈಸಲಿಕ್ಕೆ ಹಳ್ಳಿಯೇ ಅನುಕೂಲ! ಕಾದಂಬರಿಯೆಂದರೆ ಬರೇ ಈಗಿನವರು ಬರೆಯುವ ಕೃತಕ ಚಿತ್ರವಲ್ಲ. ನಿಜವಾದ ಜೀವನದ ಚಿತ್ರ. ಅದನ್ನು ಬರೆಯಬೇಕಾದರೆ ಇಂಥ ನಿರ್ಜನ ಸ್ಥಳವೇ ಉಪಯುಕ್ತವಾಗಿದೆ. ಈಗಿನ ಜನರ ಸ್ಥಿತಿ ಹೇಗಿದೆ, ಬಲ್ಲಿರಾ! ಕಣ್ಣಿದ್ದು ಕುರುಡರಾಗಿ, ಕಿವಿಯಿದ್ದು ಕಿವುಡರಾಗಿ, ನಾಲಗೆಯಿದ್ದು ಮೂಕರಾಗಿ ಅವರು ಮುಂದೆ ಹೋಗುತಿದ್ದಾರೆ, ಗೊತ್ತು ಗುರಿಯಿಲ್ಲದೆ ಓಡುತಿದ್ದಾರೆ; ಮುಂದೆ ಕಠಿಣವಾದ ಪ್ರಪಾತವಿದ್ದರೂ ಅವರಿಗೆ ಕಾಣಿಸುವುದಿಲ್ಲ. ಓಡುತಿದ್ದಾರೆ, ಕುರಿಯು ಹಳ್ಳದ ಕಡೆಗೆ ಓಡಿ

ದಂತೆ. ಆ ಮೇಲೆ ಸರ್ವನಾಶ, ಮಹಾಪ್ರಲಯು. ನಾವು ಜನ್ಮವೆತ್ತಿದ ಉದ್ದೇಶವೇನು, ನಮ್ಮ ಕರ್ತವ್ಯವೇನು ಎಂಬ ಕಡೆಗೆ ಅವರ ದೃಷ್ಟಿ ಪಸರಿಸುವುದಿಲ್ಲ.

**ಸೇಟಜೀ:**—ನನ್ನ, ನಿಮ್ಮ ಗತಿಯೂ ಅದೇ ಅಲ್ಲವೇ, ಕೊನೆಗೆ ಮರಣ, ಅಲ್ಲಿ ಪರಿಸಮಾಪ್ತಿ!

**ಗೋಪಾಲ:**—ನಾನು ಹಾಗೆನ್ನಲಾರೆ. ಇನ್ನೊಂದು ಜನ್ಮವಿದೆ ಎಂದು ನಾನು ನಂಬುತ್ತೇನೆ. ಅತಿ ಅಲ್ಪ ಅಣುವಿನಿಂದ ಮನುಷ್ಯನ ವರೆಗೆ ಅಲ್ಲಿಂದ ಮುಂದೆಯೂ ಉತ್ಕ್ರಾಂತಿಯ ಪಥವಿದೆ. ನಮಗೆ ಮಾತ್ರ ಅದು ಕಾಣಿಸುವುದಿಲ್ಲ. ನಮ್ಮ ಚರ್ಮದೃಷ್ಟಿಯು ಸಂಕೋಚವಾಗಿದೆ. ಮಹಾಪುರುಷರು ತಮ್ಮ ಜ್ಞಾನದೃಷ್ಟಿಯಿಂದ ಅದನ್ನು ಕಂಡುಹಿಡಿದಿದ್ದಾರೆ, ನಮಗೆ ಸ್ಪಷ್ಟವಾಗುವ ರೀತಿಯಲ್ಲಿ ಹೇಳಿದ್ದಾರೆ, ನಾವು ಮಾತ್ರ ಅದನ್ನು ನಂಬುವುದಿಲ್ಲ. ನಮಗೆ ಪ್ರತ್ಯಕ್ಷ ಕಂಡದ್ದೆ ಪ್ರಮಾಣ. ಇದನ್ನೆ ನನ್ನ ಕಾದಂಬರಿಯಲ್ಲಿ ಚಿತ್ರಿಸಬೇಕೆಂದಿರುವೆನು. ಓಹೊ! ನಿಮ್ಮ ಮನೆ ಸಮಿಾಪಿಸಿದೆವು. ಈಗ ನಾನು ಹೋಗಿ ಬರಲೆ?

**ಸೇಟಜೀ:**—ಛೆ! ಛೆ! ನಮ್ಮ ಮನೆಯೊಳಗೆ ಬನ್ನಿ. ನಮ್ಮ ರಾಧಾಬಾಯಿಯು ನಿಮಗೆ ಒಂದಿಷ್ಟು ಬಿಸಿ ಹಾಲನ್ನು ಕೊಡುವಳು. ಅವಳು ಆಮಂತ್ರಿಸುವಳೇ ಎಂಬ ಸಂದೇಹ ಬೇಡ. ನನ್ನ ಗೆಳೆಯರೆಂದರೆ ಅವಳಿಗೂ ಮಿತ್ರರು.

**ಗೋಪಾಲ:**—ಹಾಗೆಯೇ ಆಗಲಿ. ನಾನು ರಾಧಾಬಾಯಿಯನ್ನು ಒಮ್ಮೆ ದೂರದಿಂದ ಕಂಡಿದ್ದೆ. ಅವಳೆಂದರೆ ಈ ಹಳ್ಳಿಯವರಿಗೆ ತುಂಬಾ ಅಭಿಮಾನವಿದೆ.

**ಸೇಟಜೀ:**—'ಆ ಮಾತನ್ನು ಕೇಳಲು ನನಗೆ ತುಂಬಾ ಸಂತೋಷವಿದೆ. ಅವಳಲ್ಲಿ ಗುಣದಂತೆ ರೂಪಲಾವಣ್ಯಗಳೂ ಇವೆ. ಆದರೆ ಅದು ಅವಳ ಸ್ವಗೌರವಕ್ಕೆ ಹಾನಿ ತರಲಿಲ್ಲ. ಅವಳ ಪರಿಚಯ ನಿಮಗೆ ಮಾಡಿಸುವೆನು.'

ಎಂದು ಹೇಳುತ್ತ ಇಬ್ಬರೂ ಹಿತ್ತಿಲ ಬಾಗಿಲನ್ನು ತಳ್ಳಿ, ಮೊಗಸಾಲೆ ಮೆಟ್ಟಲನ್ನು ಹತ್ತಿ ಬಂದರು.

---

## ೧೩ನೆ ಅಧ್ಯಾಯ

## ಗೋಪಾಲನ ಮನೋಗತ

ಸೇಟಜೀಯು ಬರಲು ತಡವಾದ್ದರಿಂದ ಮೊಗಸಾಲೆಗೂ ಒಳಗೂ ಹೋಗುತ್ತ ಹಿತ್ತಿಲ ಬಾಗಿಲನ್ನು ತೆರೆದ ಶಬ್ದವನ್ನು ಕೇಳಿ 'ತಾತಾ! ಬಂದು ಬಿಟ್ಟೆಯಾ! ಈ ಶೀತಗಾಳಿಯಲ್ಲಿ ವಾಯುಸೇವನೆಯು ಬಾಧಕವಾದೀತು ಎಂದು ಹೇಳಿದ್ದೆನಲ್ಲ!' ಎಂದು ಹೇಳುವಷ್ಟರಲ್ಲಿ ರಾಧೆಯು ಮುದುಕ ನೊಂದಿಗೆ ಇನ್ನೊಂದು ಅಪರಿಚಿತ ವ್ಯಕ್ತಿಯು ಬರುವುದನ್ನು ಕಂಡು ಮಾತು ಗಳನ್ನು ಅಲ್ಲಿಯೆ ನಿಲ್ಲಿಸಿಬಿಟ್ಟು ಚಕಿತೆಯಾಗಿ ನೋಡುತ್ತ ನಿಂತಳು.

ಗೋಪಾಲನೂ ಅವಳ ಸೌಂದರ್ಯವನ್ನು ನೋಡುತ್ತ ಚಕಿತನಾಗಿ ದ್ದನು. ಅಷ್ಟರಲ್ಲಿ ಸೇಟಜೀಯು 'ಇವಳೇ ನಮ್ಮ ರಾಧಾಬಾಯಿ! ಮಗು, ರಾಧಾ! ಈತನೊಬ್ಬ ಹೊಸ ಪರಿಚಿತನು. ಮುಂಬಯಿಯಲ್ಲಿದ್ದವನು. ಇವನ ಹೆಸರು ಗೋಪಾಲ. ಮುದುಕನಾದ ನನಗೆ ಕೈಗೋಲಿನಂತೆ ಆಧರಿಸಿ ಇಲ್ಲಿ ವರೆಗೆ ಮುಟ್ಟಿಸಿದನು. ಇವನಿಗೆ ಒಳಕ್ಕೆ ಬರಲು ಹೇಳಿದ್ದೇನೆ. ಒಂದಿಷ್ಟು ಕಾಸಿದ ಹಾಲನ್ನು ಒಂದು ಲೋಟಾದಲ್ಲಿ ತಂದುಕೊಡು' ಎಂದು ಹೇಳುತ್ತ ಅವಳ ಮತ್ತು ಅವನ ಕಡೆಗೆ ಓರೆಕಣ್ಣಿನಿಂದ ನೋಡುತ್ತ ಅವನ ಕೈಹಿಡಿದು ಒಳಕ್ಕೆ ಕರಕೊಂಡು ಬಂದನು.

ರಾಧೆಯು ಒಳಕ್ಕೆ ಹೋಗಿ ಒಂದು ಜಮಖಾನೆಯನ್ನು ಮೊಗ ಸಾಲೆಯ ಕಿಟ್ಟಿಯ ಮೇಲೆ ಹಾಸಿದಳು. ಮುದುಕನಿಗೆ ಒರಗಲಿಕ್ಕೆ ಒಂದು ಲೋಡನ್ನು ಇಟ್ಟಳು. ಅಡಿಗೆ ಮನೆಗೆ ಹೋಗಿ ಎರಡು ಲೋಟಾಗಳಲ್ಲಿ ಕಾಸಿದ ಹಾಲನ್ನು ತಂದಿಟ್ಟು ಹೆಬ್ಬಾಗಿಲಿಗೆ ಮೈ ಒರಗಿಸಿ ನಿಂತಳು. ಅಷ್ಟ ರಲ್ಲಿ ನಾಯಿಯು ಅವಳ ಬಳಿಗೆ ಓಡಿ ಬಂದು ಹಾರುತ್ತಾ ಚಿಕ್ಕ ಸ್ವರದಿಂದ ಬೊಗಳುತ್ತ ತಿಂಡಿಕೊಡೆನ್ನುವಂತೆ ಅಭಿನಯಿಸಿತು. 'ಸುಮ್ಮನಿರು! ರಾಜಣ್ಣ! ಸುಮ್ಮನಿರು! ಅತಿಥಿಗಳು ಮನೆಗೆ ಬಂದಾಗ ನಾಚಿಕೆಗೇಡಿಯಾಗ ಬೇಡ' ಎಂದು ಅದರ ತಲೆಯನ್ನು ಸವರುತ್ತ ನಿಂತಳು. ಅದು ಅಲ್ಲಿಂದ ಗೋಪಾ ಲನ ಬಳಿಗೆ ಬಂದು ಆತನ ಕಾಲುಕೈಗಳನ್ನು ಮೂಸಿ ಅವನ ಪರಿಚಯ

ಮಾಡಲಿಕ್ಕೆ ಯತ್ನಿಸಿತು. ಗೋಪಾಲನೂ ಅದನ್ನು ತಬ್ಬಿ ಅದಕ್ಕೆ ಮಮತೆ ತೋರಿಸಿದನು. ಅವನ ಬಳಿಗೆ ಹಾರಿ ಜಮಖಾನೆಯ ಬಳಿ ಅದು ಕುಳಿತು ಕೊಂಡಿತು. ಅನಂತರ ರಾಧೆಯು 'ನಮ್ಮ ತಾತನು ನಿಮಗೆ ಕಡಲು ದಂಡೆ ಯಲ್ಲಿ ಸಿಕ್ಕಿದರೆ? ಅವರು ಸಾಯಂಕಾಲದ ಹೊತ್ತಿಗೆ ಅಲ್ಲೆ ವಾಯು ಸೇವನೆಗೆಂದು ಹೋಗುತ್ತಾರೆ. ಅಲ್ಲಿ ಕಡಲತೆರೆಗಳಲ್ಲಿ ಕೊಪ್ಪರಿಗೆ ತೇಲಿ ಬರುತ್ತದೆಂದು ಅವರು ಕಾಯುತ್ತಾರೊ ಏನೊ, ಅಲ್ಲವೇ ತಾತಾ!' ಎಂದು ಹೇಳಿ ಅವನ ಕೈಗಳನ್ನು ಸವರುತ್ತ ಹೇಳಿದಳು.

**ಗೋಪಾಲ:**—'ಕಡಲು ದಂಡೆಯಲ್ಲಿ ಕೊಪ್ಪರಿಗೆ ತೇಲಿ ಬರುವ್ರು ದುಂಟೇ, ತಾತಾ! ಎಂದಿಗೂ ಇಲ್ಲ. ಹಾಳುಕಥೆ! ಅದು ಶುದ್ಧ ಭ್ರಮೆ!

**ಸೇಟಜೀ:**—(ನಸುನಗುತ್ತ)-ಕೋಟ್ಯಾವಧಿ ದ್ರವ್ಯ ಸಂಗ್ರಹಮಾಡ ಲಿಕ್ಕೆ ಬಹಳ ಕಾಲ ಬೇಕಾಗುತ್ತದೆ. ಕೋಟ್ಯಾಧೀಶರು ಹಾಗೆ ಸುಲಭವಾಗಿ ತಂಡತಂಡವಾಗಿ ಕಣ್ಣಿಗೆ ಬೀಳುವುದಿಲ್ಲ. ಎಲ್ಲಾದರೂ ಅಪರೂಪವಾಗಿ ಸಿಗುತ್ತಾರೆ.

**ಗೋಪಾಲ:**—ಕೋಟ್ಯಾಧೀಶರ ಮಾತೆತ್ತ ಬೇಡಿ, ತಾತಾ! ಅವರ ಮಾತು ಬಂದರೆ ನನಗೆ ಮೈ ಉರಿಯುತ್ತೆ.

**ಸೇಟಜೀ:**—ಯಾರ ಮೇಲೆಯೂ ಉರಿದು ಬೀಳಬಾರದು. ಕೋಟ್ಯಾಧೀಶರು ಕೊಪ್ಪರಿಗೆ ಮೇಲೆ ಕುಳಿತ ಸರ್ಪದಂತೆ ಅದನ್ನು ಕಾಯು ವುದು, ಉಸ್ಸ್ ಎಂದು ಶ್ವಾಸಬಿಡುವುದು, ಅಷ್ಟೆ ಅವರ ಕಾರ್ಯಕ್ರಮ. ಆ ದ್ರವ್ಯದಿಂದ ಅವರಿಗೇನೂ ಸುಖವಿಲ್ಲ. ಬಲ್ಲಿರಾ! ಅವರ ಮನೋವ್ಯಥೆ ಅವರೇ ಬಲ್ಲರು.

**ಗೋಪಾಲ:**—ಅವರಿಗೆ ಮನಸ್ಸಿಗೆ ಸುಖವಿಲ್ಲದಿರುವುದು ಅವರ ದುಷ್ಕರ್ಮದ ಫಲವೆನ್ನಬೇಕು. ಇಲ್ಲವಾದರೆ ಲೋಕದಲ್ಲಿ ನಾಲ್ಕೈದು ಮಂದಿ ಮಾತ್ರ ಕುಭೇರಪುತ್ರರಾಗಿ ಅನಾಚಾರದಿಂದ ಸರ್ವಸಂಪತ್ತಿನ ಅಧಿಕಾರವನ್ನು ಕಿತ್ತು ತಮ್ಮ ಕೈಗೆ ಸೇರಿಸಿಕೊಂಡು, ಲೋಕದ ಮೇಲೆ ತಮ್ಮ ಸತ್ತೆಯನ್ನು ಬಲಪಡಿಸುವುದು ಯಾವ ನ್ಯಾಯ? ಇತರರನ್ನು ಸುಲಿಯು

ವುದಕ್ಕಾಗಿ ಈ ಮುಟ್ಠಾಳರು ಯುಕ್ತಿನಡಿಸುವುದು ನನಗೆ ಒಗ್ಗುವುದಿಲ್ಲ. ನನಗೆ ದ್ರವ್ಯದಾಶೆ ಇಲ್ಲವೆಂದಿಲ್ಲ. ತಕ್ಕಮಟ್ಟಿಗೆ ತನ್ನ ಸೌಕರ್ಯಗಳನ್ನು ಒದಗಿಸಿಕೊಳ್ಳುವುದಕ್ಕೆ ಹಣ ಬೇಕು. ಆದರೆ ಅಮಿತ ಧನವಿದ್ದರೇನು? ಇಲ್ಲದಿದ್ದರೇನು?

**ಸೇಟಜೀ:**—ತಕ್ಕಮುಟ್ಟಿನ ಸೌಕರ್ಯವೆಂಬುದು ಅವ್ಯಕ್ತ. ಕೆಲವರಿಗೆ ಎಷ್ಟಿದ್ದರೂ ಸಾಕೆನ್ನಿಸುವುದಿಲ್ಲ. 'ಇನ್ನು ಕೊಡೊ' ಎಂದು ಬೇಡುತ್ತಾರೆ.

**ಗೋಪಾಲ:**—ಹಾಗಲ್ಲ. ಇಗೊಳ್ಳಿ, ಇದೇ ಮನೆ! ಎಷ್ಟು ಚೊಕ್ಕಟ ವಾಗಿ ಆಯುಕಟ್ಟಾಗಿ ಇದೆ! ಇಂಥ ಮನೆಯಲ್ಲಿ ತೃಪ್ತಿಯಿಂದಿರುವುದಕ್ಕೆ ಎಷ್ಟು ಹಣ ಬೇಕಾದೀತು ಎನ್ನುತ್ತೀರಿ?

**ರಾಧೆ:**—ಈ ಬಡ ಗುಡಿಸಲನ್ನು ಬರಿದೆ ಕೊಂಡಾಡುವಿರಿ. ನಾವು ಬಡವರು, ತೀರಾ ಬಡವರು, ಸ್ವಾಮಿ!

**ಗೋಪಾಲ:**—ನನ್ನನ್ನು 'ಸ್ವಾಮಿ' ಎಂದು ಸಂಬೋಧಿಸಬೇಡಿರಿ. ನಾನೂ ಬಡವನೇ! ಬಡಪತ್ತಿನಲ್ಲಿ ಹುಟ್ಟಿ ಬೆಳೆದೆನು. ವಾರಾನ್ನದಿಂದ ಪರೀಕ್ಷೆ ಪಾಸುಮಾಡಿದವನು.

**ರಾಧೆ:**—ಆದರೆ ನೀವು ಸಭ್ಯರು, ಸುಶಿಕ್ಷಿತರು ಎಂದು ಕಾಣುತ್ತೀರಿ.

**ಗೋಪಾಲ:**—ಹೌದು ನಮ್ಮ ತಾತನಂತೆಯೇ! ಆದರೆ ನಾವಿಬ್ಬರೂ ಕೋಟ್ಯಾಧೀಶರಾಗಬೇಕೆಂದು ಕಳವಳಗೊಳ್ಳುವವರೂ ಅಲ್ಲ, ಅದಕ್ಕಾಗಿ ಪೇಚಾಡುವವರೂ ಅಲ್ಲ. ದೇವರು ಕೊಟ್ಟದರಲ್ಲಿಯೆ ತೃಪ್ತಿಹೊಂದುವ ವರು. ಅಲ್ಲವೇ ತಾತಾ!

**ಸೇಟಜೀ:**—ಬಹಳ ಮಟ್ಟಿಗೆ ನಿಜ ನಿಮ್ಮ ಮಾತು! ಈಗ ನಿಮ್ಮ ಸಂಪೂರ್ಣ ಪರಿಚಯವನ್ನು ನಮ್ಮ ರಾಧಾಬಾಯಿಗೆ ಮಾಡಿಸಿಕೊಡಿರಿ.

**ಗೋಪಾಲ:**—'ಅದೇನೂ ವಿಚಿತ್ರವಲ್ಲ, ಎರಡೇ ಮಾತುಗಳಲ್ಲಿ ಮುಗಿಯುತ್ತದೆ' ಎಂದು ತನ್ನ ಸಮಾಚಾರ ಹೇಳತೊಡಗಿ 'ನನ್ನಲ್ಲಿ ಮುಚ್ಚುಮರೆಯಿಲ್ಲ. ಗುಟ್ಟು ಅಡಗಿಸಿ ಉಪಯೋಗವೇನು, ಅಲ್ಲವೇ **ತಾತಾ!'** ಎಂದನು.

ಸೇಟಜಿಯು ತಲೆತಗ್ಗಿಸಿ ತನ್ನ ಮೋರೆಯ ಬೆವರನ್ನು ಉಜ್ಜುವವನಂತೆ ನಟಿಸಿ 'ಹೌದು ಹೌದು! ಮುಚ್ಚುಮರೆ ಯಾರಿಗೂ ಸಲ್ಲದು' ಎಂದನು.

**ಗೋಪಾಲ:**—'ತನ್ನ ನಿಜಸ್ಥಿತಿಯನ್ನು ಮರೆ ಮಾಜುವುದು ಅಧಮ ಕೆಲಸ. ಒಬ್ಬನು ಲಕ್ಷಾಧಿಪತಿಯಾಗಲಿ, ಭಿಕ್ಷಾಧಿಪತಿಯಾಗಲಿ, ಆಸ್ತಿಕ ನಾಗಲಿ, ನಾಸ್ತಿಕನಾಗಲಿ, ಸಜ್ಜನನಾಗಲಿ, ದುರ್ಜನನಾಗಲಿ, ಅವನ ಸ್ವಭಾವ-ನಡತೆಗಳನ್ನು ಮರೆಪಡಿಸುವುದು ಅನ್ಯಾಯ. ಲಕ್ಷಾಧಿಪತಿಯು ಭಿಕ್ಷುವಂತೆ ವರ್ತಿಸಿದರೆ ಅದು ಮರೆಮೋಸವಲ್ಲವೇ?' ಈ ಮಾತುಗಳು ಅವನ ಬಾಯಿಯಿಂದ ಹೊರಡುವಾಗ ಸೇಟಜಿಯು ಅವನನ್ನು ಎವೆಇಕ್ಕದೆ ಕಣ್ಣರಳಿಸಿ ನೋಡುತಿದ್ದನು. ಆ ಮೇಲೆ 'ಲಕ್ಷಾಧಿಪತಿಯು ದರಿದ್ರ ನಾರಾಯಣನ ಸೋಗನ್ನು ಹಾಕಿದ್ದು ಎಲ್ಲಾದರೂ ನೋಡಿದ್ದೀರಾ?' ಎಂದು ಸೇಟಜಿಯು ಕೇಳಿದನು. ಅದಕ್ಕೆ ಗೋಪಾಲನು 'ಇಲ್ಲ, ನಾನೆಲ್ಲಿಯೂ ನೋಡಿಲ್ಲ. ಅವರಿಗೆ ಗುಪ್ತವೇಶ ಧರಿಸುವುದಕ್ಕೆ ಅವಕಾಶವೇ ಇಲ್ಲ. ವರ್ತಮಾನಪತ್ರಿಕೆಗಳಲ್ಲಿ ಅವರ ಶ್ಲಾಘನೆ, ಅವರ ಚಿತ್ರಗಳು ಬಿಡದೆ ಪ್ರಕಟವಾಗುತ್ತಿರುವುದರಿಂದ ಅವರನ್ನು ಯಾರೂ ಘಕ್ಕನೆ ಗುರುತಿಸಬಹುದು. ಎಂಥ ಭಯಂಕರ ಚಿತ್ರಗಳು! ಪ್ರಕೃತಿಯು ಕೂಡಾ ಅವರಿಗೆ 'ನಿಮಗೆ ರೂಪಿಲ್ಲದಿದ್ದರೇನು ಧನವೇ ನಿಮಗೆ ರೂಪು' ಎಂದಂತೆ ಕಾಣುತ್ತದೆ. ನಾನೊಬ್ಬ ಕೋಟ್ಯಾಧೀಶನನ್ನು ಕಂಡಿದ್ದೆ. ಎಳೆ ಮಕ್ಕಳಿಗೆ ಗುಮ್ಮನೆಂದು ಅವನನ್ನು ತೋರಿಸಬಹುದು.'

**ಸೇಟಜೀ:**—ಯಾರದು? ಅವರ ಹೆಸರೇನು?

**ರಾಧೆ:**—ಅವನು ಈಗ ಇಲ್ಲಿಲ್ಲ. ವಿಲಾಯತಿಗೆ ಹೋಗಿದ್ದಾನೆ. ಅವನ ಹೆಸರನ್ನು ಈಗ ಬಹಿರಂಗಪಡಿಸಲಾರೆ.

ಅಷ್ಟರಲ್ಲಿ ನಾಯಿಯು ತನಗೂ ಹಾಲಿನ ಸೇವೆಯಾಗಬೇಕೆಂದು ರಾಧೆಯನ್ನು ಕಾಡಿತು. 'ಓಹೊ! ನಮ್ಮ ಮಾತುಗಳಲ್ಲಿ ನಿನ್ನನ್ನು ಮರೆತೆ' ಎಂದು ಒಳಕ್ಕೆ ಹೋಗಿ ಒಂದು ತಟ್ಟೆಯಲ್ಲಿ ಇಷ್ಟು ಹಾಲನ್ನು ತಂದಿಟ್ಟು ಹೊಸ್ತಿಲ ಬಳಿಯಲ್ಲಿ ಕುಳಿತು ರಾಧೆಯು ತಕ್ಲಿ ಕೆಲಸವನ್ನು ಕೈಕೊಂಡಳು.

**ಸೇಟಜೀ:**—ಎಂತಹ ಶುಭ್ರವಾದ ಬೆಳದಿಂಗಳು! ಈ ಶರತ್ಕಾಲದ ಬೆಳದಿಂಗಳಲ್ಲಿ ತಂಪು ಇದೆ. ಸುಖಗೋಷ್ಟಿಗೆ ಅನುಕೂಲ!

**ಗೋಪಾಲ:**—ಹೌದು! ನಮ್ಮ ತಂದೆ ಇರುವಾಗ ಇಂಥ ಬೆಳದಿಂಗಳಲ್ಲಿ ನನ್ನನ್ನು ತನ್ನ ತೊಡೆಗಳ ಮೇಲೆ ಏರಿಸಿ ಪುರಾಣಕಥೆಗಳನ್ನು ಅಂದವಾಗಿ ಹೇಳುತಿದ್ದನು. ಅವನ್ನು ಚಿಕ್ಕಮಕ್ಕಳಿಗೋಸ್ಕರ ಬರೆಯಬೇಕೆಂದು ತುಂಬಾ ಆಸೆಯಿದೆ.

**ರಾಧೆ:**—ಈಗ ಅದನ್ನೆ ಬರೆಯುತ್ತೀರಾ?

**ಗೋಪಾಲ:**—ಈಗ ಜೀವನದ ಚಿತ್ರವನ್ನೆ ಬರೆಯುತಿದ್ದೇನೆ. ಅದರಷ್ಟು ಒಳ್ಳೆ ಪುರಾಣಕಥೆ ಬೇರೆಯೊಂದಿಲ್ಲ.

**ರಾಧೆ:**—ಅದನ್ನೆ ಹೇಳಬಹುದಲ್ಲ! ನಾನೂ ತಾತನೂ ಚಿಕ್ಕ ಮಕ್ಕಳಂತೆ ಕಿವಿಗಳನ್ನು ನಿಗುರಿಸಿದ್ದೇವೆ. ಅಲ್ಲವೇ ತಾತಾ!

**ಗೋಪಾಲ:**—ನಿಮಗೆ ಊಟಕ್ಕೆ ವಿಳಂಬವಾಗುತ್ತದೇನೊ ನನ್ನ ಒಣಹರಟೆಗಳಿಂದ.

**ರಾಧೆ:**—ಛೆ! ಛೆ! ಹಾಗೆನ್ನಬೇಡಿರಿ. ನಾವು ರಾತ್ರೆಯಲ್ಲಿ ಊಟ ಮಾಡುವುದಿಲ್ಲ. ಬರೆ ಹಣ್ಣುಗಳನ್ನು ತಿಂದು ಹಾಲು ಕುಡಿದು ನಿದ್ದೆ ಹೋಗುತ್ತೇವೆ. ನಿಮ್ಮ ಕಥೆಯು ವಿಚಿತ್ರವಿದ್ದಿರಬೇಕು. ಅದನ್ನು ಕೇಳಲಿಕ್ಕೆ ಕುತೂಹಲವಿದೆ, ಅಲ್ಲವೇ ತಾತಾ!

ಸೇಟಜಿಯು ಅವಳ ಕಾತರಮುಖವನ್ನು ನೋಡಿ ನಸುನಗುತ್ತ ತಲೆದೂಗಿದನು. ಗೋಪಾಲನು 'ನನಗೂ ಈಗ ಕೆಲವು ದಿನಗಳಿಂದ ಒಂಟಿಯಾಗಿದ್ದು ತುಸು ಬೇಸರ ಹಿಡಿದಿದೆ. ಮನುಷ್ಯನು—ಅಷ್ಟೇಕೆ—ಪಶುಪ್ರಾಣಿಗಳು, ಹಕ್ಕಿಗಳು ಕೂಡಾ ತಮ್ಮ ಗುಂಪಿನಿಂದ ಬೇರೆಯಾದೊಡನೆ ಕೂಗಿ ಕರೆಯುತ್ತವೆ. ಹಗಲಲ್ಲಿ ಕಾಣಸಿಗದ ಗೂಬೆ ಕೂಡಾ ರಾತ್ರೆಯಲ್ಲಿ ಘೂಂಕರಿಸಿ ತನ್ನ ಗೆಳೆಯರನ್ನು ಕರೆಯುತ್ತದೆ.

**ರಾಧೆ:**—ಗೂಬೆ ಹಸಿವೆಯಿಂದ ಹಾಗೆ ಕೂಗುತ್ತದಲ್ಲವೆ?

**ಗೋಪಾಲ:**—ನಾನೂ ಹಾಗೆಯೇ ಹಸಿವೆಯಿಂದ ಕೂಗಿದ ಕಾಲ ಒಂದಿತ್ತು. ಆದರೆ ನನ್ನ ಅಭ್ಯಾಸಬಲದಿಂದ ಅದರ ತೀಕ್ಷ್ಣತೆಯನ್ನು ತಗ್ಗಿಸಿದೆನು. ಅದು ಸಾಧ್ಯವಾದುದು ನನ್ನ ಪೂರ್ವಪುಣ್ಯದ ಬಲದಿಂದ.

**ಸೇಟಜೀ:**—ಅದು ಪೂರ್ವಪುಣ್ಯದ ಬಲವೆನ್ನುತ್ತೀರಾ?

**ಗೋಪಾಲ:**—ಹೌದು! ನಾನು ಇಷ್ಟರವರೆಗೂ ಹೊಟ್ಟೆ ಉಬ್ಬರಿಸುವಂತೆ ತಿನ್ನುವ ರೋಗಕ್ಕೆ ಆಹುತಿಯಾಗಲಿಲ್ಲ. ಅದರಿಂದ ಡಾಕ್ಟರರ ಅಂಕೆಯಲ್ಲಿ ಬೀಳಲಿಲ್ಲ. ನನ್ನ ಜಠರಾಗ್ನಿಗೆ ತಿಂದದ್ದನ್ನು ಅರಗಿಸುವುದಕ್ಕೆ ಏನೂ ಕಷ್ಟವಾಗುತ್ತಿಲ್ಲ. ಆಹಾರ ಬೇಕು ಎನಿಸುತ್ತದಲ್ಲದೆ ಬೇಡವೆಂದು ಓಕರಿಸುವ ಅಡಚಣೆ ಬರಲಿಲ್ಲ. ಹೀಗಾಗಿ ರೋಗರುಜಿನಗಳಿಲ್ಲದೆ ಉಕ್ಕಿನ ಗಟ್ಟಿಯಂತೆ ಇದ್ದೇನೆ. ವ್ಯಾಯಾಮಬಲದಿಂದ ಮಾಂಸಖಂಡಗಳು ಮಾತ್ರ ಬಲಿತುಕೊಂಡಿವೆ.

**ಸೇಟಜೀ:**—ನೀವು ವಿಚಿತ್ರಮೂರ್ತಿಯೆನ್ನಬೇಕು!

**ಗೋಪಾಲ:**—ನಮ್ಮ ಜಾತಿಯವರೆಲ್ಲ ಹೀಗೆಯೇ. ಗುರ್ಜರ ಮತ್ತು ಮಾರವಾಡಿಗಳಂತೆ ನಮ್ಮಲ್ಲಿ ಬೊಜ್ಜು ಬೆಳೆಯುವುದೇ ಇಲ್ಲ. ನಾವು ಮಿತಾಹಾರಿಗಳು, ಕಾಯಕಷ್ಟ ಮಾಡುವವರು. 'ಬ್ರಾಹ್ಮಣೋ ಭೋಜನ ಪ್ರಿಯಃ' ಎಂಬ ಮಾತು ನಮ್ಮವರಿಗೋಸ್ಕರ ಮಾಡಿದ್ದಲ್ಲ. ಹೀಗಾಗಿ ನಾವು ದೀರ್ಘಕಾಲ ಬಾಳುತ್ತೇವೆ. ನನ್ನ ಬರಿ ಹತ್ತು ವರ್ಷ ಪ್ರಾಯದಿಂದಲೆ ನಾನು ಕಾಯಕಷ್ಟ ಮಾಡುತಿದ್ದೆ. ನನ್ನ ಬಾಲ್ಯದಲ್ಲಿಯೆ—ಆ ಮಹಾಸಾಧ್ವಿಮಣಿಯಾದ ನಮ್ಮ ತಾಯಿಯು ಸ್ವರ್ಗವಾಸಿಯಾದೊಡನೆ—ನನ್ನ ಹಳ್ಳಿ ವಿದ್ಯಾಭ್ಯಾಸದೊಂದಿಗೆ ನಮ್ಮ ತಂದೆಗೆ ಅಡಿಗೆಯಲ್ಲಿ ಸಹಾಯ ಮಾಡುವುದು, ಕಟ್ಟಿಗೆ ಒಡೆಯುವುದು ಇತ್ಯಾದಿ ಕೆಲಸಗಳು ನನ್ನ ಪಾಲಿಗೆ ಬಂದಿದ್ದುವು. ಅದಲ್ಲದೆ ಪೌರೋಹಿತ್ಯದಲ್ಲಿ ನಮ್ಮ ತಂದೆಗೆ ಸಿಕ್ಕಿದ ಅಕ್ಕಿ, ತೆಂಗಿನಕಾಯಿ, ದಾನದ ವಸ್ತುಗಳನ್ನೆಲ್ಲ ನಾನೇ ಹೊತ್ತುಕೊಂಡು ತರಬೇಕಾಗಿತ್ತು. ಹೀಗೆ ಕಷ್ಟದಿಂದ ನನ್ನ ಜೀವನವನ್ನು ಸಾಗಿಸುವಾಗ ನಮ್ಮ ತಂದೆಯೂ ಬಿದ್ದುಹೋದರು. ಆ ಮೇಲೆ ನಾನು ಪೂನೆಗೆ ಬಂದು ವಾರಾನ್ನದಿಂದಲೇ ಎಮ್. ಎ. ವರೆಗೆ ಕಲಿತೆನು. ಬೀದಿ ದೀಪಗಳ ಬೆಳ

ಕೆಗೆ ಪಾರ ಓದುತಿದ್ದೆನು. ಸೂರ್ಯನ ಬೆಳಕನ್ನು ಒಂದಿಷ್ಟಾದರೂ ನಷ್ಟ ಮಾಡದೆ ಪಾಠಪ್ರವಚನಗಳನ್ನು ಮುಗಿಸುತಿದ್ದರೂ ವಿವಿಧ ಆಟಗಳಲ್ಲಿ— ಹಣ ಖರ್ಚಿಲ್ಲದ ಆಟಗಳಲ್ಲಿ—ನಾನು ಜಾಣನಾಗಿದ್ದೆ. ನನ್ನ 'ಪ್ರೊಫೆಸರರಿಗೆ' ನನ್ನ ಮೇಲೆ ತುಂಬಾ ಪ್ರೀತಿ. ಆಗಿನಿಂದಲೂ ನನ್ನಲ್ಲಿ ದೇವರು ವಿಚಿತ್ರವಾದೊಂದು ಶಕ್ತಿಯನ್ನೂ ಕೊಟ್ಟಿದ್ದಾನೆ, 'ನಾನು ಬರೀ ಗಂಟಿ ಕಾಯುವ ಹುಡುಗನಾಗಲಾರೆ' ಎಂದು ನನಗೆ ಮನಸ್ಸಿನಲ್ಲಿ ಹೊಳೆಯುತಿತ್ತು. ಇದು ನನ್ನ ಹೆಮ್ಮೆಯು ಮಾತಿರಬಹುದು. ಆಗಿನಿಂದಲೂ ಒಬ್ಬನು ನನಗೆ ಒಂದು ದವಡೆ ಮೇಲೆ ಹೊಡೆದರೆ ಆತನ ಎರಡು ದವಡೆಗಳನ್ನು ಮುರಿದು ಬಡ್ಡಿ ಸಮೇತ ಸಾಲ ಸಲ್ಲಿಸುವೆನು ಎಂಬಂತೆ ನನ್ನ ಮತ. ಮೋಸ, ವಂಚನೆ, ಇಬ್ಬಾಯಿ, ಪಿಸುಣ ಇವುಗಳಿಗೆಲ್ಲ ನನ್ನ ತಿರಸ್ಕಾರವಿತ್ತು. ಇದೇ ನನ್ನ ದುರದೃಷ್ಟ!—

**ಸೇಟಜೀ:**—ಏಕೆ ದುರದೃಷ್ಟವೆನ್ನುತ್ತೀರಿ?

**ಗೋಪಾಲ:**—ದುರದೃಷ್ಟವಲ್ಲವೆ ಮತ್ತೆ! ನಿಮಗೆ ಲೋಕಾನುಭವವೇ ಇಲ್ಲವೆಂದು ಕಾಣುತ್ತದೆ. ಲೋಕದಲ್ಲಿ ನಾವು ಸುಖವಾಗಿ ಉಂಡುತಿಂದು ಬಾಳಬೇಕಾದರೆ ಸಮಾಜದಲ್ಲಿ ದುರುಳರಾದವರೂ ದುರ್ವರ್ತನೆಯುವರೂ ಆದ ಕೋಟ್ಯಾಧೀಶರ ಹೊಟ್ಟೆಯೊಳಗೆ ಹೊಕ್ಕು ಅವರ ಗುಟ್ಟನ್ನೆಲ್ಲ ಅರಿದು ಅವರು ಸಂಪೂರ್ಣ ನಮ್ಮ ಅಧೀನರಾಗುವವರೆಗೆ—ನಮ್ಮ ಕೈವರ್ತಿಗಳಾಗುವ ವರೆಗೆ ಅವರು ಅಂದದಕ್ಕೆ ತಲೆ ಅಲ್ಲಾಡಿಸಬೇಕು, ಅವರ ತಾಳಕ್ಕೆ ಕುಣಿಯಬೇಕು. ಆ ಮೇಲೆ ಸೊಂಟಕ್ಕೆ ಕಟ್ಟಿದ ಹಗ್ಗವನ್ನು ಕೈಯಲ್ಲಿ ಹಿಡಿದು ಮಂಗಗಳನ್ನು ಕುಣಿಸಿದಂತೆ ಅವರನ್ನು ಕುಣಿಸಬಹುದು. ಯಾಕೆಂದರೆ ಅವರ ಗುಟ್ಟನ್ನೆಲ್ಲ ಬಯಲಿಗೆ ತರುವೆನೆಂದು ಅವರು ಹೆದರುತ್ತಾರೆ.

**ರಾಧೆ:**—ಅವರು ಅಂಥ ಅಧಮರೆಂದು ನಾನು ಒಪ್ಪಲಾರೆ.

**ಗೋಪಾಲ:**—ನೀವು ಒಪ್ಪದಿದ್ದರೂ ಬಾಧಕವಿಲ್ಲ. ಯಾಕೆಂದರೆ ಅವರು ನಿಮ್ಮ ಕಣ್ಣೆದುರಿಗೆ ಬೀಳರು. ಈಗ ನನ್ನ ಮುಂದೆಯೂ ಸುಳಿಯಲಾರರು. ನಾನು ಅವರ ನಿವಾಸಸ್ಥಳಗಳನ್ನು ಬಿಟ್ಟು ದೂರವಿದ್ದೇನೆ.

ಕಳೆದ ವರ್ಷ ನಾನು ಒಬ್ಬಿಬ್ಬರು ಕೋಟ್ಯಾಧೀಶರನ್ನು ನನ್ನ ಅಂಗೈಯೊಳಗೆ ತಂದಿದ್ದೆ. ಕಡೆಗೆ ಅವರ ಗುಲಾಮತನದಿಂದ ನನ್ನ ಸುಖಾಕಾಂಕ್ಷೆಯನ್ನು ಪೂರೈಸಲು ಉದ್ಯುಕ್ತನಾದುದಕ್ಕೆ ನನಗೇ ವ್ಯಸನವಾಯಿತು. ಅವರ ಸಂಸರ್ಗವನ್ನು ಕಡಿದು ಬಿಟ್ಟು ನನ್ನ ನೌಕೆಯನ್ನು ಹಾಯಿಬಿಟ್ಟು ಲಂಗರು ಎತ್ತಿ ದೂರಕ್ಕೆ ನಡೆಸಿದೆ.

**ರಾಧೆ:**—ಎಲ್ಲಿ! ದಡದಿಂದ ದೂಡಿಬಿಟ್ಟು ಅಗಾಧವಾದ ಕಡಲಿಗೋ?

**ಗೋಪಾಲ:**—ಹೌದು, ಅಗಾಧವಾದ ಕಡಲಿಗೆ! ಮೊದಮೊದಲು ಕಡಲಿನ ತುಫಾನು ನನ್ನ ಶಕ್ತಿಗೆ ಮೀರಿದ್ದಾಗಿ ಕಂಡಿತು. ನನ್ನ ನೌಕೆಯು ತುಮುರುತುಮುರಾಗಿ ಒಡದುಹೋಗುವುದೊ ಎಂದು ಸಂದೇಹವುಂಟಾಯಿತು. ಆದರೆ ಈ ಅಲೆಗಳ ಮೇಲೆ ತೇಲುವಾಗ ಆಗುವ ಆಂದೋಲನವು ಅಭ್ಯಾಸಬಲದಿಂದ ಒಂದು ಬಗೆಯ ಸಂತೋಷವನ್ನೆ ಉಂಟುಮಾಡಿತು. ಈ ನನ್ನ ಜೀವನದ ಒಣಹರಟೆಗಳಲ್ಲಿ ನಿಮಗೆ ಬೇಸರಬರುವುದಾದರೆ ಇಲ್ಲಿಗೆ ನಿಲ್ಲಿಸುವೆನು.

**ರಾಧೆ:**—ಇಲ್ಲ ಇಲ್ಲ! ನಿಮ್ಮ ಚಿಕ್ಕ ನೌಕೆಯು ಈ ಸಂಸಾರಸಾಗರದಲ್ಲಿ ಪಟ್ಟ ಕಷ್ಟಸಂಕಷ್ಟಗಳನ್ನು ಕೇಳಲು ನಮಗೆ ತುಂಬಾ ಕಾಂಕ್ಷೆಯಿದೆ. ನೀವು ಬಲು ಧೀರರಂತೆ ಕಾಣುತ್ತದೆ.

**ಗೋಪಾಲ:**-ಹಾಗೆಂದೂ ಅಭಿಪ್ರಾಯ ಮಾಡಬೇಡಿ. ಒಂದೊಂದು ಸಲ ನಾನು ಬಲು ಭೀರುವಾಗಿದ್ದೇನೆ.

**ರಾಧೆ:**—ಅಂಥ ಸಂದರ್ಭಗಳಾವುವು?

**ಗೋಪಾಲ:**—ನಗಬೇಡಿರಿ. ಸ್ತ್ರೀಯರ ವಿಷಯದಲ್ಲಿ ನಾನು ಭೀರು.

**ಸೇಟಜೀ:**—ಚೋದ್ಯವೆಂದರೆ ಅದೀಗ! ಬಲು ಚೋದ್ಯ.

**ಗೋಪಾಲ:**—ಹೆಂಗಸರ ಎದುರಿನಲ್ಲಿ ನಾನು ಲಜ್ಜಾನ್ವಿತನೆಂದಲ್ಲ! ನನ್ನ ಮನಸ್ಸಿನಲ್ಲಿ ಸ್ತ್ರೀಯನ್ನು ಕುರಿತು 'ಹೀಗೆ ಹೀಗೆ ಇರಬೇಕು' ಎಂದು ಒಂದು ಚಿತ್ರವನ್ನು ಮಾಡಿಕೊಂಡಿದ್ದೇನೆ. ಆ ಧ್ಯೇಯಕ್ಕೆ ನಾನು ಕಾಣುವ

ಸ್ತ್ರೀಯರು ಸಮಾಪಿಸುವರೊ ಇಲ್ಲವೊ, ಅಂಥ ಸ್ತ್ರೀಯರ ಧ್ಯೇಯಕ್ಕೆ ನಾನು ಸಮಾಪಿಸುವೆನೊ ಇಲ್ಲವೊ ಎಂಬದು ನನ್ನ ಸಂದೇಹ. ಇಲ್ಲಿ ಇದು ಆತ್ಮಶ್ಲಾಘನೆಯ ಮಾತಾಗುತ್ತದೆ. ಸ್ವಾಭಿಮಾನವೇ ಇತರರ ಮೇಲಣ ಭಯಕ್ಕೆ ಕಾರಣವು. ನಾನೊಮ್ಮೆ ದೊಡ್ಡ ಧ್ಯೇಯವನ್ನು ಅವಲಂಬಿಸಿ ಕಾಲು ಜಾರಿ ಬಿದ್ದಿದ್ದೇನೆ.

**ರಾಧೆ:**—ಧ್ಯೇಯವನ್ನು ಅವಲಂಬಿಸಿ ಕಾಲು ಜಾರಿದಿರಾ!

**ಗೋಪಾಲ:**—ಅದು ಹೇಗೆಂದು ಮತ್ತೆ ಹೇಳುವೆ. ನಾನು ಎಮ್. ಎ. ಪಾಸು ಮಾಡಿದೊಡನೆ ನನ್ನ ಪ್ರೊಫೆಸರರ ಶಿಫಾರಸು ಪತ್ರದ ಆಧಾರದಿಂದ ಮುಂಬಯಿಯ ಒಂದು ಪತ್ರಿಕೆಯ ಆಫೀಸಿನಲ್ಲಿ ಉಪಸಂಪಾದಕನ ಕೆಲಸವು ದೊರೆಯಿತು. ಅಲ್ಲಿ ಸಮಾಜಸ್ಥಂಬಗಳಾಗಿರುವ ಸ್ತ್ರೀಪುರುಷರ ಚಲನವಲನಗಳನ್ನು ವರ್ಣಿಸಿ ಬರೆಯುವುದು ನನ್ನ ಉದ್ಯೋಗವಾಗಿತ್ತು. ಆ ಕಾಲದಲ್ಲಿ ನಾನು ಆಗಾಗ ಪೂನಾಪಟ್ಟಣಕ್ಕೂ ಹೋಗುವ ಸಂದರ್ಭವಿತ್ತು. ಆಗ ಡೆಕ್ಕಾನ ಕೊಲೆಜಿನಲ್ಲಿ ಕಲಿಯುತಿದ್ದ ಒಬ್ಬ ತರುಣಿಯ ಪರಿಚಯ ನನಗಾಯಿತು. ಈ ಪರಿಚಯವು ನನ್ನಲ್ಲಿ ಪ್ರಣಯದ ಬೀಜಗಳನ್ನು ಬಿತ್ತಿತು. ಅವಳಿಗೂ ನನ್ನ ಮೇಲೆ ಪ್ರಣಯವು ಬೆಳೆಯುತ್ತಿದೆ ಎಂದು ನಾನು ನಂಬಿದೆನು. 'ಪಾರ್ಕಿ'ನಲ್ಲಿ ಆಗಾಗ ನಾವು ಒಬ್ಬರನ್ನೊಬ್ಬರು ಭೇಟಿಯಾಗುತಿದ್ದೆವು. ಒಂದು ದಿನ ಅವಳನ್ನು ನಾನು ಪ್ರೀತಿಸುತ್ತೇನೆಂದು ಬಾಯಿಬಿಟ್ಟು ಹೇಳಿದೆನು. ಅವಳು ನಕ್ಕಳು. 'ನನಗೆ ಪ್ರಣಯದಲ್ಲಿ ವಿಶ್ವಾಸವೇ ಇಲ್ಲ' ಎಂದು ಹೇಳಿದಳು. 'ಹಾಗಾದರೆ ನಿನ್ನ ವಿಶ್ವಾಸವು ಯಾವುದರಲ್ಲಿ?' ಎಂದೆ. 'ಧನಿಕನೊಬ್ಬನನ್ನು ಮದಿವೆಯಾಗಿ ಕೈಬೀಸಿ ಹಣ ವೆಚ್ಚಮಾಡುವುದರಲ್ಲಿ' ಎಂದಳು. 'ಹಾಗಾದರೆ ವಿಮಲೆ, ನಾನು ಈಗ ಬಡವನು. ಮುಂದೆ ಶ್ರೀಮಂತನಾಗಲೂ ಬಹುದು. ಪ್ರಖ್ಯಾತನಾಗಲೂ ಬಹುದು. ಆ ವರೆಗೆ ಕಾಯಲು ನೀನು ಇಷ್ಟಪಡುವುದಿಲ್ಲವೇ?' 'ಛೆ! ಅಂಥ ಕನಸಿನ ಗಂಟನ್ನು ಕಾಯುವುದೆಂದರೆ 'ಬೂರುಗದ ಮರ ಗಿಣಿ ಕಾದ ಹಾಗೆ.' ಅಷ್ಟು ತಾಳ್ಮೆ ನನ್ನಲ್ಲಿಲ್ಲ. ರಜಾದಿನಗಳಲ್ಲಿ ಮುಂಬಯಿಗೆ ಬರಬೇಕು, ನನಗೊಬ್ಬ ಕೋಟ್ಯಾಧೀಶನನ್ನು ವರನಾಗಿ ಆಯ್ದಿದ್ದಾರೆಂದು ನನ್ನ ತಾಯಿಯ ಕಾಗದ ಬಂದಿದೆ.

**ಸೇಟಜೀ:—** ನಿನ್ನ ಪ್ರಣಯಕ್ಕೆ ಪಾತ್ರಳಾದವಳು ವಿಮಲೆ ಎಂದೆಯಾ? ಅವಳನ್ನು ಮದುವೆಯಾಗುವ ಕೋಟ್ಯಾಧೀಶನು ಯಾರು?

ಈ ಪ್ರಶ್ನೆಯನ್ನು ಸೇಟಜಿಯು ಕೇಳುವಾಗ ಚಂದ್ರಪ್ರಕಾಶವು ಮೂವರ ಮೋರೆಗಳ ಮೇಲೆಯೂ ಬೀಳುತಿತ್ತು. ಆಗ ಚಕಿತಳಾಗಿ ಕಣ್ಣರಳಿಸಿ ಕಥೆ ಕೇಳುತಿದ್ದ ಮೋರೆ ರಾಧೆಯದು, ತನ್ನ ಹಳೆ ನಿರಾಶೆಯನ್ನು ವರ್ಣಿಸುವ ತವಕದಲ್ಲಿ ರಕ್ತಛಾಯೆಯು ಆವರಿಸಿ ಕೆಂಪಗಾಗಿ ಕಾಣುತಿದ್ದ ಮೋರೆಯು ಗೋಪಾಲನದು, ಆಶ್ಚರ್ಯವಾಗಲಿ ದುಃಖವಾಗಲಿ ತೋರಿಸದೆ ಶಾಂತ ಮತ್ತು ಗಂಭೀರ ಭಾವದಿಂದ ಇರುವ ಮೋರೆ ಸೇಟಜಿಯದು. ಅವನಿಗೆ ಆ ಕನ್ನಿಕೆ ಯಾರೆಂದು ಸಂದೇಹ ಬಂದಿದ್ದರೂ ಈ ನೂತನ ಸಮಾಚಾರದಲ್ಲಿ ವಿಮಲೆಯ ಗುಣಕಥನವನ್ನು ಕೇಳುವಾಗ ಅವನ ಅಂತರ್ಯದಲ್ಲಿ ಹುಟ್ಟಿದ ಭಾವನೆಗಳನ್ನು ಹೊರಗೆ ತೋರ್ಪಡಿಸಲಿಲ್ಲ. ಗೋಪಾಲನು ಮುಂದರಿಸಿದನು:—

'ಆಗ ಆ ವಿಮಲೆ ಹೀಗೆ ಹೇಳಿದಳು:—'ನನ್ನ ತಂದೆಯು ನನ್ನ ಬಾಲ್ಯದಲ್ಲಿಯೆ ತನ್ನ ಸರ್ವಸ್ವವನ್ನು ದುಂದುವೆಚ್ಚದಿಂದ ಕಳಕೊಂಡು ಮಡಿದು ಹೋದನು. ನನ್ನ ತಾಯಿಯನ್ನೂ ನನ್ನನ್ನೂ ಒಬ್ಬ ಸೇಟಜಿಯು ತಮ್ಮ ಮನೆಯಲ್ಲಿ ತಂದಿರಿಸಿ ಸಾಕುತ್ತಾನೆ. ಆತನೇ ನನ್ನ ವಿದ್ಯೆಯ ಖರ್ಚನ್ನೆಲ್ಲ ನೋಡಿಕೊಳ್ಳುತ್ತಾನೆ. ಈ ರಜೆಯಲ್ಲಿ ಆತನಿಗೆ ಕೊಟ್ಟು ನನಗೆ ವಿವಾಹವಂತೆ. ಅವನು ಕೋಟ್ಯಾಧೀಶನು, ಗಿರಣಿಯ ಮ್ಹಾಲಿಕನು. ಆತನಿಗೇ ನಾನು ಬಲೆ ಬೀಸಿದ್ದೆ. ಆತನೇ ನನ್ನ ಕೈಸೇರುವಾಗ ನಿನಗೆ ಯಾವಾಗಲೊ ಪ್ರಖ್ಯಾತಿ ಬಂದೀತು ಎಂದು ಕಾಯುವುದು ಮೂರ್ಖತನವಲ್ಲವೇ! ಪ್ರಖ್ಯಾತಿ ಬಂದರೆ ಹಣಬರುತ್ತದೆಯೇ? ಪ್ರಸಿದ್ಧ ಪುರುಷರು ಯಾವಾಗಲೂ ಬಡವರಲ್ಲವೇ?' ಎಂದಳು.

'ಆಗ 'ಅಂಥ ನರೆತ ಕೂದಲಿನ, ಕಡ್ಡಿಯಂತೆ ಒಣಗಿದ ಜಬ್ಬನನ್ನು ಕೈಹಿಡಿಯುವುದು ನ್ಯಾಯವೇ! ಆತನಿಗೆ ನಿನ್ನ ಅಜ್ಜನ ಪ್ರಾಯವಾದೀತಲ್ಲ!' ಎಂದೆ. ಅದಕ್ಕೆ ಅವಳು 'ಹಣ ಕಂಡರೆ ಹೆಣ ಬಾಯಿ ಬಿಡುತ್ತದಂತೆ! ಅವನ ಬೊಕ್ಕಸವ ಬೀಗದ ಕೈ ನನ್ನ ಮಡಿಲಲ್ಲಿ ಜಾರಿಬೀಳುವಾಗ ಅದನ್ನು ಎತ್ತಿಕೊಳ್ಳದೆ ಪಿಕಿಮಿಕಿ ನೋಡಬೇಕೆ?' ಎಂದಳು.'

**ಸೇಟಜೀ:**—ಆ ಕೋಟ್ಯಾಧೀಶನು ನರೆತ ಕೂದಲಿನ, ಕಡ್ಡಿಯಂತೆ ಒಣಗಿದ ಜಬ್ಬನು ಎಂದು ಹೇಗೆ ತಿಳಿದಿರಿ?

**ಗೋಪಾಲ:**—ಅವನು ಹಾಗೇ ಇದ್ದಿರಬೇಕು ಅಲ್ಲವೆ?

**ಸೇಟಜೀ:**—ಉಪಾಯದಿಂದ ಬೀಸಿದ ಬಲೆಯಲ್ಲಿ ಅವನು ಬಿದ್ದನು ಎನ್ನುವಾಗ ನಿಮಗೆ ಅವನ ಮೇಲೆ ಕನಿಕರಹುಟ್ಟುವುದಿಲ್ಲವೇ?

**ಗೋಪಾಲ:**—ಸರ್ವಥಾ ಇಲ್ಲ. ಅಷ್ಟು ದ್ರವ್ಯಸಂಗ್ರಹ ಮಾಡುವ ಸಾಮರ್ಥ್ಯವಿದ್ದವನಿಗೆ ಆ ಬಲೆಯನ್ನು ಕಡಿದು ತಪ್ಪಿಸಿಕೊಳ್ಳಲು ಸಾಧ್ಯವಿದ್ದಿಲ್ಲವೆ? ಚಟ್ಟದ ಮೇಲೆ ಮಲಗಲಿಕ್ಕೆ ತಯಾರಾದವನಿಗೆ ವಿವಾಹವಾದರೆ ಅವಳು ಬೇಗನೆ ಮುಂಡೆಯಾಗುವಳಲ್ಲವೇ?

**ಸೇಟಜೀ:**—ಹೌದು. ಆದರೆ ಆ ಕನ್ನಿಕೆ ಲಗ್ನಮಾಡಿಕೊಳ್ಳುವುದು ಅವನನ್ನಲ್ಲ, ಅವನ ಧನವನ್ನು. ಹಾಗೆ ಧನ ಅವಳ ಕೈಸೇರುವಾಗ ಅವಳ ಮೇಲೆ ಕನಿಕರವೇಕೆ?

**ಗೋಪಾಲ:**—ನೀವೇನೂ ಹೇಳಿ. ಆ ಮುದುಕನ ಅತ್ಯಾಶೆಗೆ ಹದವಿಲ್ಲವಾದರೆ ಅವನು ಧೂರ್ತನೇ ಸರಿ.

**ಸೇಟಜೀ:**—'ಕೊನೆಗೆ ಆ ಮದುವೆಯಾಯಿತೆ?' ಈ ಪ್ರಶ್ನೆಯಿಂದ ಗೋಪಾಲನಲ್ಲಿ ಒಂದು ಬಗೆಯ ಅಕಲವಿಕಲವುಂಟಾಯಿತು. ಸ್ವಲ್ಪ ಸಮಯ ಯೋಚಿಸಿ:—

**ಗೋಪಾಲ:**—ಇಲ್ಲ ಇಲ್ಲ. ಆ ವಿವಾಹ ಜರಗಿದ್ದರೆ ಒಂದು ವಾರದ ವರೆಗೆ ದೈನಿಕ ಪತ್ರಗಳಲ್ಲಿ ಅದರ ವಿಶಿಷ್ಟ ವರ್ಣನೆಯೇ ಬರುತಿತ್ತು. ಅದು ಆಗಲಿಲ್ಲ. ಆತನು ವಿಲಾಯತಿಗೊ ಎಲ್ಲಿಗೊ ಗುಪ್ತವಾಗಿ ಹೋಗಿರುವನಂತೆ, ತನ್ನ ಜರ್ಝರವಾದ ದೇಹವನ್ನು ಬಲಪಡಿಸಿ ಬರುವುದಕ್ಕೊ ಏನೊ?

**ಸೇಟಜೀ:**—ಹಾಗಾದರೆ ನಿಮಗೆ ಅವನ ಹೆಸರು ಗೊತ್ತಿರಬೇಕು.

**ಗೋಪಾಲ:**—ಹೌದು ಹೌದು! ಅವನ ಹೆಸರು ಕೇಳದವರು ಬಹಳ ಕಡಿಮೆ. ಜಗಜೀವನದಾಸ ಸೇಟ್. ಅವನಿಗೆ ಗಿರಣಿಗಳ ರಾಜನೆಂದೂ ಕರೆಯುತ್ತಾರೆ. ನಿಮ್ಮ ಹೆಸರು ಜೀವನದಾಸ; ಅವನು ಜಗ

ಜೀವನದಾಸ; ನಿಮ್ಮೊಳಗೆ ಅಷ್ಟೆ ಭೇದ. ಆ ಜಗಜೀವನದಾಸನಿಗಿಂತ ನಮಗೆ ಈ ಸಾಮಾನ್ಯ ಜೀವನದಾಸನ ಪರಿಚಯುವೇ ಸಾಕು.

**ಸೇಟಜೀ:**—(ನಸುನಗುತ್ತ) ಹಾಗಾದರೆ ಆ ಮುದಿ ಜಬ್ಬನನ್ನು ನೀವು ಕಣ್ಣಾರೆ ಕಂಡಿಲ್ಲ!

**ಗೋಪಾಲ:**—ಈಗ ಕಾಣುವ ತವಕವೂ ಇಲ್ಲ. ಒಮ್ಮೆ ನನ್ನ ಕೀರ್ತಿ ಬೆಳಕಿಗೆ ಬರಲಿ—ಬೆಳಕಿಗೆ ಬರುವುದು ಖಂಡಿತ—ಆ ಮೇಲೆ ಆ ದಂಪತಿಗಳ ಭೇಟಿ ಮಾಡಲಿರುವೆನು.

**ಸೇಟಜೀ:**—ಅದರಿಂದ ಆ ವಿಮಲೆಯ ಮನಸ್ಸು—ನೀವು ಅವಳ ವರ್ಣನೆಯನ್ನು ಸರಿಯಾಗಿ ಕೊಟ್ಟಿರುವುದಾದರೆ—ಸ್ವಲ್ಪವೂ ಕದಡಲಾರದು. ಅವಳಲ್ಲಿ ನಿಮ್ಮ ಮೇಲೆ ಗೌರವ ಹುಟ್ಟಬೇಕಾದರೆ ಅವಳ ಗಂಡನ ಇಮ್ಮಡಿ ಅಥವಾ ಮುಮ್ಮಡಿ ಐಶ್ವರ್ಯ ನಿಮ್ಮ ಕೈಸೇರಬೇಕು. ಈ ಸಮಾಜಸ್ತಂಬಗಳಾದವರ ಸ್ಥಿತಿಗತಿಯನ್ನು ನಮ್ಮಂಥ ಬಡವರು ಬರೇ ಪತ್ರಿಕೆಗಳನ್ನು ಓದಿಯೇ ಗೊತ್ತುಹಚ್ಚಬೇಕಲ್ಲವೇ?

**ಗೋಪಾಲ:**—ಹೌದು ಹೌದು! ಹೀಗಾಗಿ ಅನೇಕ ಸಲ ಈ ಬಡ ಜನರು ಪತ್ರಿಕೆಗಳಲ್ಲಿಯ ವರ್ಣನೆಯನ್ನು ನಂಬಿ ಮೋಸಹೋಗುತ್ತಾರೆ. ಅದಕ್ಕಾಗಿಯೇ ಅವರ ಮೇಲೆ ನನಗೆ ಕನಿಕರ ಹುಟ್ಟುತ್ತದೆ.

**ಸೇಟಜೀ:**—ವಿಚಾರಶೀಲರು ಬಡವರಾದರೂ ಹಾಗೆ ಮೋಸ ಹೋಗುವುದಿಲ್ಲ. ಪತ್ರಿಕೆಗಳಲ್ಲಿಯ ವರ್ಣನೆಯನ್ನು ತೀರಾ ನಂಬುವುದಿಲ್ಲ. ಈಗ ನೀವೆ ಹೇಳಿದ ಕನ್ನಿಕೆಯ—

**ಗೋಪಾಲ:**—ಹೌದು ಹೌದು! ಅವಳು ಡಂಭಾಚಾರದ ಸಂತೆಯಲ್ಲಿ ಮಾರಾಟಕ್ಕೆ ಇಟ್ಟ ಗೊಂಬೆಯೆಂದು ನನಗೆ ಮೊದಲು ತಿಳಿಯಲಿಲ್ಲ.

**ಸೇಟಜೀ:**—ಅಂಥವಳನ್ನು ಕೈಹಿಡಿಯದೇ ಇದ್ದುದು ನಿಮ್ಮ ಪೂರ್ವ ಪುಣ್ಯವೆನ್ನಿ. ಇಲ್ಲವಾದರೆ ನೀವು ಜನ್ಮಾಂತ್ಯದ ವರೆಗೆ ದುಃಖಕ್ಕೆ ಒಳಗಾಗಬೇಕಿತ್ತಲ್ಲ!

**ಗೋಪಾಲ:**—ಅದು ಸರಿ! ದೊಡ್ಡ ಧ್ಯೇಯವನ್ನು ಕಟ್ಟಿಕೊಂಡಿರುವ ನನಗೆ ಕೊರಳಿಗೆ ಅವಳು ಒಂದು ದಿಡ್ಡಾಗುವ ಬದಲಾಗಿ ಈಗ ನನ್ನ ಅಬಾಧಿತ ಸ್ವಾತಂತ್ರ್ಯವೇ ನನಗೆ ದೊಡ್ಡದು, ಅದು ಪ್ರೇಮಕ್ಕಿಂತಲೂ ದೊಡ್ಡದು.

**ಸೇಟಜೀ:**—'ಛೆ! ಛೆ! ಹಾಗೆನ್ನಬೇಡಿ. ಪ್ರೇಮಕ್ಕಿಂತಲೂ ದೊಡ್ಡದು ಯಾವುದೂ ಇಲ್ಲ.' ಎಂದು ರಾಧೆಯ ಕಡೆಗೆ ಆರ್ತದೃಷ್ಟಿಯಿಂದ ನೋಡಿದನು. ಅವನ ಮನಸ್ಸಿನ ವ್ಯಥೆಯು ಅವಳಿಗೆ ಗೊತ್ತಾಯಿತು. ಅವನ ಲೋಡನ್ನು ಸರಿಪಡಿಸುವ ನೆವದಿಂದ ಅವನ ಸಮೀಪಕ್ಕೆ ಬಂದು ಬೆನ್ನು ಭುಜಗಳನ್ನು ಸವರುತ್ತ 'ತಾತಾ! ನೀನು ಪ್ರೇಮಾಕಾಂಕ್ಷಿಯಾಗಿದ್ದಂತೆ ಕಾಣುತ್ತದೆ. ಚಿಕ್ಕ ಮಗುವನ್ನು ಮುದ್ದಾಡಿಸಿದಂತೆ ನಿನ್ನನ್ನು ಮುದ್ದಾಡಿಸುವವರಿಲ್ಲವೆಂದು ಕೊರಗುತ್ತಿ!'

**ಗೋಪಾಲ:**—ನನ್ನ ಆರೈಕೆ ಯಾರೂ ನೋಡಿದ್ದೂ ಇಲ್ಲ, ನನ್ನನ್ನು ತಾಯಿ ಮಡಿದನಂತರ ಮುದ್ದಾಡಿಸಿದವರೂ ಇಲ್ಲ.

**ಸೇಟಜೀ:**—ನಿಮಗೊಂದು ಅನುಕೂಲಳಾದ ಹೆಂಡತಿ ಇದ್ದಿದ್ದರೆ—

**ಗೋಪಾಲ:**—ಹೆಂಡತಿ ಇದ್ದವರ ವೈಭವವನ್ನು ನಾನು ಮುಂಬಯಿಯಲ್ಲಿಯೂ ಪೂನೆಯಲ್ಲಿಯೂ ಧಾರಾಳವಾಗಿ ನೋಡಿದ್ದೇನೆ. ಅದನ್ನು ಸ್ಮರಣೆಮಾಡಿದಾಗ ನನಗೆ ವಿವಾಹದ ಕೋಟಲೆಯೇ ಬೇಡ ಅನಿಸುತ್ತದೆ.

**ರಾಧೆ:**—ನನ್ನ ಮತವೂ ಅದೇ. ನನಗೆ ನನ್ನ 12 ವರ್ಷ ಪ್ರಾಯದಲ್ಲಿ ವಿವಾಹದ ನಿಶ್ಚಯವಾಗಿತ್ತು. ಆದರೆ ಹುಡುಗನು ಮದುವೆ ನಿಶ್ಚಯದ ಒಂದೇ ತಿಂಗಳೊಳಗೆ ಕಾಲವಾದನು. ನನ್ನ ಜಾತಕದ ಗ್ರಹಗಳು ಅತಿ ಕಠಿಣವೆಂದು ಆ ಮೇಲೆ ಯಾರೂ ಒಪ್ಪಲಿಲ್ಲ. ಅಂದಿನಿಂದ ನಮ್ಮ ತಂದೆಯು ನನ್ನ ವಿವಾಹದ ಆಸೆಯನ್ನೆ ತೊರೆದುಬಿಟ್ಟನು. ಆದ್ದರಿಂದ ನಾವು ಹುಟ್ಟಿದ ಊರನ್ನು ಬಿಟ್ಟು ಇಲ್ಲಿಗೆ ಬಂದು ವಾಸಮಾಡತೊಡಗಿದೆವು. ಈಗ ನಿಮ್ಮ ಜೀವನದ ಕಥೆ ಮುಗಿಯಿತೇ?

**ಗೋಪಾಲ:**—ಇನ್ನು ಹೆಚ್ಚೇನೂ ಇಲ್ಲ. ಮುಂಬಯಿಯಲ್ಲಿ ದೊಡ್ಡ ಸಾವುಕಾರನ ಸ್ವಾರ್ಥವರ್ತನವನ್ನು ನಾನು ಪತ್ರಿಕೆಯಲ್ಲಿ ಟೀಕಿಸಿದೆನು. ಅಲ್ಲಿಂದ 'ಹೋಗು' ಎಂದರು. ಆ ಸಾವುಕಾರನು ಪತ್ರಿಕೆಯ ಪಾಲುದಾರ

ರಲ್ಲಿ ಒಬ್ಬನಿದ್ದನಂತೆ. ಅವನ ಟೀಕೆ ಮಾಡಿದ್ದಕ್ಕಾಗಿ ನನಗೆ ಕೆಲಸ ತಪ್ಪಿದ ಸಜಾ. ಅಲ್ಲಿಂದ ಹೊರಟು ಈ ಹಳ್ಳಿಗೆ ಬಂದು ಇಂದಿಗೆ ಎಂಟು ದಿನ ಗಳಾದವು. ಇಲ್ಲಿಗೆ ನನ್ನ ಕಥೆ ಮುಗಿಯಿತು. ಇನ್ನು ನಾನು ಬಿಡಾರಕ್ಕೆ ಹೋಗಬೇಕು. ತಾತಾಜಿಯವರಿಗೆ ನಿದ್ದೆ ಬಂತೆಂದು ಕಾಣುತ್ತದೆ.

**ಸೇಟಜೀ:**—ಇಲ್ಲ ಇಲ್ಲ, ನಾನು ನಿಮ್ಮ ಮಾತುಗಳನ್ನು ಮನಸ್ಸಿ ನಲ್ಲಿಯೇ ಮಥಿಸುತಿದ್ದೆನು. ಕೇಳುತ್ತ ಕೇಳುತ್ತ ನಿಮ್ಮ ಮೇಲೆ ಒಂದು ಬಗೆಯ ಅಭಿಮಾನ ನನ್ನಲ್ಲಿ ಉಂಟಾಗಿದೆ. ನೀವು ವಿರಾಮವಿದ್ದಾಗ ಇಲ್ಲಿ ಬರುವಿರಾ!

**ಗೋಪಾಲ:**—(ರಾಧೆಯ ಕಡೆಗೆ ನೋಡಿ)—ನಾನು ಬರಬಹುದೇ?

**ರಾಧೆ:**—ನೀವು ಖಂಡಿತವಾಗಿಯೂ ಬರಬಹುದು ನಿಮಗೆ ಬೇಸರಿಕೆ ಬಂದಾಗ.

**ಗೋಪಾಲ:**—ನಿಮ್ಮ ಮಾತಿನಲ್ಲಿ ನನಗೆ ವಿಶ್ವಾಸವಿದೆ.

**ರಾಧೆ:**-ವಿಶ್ವಾಸ ಖಂಡಿತವಾಗಿಯೂ ಮಾಡಬಹುದು. ಯಾಕಂದರೆ ನನ್ನ ಮನೆ ವರ್ತಮಾನಪತ್ರಿಕೆಯ ಸಂಪಾದಕರ ಗೂಡಲ್ಲ.

ಗೋಪಾಲನು ಸೇಟಜಿಗೂ, ರಾಧೆಗೂ ನಮಸ್ಕರಿಸಿ ಹೊರಟು ಹೋದನು.

**ರಾಧೆ:**—'ತಾತಾ! ಕರೆಗಾಳಿ ಬೀಸತೊಡಗಿದೆ. ನಿನ್ನ ಜ್ವರ ಬಿಟ್ಟ ದೇಹಕ್ಕೆ ಅದರ ಶೀತವು ತಗಲುವುದು ಒಳ್ಳೇಯದಲ್ಲ. ನಿನ್ನ ಕೋಣೆಯನ್ನು ಸೇರು.' ಸೇಟಜಿಯು ತುಸು ಹೊತ್ತು ಮಾತನಾಡಲೇ ಇಲ್ಲ. ಆ ಮೇಲೆ 'ಮಗೂ! ಈ ಗೋಪಾಲನೊಬ್ಬ ವಿಚಿತ್ರ ವ್ಯಕ್ತಿಯಲ್ಲವೇ?'

**ರಾಧೆ:**—ನನಗೂ ಹಾಗೆ ಕಂಡಿತು. ಅವನ ಭಾವನೆಗಳೆಲ್ಲ ವಿಚಿತ್ರ ವಾಗಿವೆ. ಆದರೂ ಈ ಚಳಿಗಾಲದಲ್ಲಿ ನಿನಗೆ ಹೊರಗೆ ಸಂಚಾರಕ್ಕೆ ಹೋಗಲು ಸಾಧ್ಯವಿಲ್ಲದಾಗ ಆತನು ಇಲ್ಲಿಗೆ ಬಂದರೆ ನಿನಗೆ ಅವನ ಮಾತು ಕಥೆಗಳಿಂದ ಹೊತ್ತುಹೋಗಬಹುದಲ್ಲ!

**ಸೇಟಜೀ:**—ಆ ಯುವಕನು ತನ್ನ ನಿಜಸ್ಥಿತಿಯನ್ನು ಮರೆಮಾಜದೆ ಹೇಳಿದನು. ನಾನು ಯಾರು, ಎಲ್ಲಿಂದ ಬಂದೆ ಎಂದು ನೀನೂ ಇದು ವರೆಗೆ ಕೇಳಲೂ ಇಲ್ಲ, ನಾನು ಹೇಳಲೂ ಇಲ್ಲವಲ್ಲ!

**ರಾಧೆ:**—ಅನಗತ್ಯವಾದ ಪ್ರಶ್ನೆಗಳನ್ನು ಕೇಳುವ ಅಭ್ಯಾಸ ನನ್ನಲ್ಲಿಲ್ಲ.

**ಸೇಟಜೀ:**—ಮಗೂ! ನಾನು ನಿನ್ನ ತಂದೆಯ ಗೆಳೆಯನಲ್ಲವೆಂದು ನಿನಗೇ ಗೊತ್ತು. ನಿನ್ನ ತಂದೆಯನ್ನು ನಾನು ಎಂದೂ ಕಂಡವನಲ್ಲವಲ್ಲ!

**ರಾಧೆ:**—ಅದು ಹೇಗೂ ಇರಲಿ. ನನ್ನ ತಂದೆ ಸತ್ತು ಹೋದ ಮೇಲೆ ನಾನೊಬ್ಬಳೆ ಮನೆಯಲ್ಲಿ ಇದ್ದೆ. ಒಂಟಿಯಾಗಿದ್ದು ನನಗೆ ಸ್ವಲ್ಪ ಬೇಸರು ಹಿಡಿದಿತ್ತು. ಆ ಕಾಲಕ್ಕೆ ಸರಿಯಾಗಿ ನೀನು ಬಂದೆ. ನಮ್ಮಪ್ಪನಷ್ಟೆ ಪ್ರಾಯ ನಿನಗಾಗಬಹುದು. ನಿನ್ನ ಅನುಪಾನ ನೋಡಿದ ಕಿಂಚಿತ್ತು ಸೇವೆಗಾಗಿ ನೀನು ತುಂಬಾ ಆಭಾರಿಯಾಗಿರುವೆ. ನನಗೂ ನನ್ನಪ್ಪನ ಮೇಲಿರುವಷ್ಟೆ ಪ್ರೇಮವು ನಿನ್ನ ಮೇಲಿದೆ. ಇದು ಋಣಾನುಬಂಧದ ಪ್ರಭಾವ.

**ಸೇಟಜೀ:**—ಅದಕ್ಕಾಗಿ ದೇವರೊಡನೆ ನಿನಗೆ ಸುಖಶಾಂತಿಗಳು ದೊರೆಯಲೆಂದು ಸಾರ್ವದಾ ಬೇಡುತಿದ್ದೇನೆ. ಆಗಲಿ. ಹೇಗೂ ಆಗಾಗ ನೀನು ಗೋಪಾಲನನ್ನು ಉಪಹಾರಕ್ಕೂ ಕರೆಯಬಹುದಲ್ಲ!

**ರಾಧೆ:**—ನಾನು, ಅಲ್ಲ, ನಾವು ಎಂದು ಹೇಳು. ನೀನೂ ಈಗ ಚರ್ಕದಿಂದ ನೂತು ದುಡಿಯುತ್ತಿಯಲ್ಲ! ಮೊದಲು ಒಬ್ಬಳಿಂದಲೇ ನಡೆಯುವ ಗೃಹಕೃತ್ಯವು ಈಗ ಇಬ್ಬರ ದುಡಿತದಿಂದ ಸಾಗುತ್ತದಲ್ಲ!

**ಸೇಟಜೀ:**—ಅಯ್ಯೊ! ನಿನಗೆ ಸಲಬೇಕಾದುದರಲ್ಲಿ ಹತ್ತರಲ್ಲಿ ಒಂದು ಪಾಲು—ನೂರರಲ್ಲಿ ಒಂದು ಪಾಲು ನಾನಿನ್ನು ತೆರಲಿಲ್ಲ.

**ರಾಧೆ:**—'ನೀನು ಆರೋಗ್ಯವಾಗಿದ್ದರೆ-ನಿನ್ನ ಆಯುಸ್ಸು ಹೆಚ್ಚಿದರೆ-ನೀನು ದುಡಿದದ್ದೆಲ್ಲ ನಾನೇ ನುಂಗುವೆ. ಅದರ ಯೋಚನೆ ಬೇಡ' ಎಂದು ನಗುತ್ತ ಅವನನ್ನು ಕೈಹಿಡಿದು ಆತನ ಕೋಣೆಯಲ್ಲಿ ಬಿಟ್ಟಳು. ಮುದುಕನು ತನ್ನ ಹಾಸಿಗೆಯ ಮೇಲೆ ಹೊರಳುತ್ತ 'ನನ್ನ ದುಡಿತವನ್ನೆಲ್ಲ ನುಂಗುವೆಯಾ? ನಿನ್ನ ನಿಷ್ಕಾಮಪ್ರೇಮದ ಬಲದಿಂದ ಖಂಡಿತವಾಗಿಯೂ ನನ್ನ ಸರ್ವಸ್ವದ ಅಧಿಕಾರಿಯಾಗುವೆ. ದೇವರು ಮಾತ್ರ ನಿನ್ನ ನಿಷ್ಕಲಂಕಬುದ್ಧಿಯನ್ನು ಇನ್ನಷ್ಟು ಬಲಗೊಳಿಸಲಿ' ಎಂದು ದೇವರನ್ನು ಸ್ಮರಿಸುತ್ತ ನಿದ್ದೆಹೋದನು.

---

## ೧೪ನೆ ಅಧ್ಯಾಯ

## ರಾಧೆ-ಗೋಪಾಲರ ಪ್ರಣಯಪೀಠಿಕೆ

ಸೇಟಜಿ, ರಾಧೆ ಮತ್ತು ಗೋಪಾಲ ಇವರೊಳಗಿನ ಸ್ನೇಹವು ದಿನೇದಿನೇ ವೃದ್ಧಿಯಾಗುತ್ತ ಬಂತು. ಗೋಪಾಲ ಒಂದು ದಿನ ಬಾರದಿದ್ದರೆ ಇಬ್ಬರೂ ಚಡಪಡಿಸುತ್ತಿದ್ದರು. ಅವನು ಬರಲಿಕ್ಕೆ ತಡವಾದರೂ ರಾಧೆಯು ತೋಟದ ಬಾಗಿಲಿನ ಬಳಿಯಲ್ಲಿ ಆತನ ಆಗಮನವನ್ನು ಕಾಯುತ್ತ ನಿಲ್ಲುತ್ತಿದ್ದಳು. ಅವರು ಮೂವರೂ ಒಟ್ಟು ಸೇರಿದಾಗ ಲೋಕದ ಸ್ಥಿತಿ, ಜನಗಳ ಗುಣ ಸ್ವಭಾವಗಳು ಇವುಗಳದೇ ಚರ್ಚೆ, ಟೀಕೆ. ಅನೇಕ ಸಲ ಅವಳು ತುಕಾರಾಮ, ಕಬೀರದಾಸರ ಅಭಂಗಗಳನ್ನು ಚೆಲೊ ಕಂಠದಿಂದ ಹಾಡಿ ವಿಚಿತ್ರ ರೀತಿಯಿಂದ ಈ ಶ್ರಾವಕರನ್ನು ಮುಗ್ಧಗೊಳಿಸುತ್ತಿದ್ದಳು. ಒಂದೊಂದು ಸಲ ನಾಯಿಯು ಮುದುಕನ ಬಳಿಯಲ್ಲಿ ಬಿದ್ದುಕೊಂಡು ಅವನಿಗೆ ಪ್ರೀತಿ ತೋರಿಸುತ್ತ ಆಟವಾಡುತ್ತಿರುವಾಗ ಗೋಪಾಲನು ತಾನು ಬರೆಯುವ ಗ್ರಂಥದ ಮುಖ್ಯ ಮುಖ್ಯ ಅಂಶಗಳನ್ನು ರಾಧೆಗೆ ಓದಿ ಹೇಳುತ್ತಿದ್ದನು. ಅವಳು ತನ್ನ ಹೊಲಿಗೆಯ ಕೆಲಸ ಮಾಡುತ್ತಿರುವಾಗ ಆ ಗ್ರಂಥಭಾಗಗಳನ್ನು ತಟಸ್ಥಳಾಗಿ ಕೇಳುತ್ತಿದ್ದಳು.

**ಗೋಪಾಲ:**—ರಾಧಮ್ಮ! ನೀವು ಕೇಳಿದ ಭಾಗಗಳಲ್ಲಿ ಅಶ್ರಾವ್ಯ, ಅಶ್ಲೀಲ ಭಾಗಗಳಿದ್ದರೆ ನಿರ್ದಾಕ್ಷಿಣ್ಯದಿಂದ ಹೇಳಬೇಕು. ಎಲ್ಲಿ ನಿಮಗೆ ಬೇಸರಹುಟ್ಟುತ್ತದೆ ಆ ಭಾಗಗಳನ್ನು ತೋರಿಸಬೇಕು.

**ರಾಧಮ್ಮ:**—ಆ ಕಠಿಣ ಕೆಲಸವನ್ನು ನನ್ನ ಮೇಲೆ ಏಕೆ ವಹಿಸುತ್ತೀರಿ? ನಾನೇನೂ ವಿದ್ಯಾವಂತಳಲ್ಲ, ಸುಶಿಕ್ಷಿತಳಲ್ಲ. ದೊಡ್ಡ ಗ್ರಂಥಗಳನ್ನು ಓದಲೂ ಇಲ್ಲ.

**ಗೋಪಾಲ:**—ಹಾಗಾದರೆ ನಿಮ್ಮ ಟೀಕೆ ನನಗೆ ಅಮೌಲ್ಯವಾಗಿದೆ. ಒಂದನೆದಾಗಿ ನೀವು ನನ್ನ ಬಂಧುಬಾಂಧವರಲ್ಲಿ ಒಬ್ಬರಲ್ಲ. ಪಕ್ಷಪಾತ ದೃಷ್ಟಿಯಿಂದ ನನ್ನ ಲೇಖನಸಾಮರ್ಥ್ಯವನ್ನು ತೂಕಮಾಡಲಾರಿರಿ. ಎರಡನೆದಾಗಿ ನೀವು ನನ್ನ ವಿರೋಧಿಯೂ ಅಲ್ಲ. ಆದ್ದರಿಂದ ನಿಷ್ಕಾರಣ ವಾಗಿ ಹೊಟ್ಟೆಕಿಚ್ಚಿನಿಂದ ಟೀಕೆಮಾಡುವ ಆವಶ್ಯಕತೆಯೂ ನಿಮಗಿಲ್ಲ.

ವಿದ್ವತ್ತೆ, ಪಾಂಡಿತ್ಯಗಳ ಆತ್ಮಪ್ರತಿಷ್ಠೆಯೂ ನಿಮ್ಮಲ್ಲಿಲ್ಲ. ಸಾಮಾನ್ಯವಾಗಿ ಇಲ್ಲಿ ಗ್ರಂಥದ ಟೀಕೆಗಳಲ್ಲಿ ಈ ಮೂರು ವಿಧಗಳಿವೆ. ಅವುಗಳಲ್ಲಿ ಒಂದೂ ಕೂಡಾ ನಿಜವಾದ ಟೀಕೆಯಲ್ಲ. ತನ್ನ ಮನಸ್ಸಾಕ್ಷಿಗೆ ಹಿತಕಂಡದ್ದನ್ನು ಹೊಗಳಿ ಅಹಿತವಾದುದನ್ನು ತೆಗಳಲಿಕ್ಕೆ ನಿಮಗೆ ಯಾವ ಬಗೆಯ ನಿರ್ಬಂಧವೂ ಇಲ್ಲ. ಆದ್ದರಿಂದ ನಿಮ್ಮ ಟೀಕೆಯ ಮೇಲೆ ನನಗೆ ಭರವಸೆ ಹೆಚ್ಚು.

ಹೀಗೆ ಕೆಲವು ದಿನಗಳು ಕಳೆದವು. ದೀಪಾವಳಿಯು ಬಂತು. ದೀಪಾವಳಿಯ ದಿನ ಸಾಯಂಕಾಲ ಎಲ್ಲರೂ ಧನಲಕ್ಷ್ಮಿಯ ಪೂಜೆ ಮಾಡುವ ಸಂಪ್ರದಾಯ. ಮನೆಯ ಮುಂದೆ ದೀಪಗಳನ್ನೂ ಗೂಡುದೀಪಗಳನ್ನೂ ಉರಿಸಿ ಅವುಗಳ ಮುಂದೆ ಪಟಾಕಿ ಜೇನುಂಡೆ ಗರ್ನಾಲುಗಳನ್ನು ಸುಡುವುದು ಮಕ್ಕಳಿಗೆ ತುಂಬಾ ಸಂತೋಷ. ಸಮೀಪದ ದೇವಸ್ಥಾನದಲ್ಲಿ ಸಾಯಂಕಾಲದ ಪೂಜೆ ನೋಡಲಿಕ್ಕೆಂದು ಒಂದು ಆರತಿಯನ್ನೂ ಫಲವಸ್ತುಗಳನ್ನೂ ಹಿಡಿದು ರಾಧೆಯು ಹೋಗಿದ್ದಳು. ಸೇಟಜಿಯು ಒಬ್ಬನೆ ತಕ್ಲಿ ತಿರುಗಿಸುತ್ತ ಮೊಗಸಾಲೆಯ ಚಿಟ್ಟೆಯ ಮೇಲೆ ಲೋಡಿಗೆ ಒರಗಿ ಕುಳಿತಿದ್ದನು.

**ಗೋಪಾಲ:**—ಜೀವನದಾಸರೇ! ಏನು ಒಬ್ಬರೇ ಕುಳಿತಿದ್ದೀರಿ? ರಾಧೆ ಇಲ್ಲವೇ?

**ಸೇಟಜೀ:**—ರಾಧೆ ದೇವಸ್ಥಾನದಲ್ಲಿ ಪೂಜೆ ನೋಡಲು ಹೋಗಿದ್ದಾಳೆ. 'ಚಳಿಗಾಲ ಪ್ರಾರಂಭಿಸಿದ್ದರಿಂದ ಹೊರಗೆ ಚಳಿಗಾಳಿಯಲ್ಲಿ ಸಂಚಾರಮಾಡಬೇಡ; ಇಬ್ಬನಿ ಬೀಳುತ್ತದೆ; ಶೀತವಾದೀತು' ಎಂದು ನನಗೆ ಎಚ್ಚರಿಸಿ ಹೋಗಿದ್ದಾಳೆ. ನನ್ನ ತಾಯಿ ಎಂದೊ ಸತ್ತುಹೋಗಿರುವುದರಿಂದ ಈ ವೃದ್ಧಾಪ್ಯದಲ್ಲಿ ನನಗೆ ಇವಳೇ ತಾಯಿ. ಅವಳ ಅಪ್ಪಣೆಯನ್ನು ಮೀರಲಾರೆ.

**ಗೋಪಾಲ:**—ನಾವು ದೇವಸ್ಥಾನಗಳಿಗೆ ಹೋಗುವುದೇ ಇಲ್ಲ. ಅವುಗಳಿಂದ ದೇವರು ಎಂದೊ ಓಡಿ ಹೋಗಿದ್ದಾನೆ. ಅಲ್ಲಿ ನಡೆಯುವ ದುಷ್ಟತನವನ್ನು ಕೇಳಿದರೆ ಅಲ್ಲಿ ದೇವರ ಸಾನ್ನಿಧ್ಯವು ಎಂದೊ ಹೋಗಿ ಬಿಟ್ಟಿದೆ, ದೇವಸ್ಥಾನವೆಂಬದು ದಾನವರ ಬೀಡಾಗಿದೆ.

**ಸೇಟಜೀ:**—ಛೆ! ಛೆ! ಹಾಗೆ ಎಲ್ಲ ದೇವಸ್ಥಾನಗಳ ವಿಷಯದಲ್ಲಿ ಹೇಳಲು ಬರುವುದಿಲ್ಲ. ಈಗ ಇಲ್ಲಿರುವ ಅರ್ಚಕನು ಸಂಭಾವಿತನಂತೆ, ಚೆನ್ನಾಗಿ ಓದಿದವನಂತೆ!

**ಗೋಪಾಲ:**—ಇರಬಹುದು, ಕಾಗೆಗಳ ಹಿಂಡಿನಲ್ಲಿ ಸೇರಿದ ಕೋಗಿಲೆ ಮರಿಯಂತೆ! ಉಳಿದವರೆಲ್ಲ ಕಾಗೆಗಳ ಹಿಂಡೇ! ಎಲ್ಲಿ ಯಾವುದರ ಹೆಣ ಬೀಳುತ್ತದೆ ಎಂದು ಹೊಂಚಿಕೊಂಡಿದ್ದು ಅದನ್ನು ಕಂಡೊಡನೆ 'ಕರ್‍ರ್ ಕಾ' ಎಂದು ಆ ಊರು ಈ ಊರಲ್ಲಿದ್ದ ತಮ್ಮ ಪಂಗಡನನ್ನು ಕೂಗಿ ಕರೆದು ನಿರ್ದಾಕ್ಷಿಣ್ಯದಿಂದ ಎಲುಬಿನಲ್ಲಿ ಮಾಂಸದ ಚೂರಿಲ್ಲದಂತೆ ಕೀಳುವವುಗಳೇ! ಯಾವ ಪುಣ್ಯಕ್ಷೇತ್ರಗಳಿಗೆ ಹೋದರೂ ಪುಂಡರು, ಲಂಡರು ಆ ನಿಮಿತ್ತ ಈ ನಿಮಿತ್ತವೆಂದು ಹಣ ಸುಲಿಯುಕೊಳ್ಳುತ್ತಾರೆ. ಸ್ವರ್ಗದ ಬೀಗದ ಕೈ ಅವರಲ್ಲಿಯೆ ಇದೆಯಂತೆ. ಹಾಗಿದ್ದರೆ ಸ್ವರ್ಗ ಲೋಕವು ಮರುಭೂಮಿಯಾದೀತು, ಇಲ್ಲವೆ ಅಲ್ಲಿ ಸ್ಥಳ ಸಾಕಾಗದೆ ಹೊಸತೊಂದು ಸ್ವರ್ಗಲೋಕದ ಸೃಷ್ಟಿಯಾಗಬೇಕಾದೀತು. ಒಂದೊಂದು ಸಲ ವಿಚಾರಿಸುವಾಗ ಅಲ್ಲಿ ಸ್ಥಳವಿಲ್ಲದೆ ಈ ಲೋಕದಲ್ಲಿಯೇ ಇಚ್ಛಾನುಸಾರ ಸುಖೋಪಭೋಗವಮಾಡಿ ಮಣ್ಣುಪಾಲಾಗಿರಿ ಎಂದು ಏರ್ಪಾಡಾಗಿದೆಯೊ ಏನೊ?

**ಸೇಟಜೀ:**—ನೀವು ಸಮಾಜದ ಭಯಂಕರ ಚಿತ್ರವನ್ನು ಚಿತ್ರಿಸುತ್ತೀರಲ್ಲ!

**ಗೋಪಾಲ:**-ಈ ಚಿತ್ರವು ಸಮಾಜದಲ್ಲಿ ಕಾಣುವ ಮರೆಮೋಸದ ಮರೀಚಿಕೆಯ ಚಿತ್ರ! ಅದನ್ನು ನಂಬದೆ ದೂರ ಹೋದರೆ ಪವಿತ್ರವಾದ ಗಂಗಾನದಿಯಂತಿರುವ ಪುಣ್ಯದಾಯಕ ನದಿಗಳು ಸಿಗುತ್ತವೆ. ಅಂಥವುಗಳಿರುವುದರಿಂದಲೇ ಈ ಲೋಕವು ನಡೆಯುತ್ತದೆ. ಅಂಥದ್ದೊಂದು ಪವಿತ್ರವಾದ ನದಿಯೆಂದರೆ ಈ ರಾಧಮ್ಮ! ನೀವೇನು ಹೇಳುತ್ತೀರಿ?

ಸೇಟಜಿಗೆ ಗೋಪಾಲನ ಈ ಉತ್ಸಾಹದ ಮಾತುಗಳಿಂದ ನಸುನಗು ಬಂತು. ಆದರೆ ಆತನು ಮಾತೆತ್ತಲಿಲ್ಲ.

**ಗೋಪಾಲ:**— ನಾನು ಯಾರನ್ನೂ ವೃಥಾ ಸ್ತುತಿ ಮಾಡುವವನಲ್ಲ! ರಾಧಮ್ಮನಲ್ಲಿ ಒಂದು ಬಗೆಯ ವಿಚಿತ್ರವಾದ ಆಕರ್ಷಣಶಕ್ತಿ ಇದೆ. ಆ ಪರುಷಕಲ್ಲು ತಾಗಿದರೆ ಎಂಥ ಕೀಳು ಲೋಹವೂ ಪುತ್ಥಳಿ ಚಿನ್ನವಾಗುತ್ತದೆ. ಅಲ್ಲವೇ?

ಸೇಟಜಿಯು ಇನ್ನೂ ನೀರವ.

**ಗೋಪಾಲ:**— ಅವಳಲ್ಲಿ ಸಾಮಾನ್ಯ ಸ್ತ್ರೀಯಲ್ಲಿರುವ ಠಕ್ಕು ಠೌಳಿಕ, ಜಂಭ, ಇವುಗಳಿಗೆ ಸ್ಥಾನವೇ ಇಲ್ಲ. ಅವಳಿರುವ ಮನೆಯೇ ಇಹದಲ್ಲಿ ಸ್ವರ್ಗ. ನಾನು ಹಿಂದೆ ಹೇಳಿದ ವಿಮಲೆಗೂ ಅವಳಿಗೂ ಅಜಗಜಾಂತರ ವಿದೆ. ಆ ವಿಮಲೆಯ ಮಹತ್ವಾಕಾಂಕ್ಷೆಗೆ ಪಾರವೇ ಇಲ್ಲ. ಅವಳು ಆ ಕೋಟ್ಯಾಧೀಶನನ್ನು—

**ಸೇಟಜೀ:**— ಒಂದೇ ಕವಳವಾಗಿ ನುಂಗಿಬಿಡುವಳೆನ್ನುವಿರಾ?

**ಗೋಪಾಲ:**— ಅಂತೂ ಆ ಜಬ್ಬನಿಗೆ ಅಷ್ಟು ಹಣವಿದ್ದೂ ಅರೆಗಳಿಗೆ ಸುಖವಿರುತ್ತಿರಲಿಲ್ಲ. ಇಂದು ಅದು ಬೇಕು, ನಾಳೆ ಇದು ಬೇಕು, ಎಂದು ಹೇಳಿ ಅವನ ಸಂಪತ್ತನ್ನೆಲ್ಲಾ ಅರೆದು ನೀರು ಮಾಡಿ ಕುಡಿದುಬಿಡುತ್ತಿದ್ದಳು, ಆ ತಾಟಕಿ.

**ಸೇಟಜೀ:**—(ಕಣ್ಣುಗಳನ್ನು ಉಜ್ಜಿಕೊಳ್ಳುತ್ತ)— ಅವಳು ಅಷ್ಟು ಕಠಿಣ ಹೃದಯದವಳಾಗಿದ್ದರೆ ನೀವು ಅವಳನ್ನು ಹೇಗೆ ಪ್ರೀತಿಸಿದಿರಿ?

**ಗೋಪಾಲ:**—'ದೂರದಿಂದ ಬೆಟ್ಟ ನುಣ್ಣಗೆ'ಯೆಂದು ಕೇಳಿಲ್ಲವೇ? ಮರೀಚಿಕೆಯ ದೃಷ್ಟಾಂತವನ್ನು ಅವಳನ್ನು ಉದ್ದೇಶಿಸಿಯೇ ಹೇಳಿದೆ. ಅವಳ ಮೋರೆ, ಅಂಗಾಂಗಗಳ ಅಂದಚೆಂದದಿಂದಲೇ ನಾನು ಮರುಳಾದೆ. ತನ್ನ ಬೆಡಗುಬಿನ್ನಾಣಗಳಿಂದ ಇತರರನ್ನು ಮೋಸಗೊಳಿಸುವವರ ಮೇಲೆ ಈಗ ನನಗೆ ಒಂದು ಬಗೆಯ ಜುಗುಪ್ಸೆ, ತಾತ್ಸಾರ! ರಾಧಮ್ಮನು ಹಾಗಲ್ಲ! ನಿಜವಾಗಿಯೂ ಚೆಲುವೆ. ಅಸಾಧಾರಣವಾದ ಅಂದಚೆಂದವುಳ್ಳವಳು. ಆದರೂ ಆ ವಿಷಯವನ್ನೆ ಅರಿತವಳಲ್ಲ. ಅವಳ ಶಾಂತಗುಣ, ಅಪಾರವಾದ ಭಕ್ತಿ, ನಿಷ್ಕಲಂಕವಾದ ಮನಸ್ಸು ಇವುಗಳು ಯಾರನ್ನೂ ಆಕರ್ಷಿಸದೆ

ಇರಲಾರವು. ಈ ಕಮಲವು ಈ ಹಳ್ಳಿಗಾಡಿನಲ್ಲಿ ಅರಳಿದ್ದರಿಂದ ಅದರ ಸುವಾಸನೆಯೂ ಇಲ್ಲೇ ಇಂಗಿಹೋಗಿದೆ.

**ಸೇಟಜೀ:**— ತನ್ನ ಅಂದಚೆಂದಗಳನ್ನು ನೋಡಿ ತಲೆ ತಿರುಗುವ ಪ್ರಾಯವು ಅವಳಿಗೆ ದಾಟಿ ಹೋಗಿದೆ. ಅವಳಿನ್ನು ವಿವಾಹಕ್ಕೆ ಕೈಯೊಡ್ಡ ಲಾರಳು.

**ಗೋಪಾಲ:**— ಖಂಡಿತವೇ? ಅವಳು ವಿವಾಹದ ಪ್ರಾಯವನ್ನು ದಾಟಿಲ್ಲವೆಂದು ನನ್ನ ಮತ.

**ಸೇಟಜೀ:**— ಒಂದು ವೇಳೆ ನೀವೇ ಅವಳನ್ನು ವಿವಾಹಮಾಡಿ ಕೊಳ್ಳುವಿರಾ?

**ಗೋಪಾಲ:**— ನಾನು! ಎಂದಿಗೆ ಅವಳು ನನ್ನ ಕೈಹಿಡಿವಳೊ ಅಂದಿಗೆ ನಾನು ಧನ್ಯನೆಂದು ಭಾವಿಸುವೆ. ಆ ಪ್ರಸ್ತಾಪದಲ್ಲಿ ನನಗೆ ನಿಮ್ಮ ಆಶೀರ್ವಾದವೂ ಬೆಂಬಲವೂ ಬೇಕಾಗಿವೆ.

ಸೇಟಜಿಗೆ ಈ ಮಾತನ್ನು ಕೇಳಿ ಹಿಡಿಯಲಾರದಷ್ಟು ಆನಂದ ವಾಯಿತು. ಆದರೆ ಅದನ್ನು ಹೊರಪಡಿಸದೆ:—'ಈ ವಿಚಾರದಲ್ಲಿ ನಾನು ನಿಮಗೆ ಸಹಾಯಮಾಡಲು ಶಕ್ತನಲ್ಲ. ಅವಳು ಹಲವು ಸಲ ತಾನಿನ್ನು ಮದುವೆಯಾಗುವುದಿಲ್ಲವೆಂದು ಹೇಳಿದ್ದಾಳೆ. ಅವಳ ಹಂಗಿನಲ್ಲಿರುವ ನಾನು ಅವಳಿಗೆ ಹೇಗೆ ಒತ್ತಾಯಪಡಿಸಲಿ?

**ಗೋಪಾಲ:**— ಛೆ! ಛೆ! ನಿಮ್ಮಿಂದ ಆ ರೀತಿಯ ಸಹಾಯ ಬೇಕಿಲ್ಲ! ಅವಳು ಹಿಂದೆ ಹೇಳಿದ ಮಾತು ಅಂತಿರಲಿ. ಇನ್ನೊಮ್ಮೆ ಪ್ರಸ್ತಾಪಿಸಿರಿ; ಮತ್ತು ನನ್ನ ವಿಷಯದಲ್ಲಿ ಅವಳಿಗೆ ಅಭಿಮಾನವಿದೆಯೆ ಎಂದು ಮಾತ್ರ ತಿಳಿದು ನನಗೆ ಹೇಳಿರಿ. ನಮ್ಮಿಬ್ಬರೊಳಗೆ ಇರಬೇಕಾದ ಪ್ರೇಮವು ದೇಹ ವೆರಡಿದ್ದರೂ ಜೀವವೊಂದೆ ಎಂಬಂತಿರಬೇಕು. ಆಗ ಮಾತ್ರವೇ ನನಗೆ ಹಿತ; ನನ್ನ ಸುಖದ ಪರಮಾವಧಿ. ಅವಳಿಗೆ ನನ್ನ ಮೇಲೆ ಪ್ರೇಮವಿಲ್ಲ ವೆಂದು ತಿಳಿದರೆ ನಾನು ಈ ಊರನ್ನೆ ಬಿಟ್ಟು ತಲೆ ಮರಸಿಕೊಳ್ಳಬೇಕಾಗು ವುದು. ಆ ಮೇಲೆ ನನ್ನ ಹೃದಯದಲ್ಲಿ ಪ್ರೇಮದ ಒರತೆಯೇ ಬತ್ತಿ

ಹೋದಂತಾಗುವುದು. ಆಗ ಆ ಸುಡುವ ಹೃದಯವನ್ನು ಇಲ್ಲಿ ತೋರಿಸ ಲಾರೆನು. ನನ್ನ ಗ್ರಂಥವೂ ಅರ್ಧದಲ್ಲಿಯೇ ನಿಂತುಹೋಗುವುದು. ಆ ಗ್ರಂಥಲೇಖನಕ್ಕೆ ಅವಳ ಪ್ರೋತ್ಸಾಹ, ಅವಳ ನಿಷ್ಕಲಂಕವುನಸ್ಸಿನ ಟೀಕೆ ಅವಶ್ಯ. ಅದೇ ಇಲ್ಲದ ಮೇಲೆ ಆ ಗ್ರಂಥವು ಪೂರ್ಣವಾಗುವುದು ಹೇಗೆ?

**ಸೇಟಜೀ:**— ಅವಳ ಟೀಕೆಯ ಮೇಲೆ ಅಷ್ಟು ಅಭಿಮಾನವೇಕೆ? ಅವಳು ಅಂಥ ಸುಶಿಕ್ಷಿತಳಲ್ಲ. ಕುಲೀನ ಸ್ತ್ರೀಯರಲ್ಲಿ ಸಾಮಾನ್ಯ ಬಡ ಮನೆತನದವಳು.

**ಗೋಪಾಲ:**— ಅವಳು ಅಶಿಕ್ಷಿತಳೆ? ವಿಮಲೆಯು ಸುಶಿಕ್ಷಿತಳೇ? ರಾಧೆಯು ಕುಲೀನೆಯಲ್ಲ, ವಿಮಲೆಯು ಕುಲೀನೆ ಎಂದು ಹೇಳುತ್ತೀರಾ? ನಾನೂ ರಾಧೆಯಂತೆ ಬಡಕುಟುಂಬದಲ್ಲಿ ಹುಟ್ಟಿದವನಲ್ಲವೇ?

**ಸೇಟಜೀ:**— ನೀವು ಬಡತನದಲ್ಲಿ ಹುಟ್ಟಿದರೂ ಎಮ್. ಎ. ಪರೀಕ್ಷೆ ಪಾಸುಮಾಡಿರುತ್ತೀರಿ. ಅವಳು ಪ್ರಾಥಮಿಕ ಶಾಲೆಯಲ್ಲಿ ಕೂಡಾ ಕಾಲಿಟ್ಟವಳಲ್ಲ.

**ಗೋಪಾಲ:**— ಅಂಥ ಶಿಕ್ಷಣವು ಆ ವಿಮಲೆಯಂಥವರನ್ನು-ವೈಯ್ಯಾರದ ಗೊಂಬೆಗಳನ್ನು, ಠಕ್ಕಿನ ಮೂರ್ತಿಗಳನ್ನು— ತಯಾರಿಸುವಂತಿದ್ದರೆ ಆ ಶಿಕ್ಷಣವೂ ಬೇಡ. ಆ ವೈಯ್ಯಾರದ ಬೆಡಗೂ ಬೇಡ. ನನ್ನ ಧ್ಯೇಯವಿಷ್ಟೆ. ನನ್ನ ಗ್ರಂಥವು ಅಚ್ಚಾದ ಮೇಲೆ ನನಗೆ ಸಾಮಾನ್ಯವಾಗಿ ಒಂದೆರಡು ವರ್ಷ ಗಳಲ್ಲಿ ಒಂದೆರಡು ಸಾವಿರ ರೂಪಾಯಿ ಪ್ರತಿಫಲವಾಗಿ ದೊರಕೀತು. ಅದರಿಂದ ನಾನೊಂದು ಮನೆ ಮಾಡಿಕೊಳ್ಳುವೆನು. ಅಲ್ಲಿ ರಾಧೆಯು ನನ್ನ ಗೃಹಲಕ್ಷ್ಮಿಯಾದರೆ—

**ಸೇಟಜೀ:**— ಏನು? ಸುಖವಾಗಿ ಕಾಲ ಕಳೆಯಬಹುದು, ಅನ್ನು ವಿರಾ!

**ಗೋಪಾಲ:**— ಹೌದು. ಆದರೆ ಅದು ಅವಳಿಗೆ ನನ್ನ ಮೇಲೆ ಪ್ರೇಮವಿದ್ದರೆ ಮಾತ್ರ ಸಾಧ್ಯ.

**ಸೇಟಜೀ:**— ಹಾಗಾದರೆ ನಾನು ಅವಳನ್ನು ಮಾತನಾಡಿಸಿ ತಿಳಿ ಯುವೆನು. ಆದರೆ ನಾನೇ ಅವಳ ಹಂಗಿಗನಾದ್ದರಿಂದ—

**ಗೋಪಾಲ:**— ಛೆ! ಛೆ! ನೀವು ಅವಳಿಗೆ ಹೀಗೆ ಮಾಡೆಂದು ಬೋಧಿಸ ಬೇಕೆಂದು ನಾನು ಅನ್ನುವುದಿಲ್ಲ. ಅವಳ ಇಂಗಿತವನ್ನು ತಿಳಿಯಬೇಕು, ಅಷ್ಟೆ.

**ಸೇಟಜೀ:**—'ಹಾಗಿದ್ದರೆ ಆ ಕೆಲಸ ನನಗೆ ಒಪ್ಪಿತು. ಈಗ ಅವಳು ದೇವಸ್ಥಾನದಿಂದ ಬರುವ ಹೊತ್ತಾಯಿತು.' ಎನ್ನುವಷ್ಟರಲ್ಲಿ ಅವಳು ಆರತಿ ಯನ್ನು ಹಿಡಿದುಕೊಂಡು ಮೊಗಸಾಲೆಯ ಮೆಟ್ಟಿಲನ್ನು ಹತ್ತಿದಳು.

ಮೆಟ್ಟಿಲು ಹತ್ತಿದ ರಾಧೆಯು 'ತಾತಾ! ಇಂದೊಂದು ವಿಚಿತ್ರ ಸಮಾಚಾರ ಬಂದಿದೆ,' ಎಂದು ತವಕದಿಂದ ಆರಂಭಿಸಿದಳು. ದಿನ ಚರಿಯಲ್ಲಿ ಗೋಪಾಲನು ಅಲ್ಲಿಗೆ ಬಂದು ತುಸು ಹೊತ್ತು ಮಾತುಕಥೆ ನಡಿಸುವುದರಿಂದ ಅವಳಿಗೆ ಅವನ ವಿಷಯದ ಅಳುಕು ಎಂದೋ ಹೋಗಿತ್ತು.

**ಸೇಟಜೀ:**—ವಿಚಿತ್ರ ಸಮಾಚಾರವೇನು? ರಾಧಾಬಾಯಿ!

**ರಾಧಾ:**—ಇಲ್ಲಿಗೆ ಯದುರಾಜ ಗೋಸಾಯಿಗಳು ಬರುವರಂತೆ! ಅವರ ರಹದಾರಿ ಬಂದಿದೆ. ಈ ದೇವಸ್ಥಾನವು ಅವರ ಕೈಕೆಳಗಿನದು. ಇಲ್ಲಿ ಒಂದು ವಾರವಿದ್ದು ಪುರಾಣ ಭಜನೆ ಕೀರ್ತನೆ ಸಪ್ತಾಹವಾಗುವುದಂತೆ! ಅರ್ಚಕರು ಹೇಳಿದರು. ಅವರು ಬಂದರೆ ಬರೆ ಕಂಬಗಳಿಗೆ ಪುರಾಣ ಹೇಳಬೇಕು.

**ಗೋಪಾಲ:**—ಅದೇನದೇನು?

**ರಾಧೆ:**—ಅವರು ಕಾಮುಕರು, ಪೋಕರಿ ಸ್ವಭಾವದವರು, ಕುಡಿಕರು, ಬಂಗಿ ಮುಂತಾದ ಮಾದಕ ಪದಾರ್ಥಗಳನ್ನು ಸೇವಿಸುವವರು. ಅವರ ಊರಲ್ಲೇ ಅವರನ್ನು ಯಾರೂ ಮನ್ನಿಸುವುದಿಲ್ಲ. ಹೆಣ್ಣು ಮಕ್ಕಳ ಮಾನಭಂಗಕ್ಕೆ ಅವರು ಹೇಸುವವರಲ್ಲವಂತೆ!

**ಗೋಪಾಲ:**—ನಮ್ಮ ಧರ್ಮಸಂರಕ್ಷಕರೇ ಇಂಥವರು! ಆಗ ಧರ್ಮ ವೆಲ್ಲಿ ಉಳಿದೀತು? ಅದಕ್ಕನೇ ನಾನು ದೇವಸ್ಥಾನಗಳಿಗೆ ಹೋಗುವುದನ್ನು ಬಿಟ್ಟೆ. ನಮ್ಮಪ್ಪನ ಕಾಲದ ಅರ್ಚಕರು ಈಗ ಇಲ್ಲ. ಈಗ ಇರುವ ಅಧಮರ ದೆಸೆಯಿಂದಲೆ ಅಲ್ಲಿ ದೇವರ ಸಾನ್ನಿಧ್ಯ ಕಡಿಮೆಯಾಗಿದೆ.

**ರಾಧೆ:—** ಅದಿರಲಿ. ನಾನು ತಂದ ದೇವರ ಪ್ರಸಾದ ಕೊಂಚ ತಿಂದು ಒಂದಿಷ್ಟು ಬಿಸಿ ಹಾಲು ಕುಡಿಯಲಿಕ್ಕೆ ಆಕ್ಷೇಪವುಂಟೇ?

ಗೋಪಾಲನು ಆಕ್ಷೇಪವಿಲ್ಲೆಂದು ಹೇಳಿ ಹಾಲು ಕುಡಿದು ತನ್ನ ಬಿಡಾರಕ್ಕೆ ಹೋದನು. ಸೇಟಜಿಯು ಅಂದು ರಾತ್ರೆ ಬೇಗನೆ ನಿದ್ದೆಹೋಗ ಲಿಲ್ಲ. ತನ್ನ ಹಾಸಿಗೆಯಲ್ಲಿ ಮಲಗಿದ್ದಾಗ ಅವನ ಮನಸ್ಸಿನಲ್ಲಿ 'ಈ ಗೋಪಾಲನು ಈ ರಾಧೆಯನ್ನು ವಿವಾಹವಾಗಿ, ನನ್ನ ಸರ್ವ ಸಂಪತ್ತಿಗೆ ಇವರನ್ನೆ ಅಧಿಕಾರಿಯಾಗಿ ಮಾಡಬಹುದೇ? ಇವರು ಈ ಏರ್ಪಾಡಿಗೆ ಒಪ್ಪುವರೆ? ಅವರು ರಾಧೆಗೋಪಾಲರಾಗಿ ಸುಖದಲ್ಲಿದ್ದಾಗ ನೋಡ ಬೇಕೆಂಬ ನನ್ನ ಕನಸು ರೂಪಿಸುವುದೇ?' ಎಂಬಿತ್ಯಾದಿ ಚಿಂತಿಸುತ್ತ ನಡು ರಾತ್ರೆಯ ವರೆಗೆ ಎಚ್ಚರವಾಗಿದ್ದನು.

---

## ೧೫ನೇ ಅಧ್ಯಾಯ

## ರಾಧೆಯ ಮನೆಯಲ್ಲಿ ಹರಟೆ ಕಚೇರಿ

ಚಳಿಗಾಲವು ಆರಂಭವಾದುದರಿಂದ ಕಡಲದಂಡೆಗೆ ವಾಯುಸೇವನೆಗೆ ಹೋಗುವುದನ್ನು ನಿಲ್ಲಿಸಿ ಸೇಟಜಿಯು ರಾಧೆಯ ಮನೆಯ ಮೊಗಸಾಲೆ ಯಲ್ಲಿಯೆ ಸಾಯಂಕಾಲವನ್ನು ಕಳೆಯುತಿದ್ದನು. ಅಲ್ಲಿ ರಾಧೆಯು ಒಳ ಗಿನ ಕೋಣೆಯಲ್ಲಿ ಕುಳಿತು ಹೊಲಿಗೆ ಕೆಲಸ ಮಾಡುವಳು. ಸುಡುಗಾಡು ಸುಬ್ಬಾಭಟ್ಟರೂ ಗುಂಡುಬುವರೂ ಗೋಪಾಲನೂ ಅಲ್ಲಿ ಆಗಾಗ ಬರು ತಿದ್ದರು, ಸುಖಸಲ್ಲಾಪಮಾಡುತಿದ್ದರು. ಗೋಪಾಲನು ಮುಂಬಯಿಯಲ್ಲಿ ವರ್ತಮಾನ ಪತ್ರಿಕೆಯ ಆಫೀಸಿನಲ್ಲಿದ್ದನು ಎಂದು ಕೇಳಿದೊಡನೆ ಅವರಿಗೆಲ್ಲ ಅವನ ಮೇಲಣ ಅಭಿಮಾನವು ಹೆಚ್ಚಿತು. ಒಂದು ದಿನ ಅವರೆಲ್ಲರೂ ಸೇರಿದ್ದಾಗ ಸುಬ್ಬಾಭಟ್ಟರು

'ಗೋಪಾಲರಾಯರೇ! ವರ್ತಮಾನಪತ್ರಿಕೆಯ ಆಫೀಸಿನಲ್ಲಿದ್ದುದ ರಿಂದ ನಿಮಗೆ ಲೋಕದ ವಿಶೇಷ ಅನುಭವವಿದ್ದಿರಬೇಕು. ಅಲ್ಲವೇ?'

**ಗುಂಡುಬುವಾ:—** ಹೌದು, ಹೌದು! ಅದು ನಿಜ.

**ಗೋಪಾಲ:—** ಅದೇನೊ ನಾನರಿಯೆ. ಅಂತು ಪತ್ರಿಕೆಯ ಆಫೀಸಿನಲ್ಲಿದ್ದುದರಿಂದ ಮನುಷ್ಯನ ಜೀವನದ ಕಿರುದಾರಿಗಳ ಪರಿಚಯವಾಗುತ್ತದೆನ್ನಬೇಕು. ಅದಕ್ಕಿಂತಲೂ ಸೂರ್ಯನ ಬೆಳಕು ಚೆನ್ನಾಗಿ ಬೀಳುವ ರಾಜರಸ್ತೆಗಳಲ್ಲಿ ನಡೆಯುವುದೇ ಉತ್ತಮ.

**ಗುಂಡುಬುವಾ:—** ರಾಜರಸ್ತೆ ಎಂದು ನೀವು ಯಾವುದನ್ನು ಅನ್ನುತ್ತೀರಿ?

**ಗೋಪಾಲ:—** ಪ್ರಾಮಾಣಿಕತೆ, ದೇವರಲ್ಲಿ ಭಕ್ತಿ, ಜನರಲ್ಲಿ ವಿಶ್ವಾಸ, ಅನುತಾಪ ಇವು ರಾಜರಸ್ತೆಗಳು. ಸಾರ್ವದಾ ಒಳಸಂಚೂ, ಇತರರ ಮೇಲೆ ಸಂಶಯ, ಪಿಸುಣ, ಹಿಂದಿನಿಂದ ದೂಷಣೆ, ಅಲ್ಪಬುದ್ಧಿ ಇವು ಕಿರುದಾರಿಗಳು. ವರ್ತಮಾನ ಪತ್ರಿಕೆಗಳು ತಮ್ಮ ಜವಾಬ್ದಾರಿಯನ್ನು ನ್ಯಾಯವಾಗಿ ನಿರ್ವಹಿಸಿದರೆ ಅವು ಲೋಕೋಪಕಾರಕ್ಕೆ ಅನುಪಮಶಕ್ತಿಯ ಸಾಧನ. ಆದರೆ ಈಗಿನ ಸ್ಥಿತಿಯಲ್ಲಿ ಅವು ತಮ್ಮ ಶಕ್ತಿಯ ವ್ಯಭಿಚಾರ ಮಾಡುತ್ತವೆ.

**ಸುಬ್ಬಾ:—** ಅದು ನಿಜ. ಈಗ ನಾನು ವರ್ತಮಾನ ಪತ್ರಿಕೆಯನ್ನು ತರಿಸುತ್ತೇನೆ. ಅದರಲ್ಲಿ ಪ್ರಕಟನೆಗಳೇ ಹೆಚ್ಚು. ಕಾಮವಾಸನೆಗೆ ಪುಷ್ಟಿ ಕೊಡುವ, ಮತ್ತು ಅದರಿಂದುಂಟಾದ ರೋಗಗಳ ಚಿಕಿತ್ಸೆಯ ಪ್ರಕಟನೆಗಳು; ಯಾರು ಹೆಂಡತಿಯನ್ನು ತ್ಯಜಿಸಿದನು, ಯಾರು ಗಂಡನನ್ನು ತ್ಯಜಿಸಿದಳು, ಯಾರು ಪಾಲಿನ ವ್ಯಾಜ್ಯಕ್ಕೆ ನೋಟೀಸು ಕೊಡುತ್ತಾರೆ, ಯಾರು ಯಾರ ಆಸ್ತಿಗೆ ವಾರೀಸುದಾರರಲ್ಲ ಇತ್ಯಾದಿ ಪ್ರಕಟನೆಗಳು. ಇನ್ನು 'ಅಲ್ಲಲ್ಲಿ ಇಷ್ಟಿಷ್ಟು', 'ಮಾತಿನ ಸೊಲ್ಲು', 'ಸೊಲ್ಲಿನ ಮಾತು' ಎಂದು ಇತ್ಯಾದಿ ಲೇಖನಗಳಲ್ಲಿ ಯಾರ್ಯಾರ ಮೇಲೆ ಕೆಸರು ಎರಚಿ ಅನಾಮಿಕ ಲೇಖನಗಳನ್ನು ಬರೆಯುವುದು, ಇಂಥವರೇ ಬರೆದವರು ಎಂಬ ಊಹನೆ ಮೇಲೆ ವಿಷಯ ಬಿಟ್ಟು ಯಾರ್ಯಾರ ಮೇಲೆ ಹಾರಿ ಉರಿದು ಬಿದ್ದು ಬೈಗಳ ಮಳೆ ಸುರಿಸುವುದು ಇವೇ ಪತ್ರಿಕೆಗಳಲ್ಲಿರುವ ಇತರ ಸಮಾಚಾರಗಳು.

**ಗೋಪಾಲ:—** ಯಾವುದೊಂದು ಸಾರ್ವಜನಿಕ ವಿಷಯದಲ್ಲಿ ಜನತೆಯ ಅಭಿಪ್ರಾಯಗಳನ್ನು ಸಂಗ್ರಹಿಸಿ ಹೇಗೆ ರೂಪುಗೊಳಿಸಬೇಕು, ಜನತೆಗೆ ಹೇಗೆ ಮಾರ್ಗದರ್ಶಕರಾಗಬೇಕು ಎಂಬ ಅರಿವೇ ಅವುಗಳಿಗೆ ಇಲ್ಲ.

**ಸೇಟಜೀ:**—ನಾನು ಮುಂಬಯಿಯ ವರ್ತಕರಲ್ಲಿ ಗುಮಾಸ್ತ ನಿದ್ದಾಗ ಅಲ್ಲಿ ಬೇರೆ ಬೇರೆ ವರ್ತಕರ ವ್ಯವಹಾರಗಳ ಪರಿಚಯವು ನನಗಾಗುತಿತ್ತು. ಅವುಗಳ ನಿಜಸ್ಥಿತಿಯನ್ನು ತಿಳಿದರೆ ಜನತೆಯು ಏನನ್ನು ತಿಳಿದೀತೋ?

**ಗುಂಡುಬುವಾ:**— ನಿಜಸ್ಥಿತಿಯೇನು?

**ಗೋಪಾಲ:**—ಈ ವರ್ತಮಾನ ಪತ್ರಿಕೆಗಳ ಸೂತ್ರಗಳನ್ನು ಹಿಂದಿನಿಂದ ಆಡಿಸುವವರೂ ಈ ವರ್ತಕರೆ. ಅವರ ವ್ಯವಹಾರಗಳನ್ನು ಈ ಪತ್ರಿಕೆಗಳು ಉದ್ಘೋಷವಾಗಿ ಸಾರುತ್ತಿವೆ.

**ರಾಧೆ:**—(ಒಳಗಿಂದ) ನೀವಾದರೂ ಒಂದು ದಿನ ಜನತೆಗೆ ನಿಜಸ್ಥಿತಿಯನ್ನು ಹೇಳಲು ಮುಂದೆ ಬರುವಿರಾ?

**ಗೋಪಾಲ:**—ಅದಕ್ಕೆ ಸಂದೇಹವಿದೆಯೇ? ಜನತೆಗೆ ಹೊಸ ದೃಷ್ಟಿ ಚಕ್ರಗಳನ್ನು ಕೊಡಲಿಕ್ಕೆ ನಾನೇ ಸರಿ.

**ಸೇಟಜೀ:**—(ಲೋಡಿಗೆ ಒರಗಿದ್ದವನು ನೆಟ್ಟಗೆ ಕುಳಿತು) ಆದರೆ ಈ ಸಾಹಸಕ್ಕೆ ಒಂದೆರಡು ಲಕ್ಷ ರೂಪಾಯಿ ಬಂಡವಾಳವಿಲ್ಲದೆ ಸಾಲದು. ಅಷ್ಟು ಹಣ ಒಮ್ಮೆಗೆ ನಿಮ್ಮ ಕೈ ಸೇರಿತು ಎನ್ನೋಣ. ಆಗ ನೀವೇನು ಮಾಡಲಿರುವಿರಿ?

**ಗೋಪಾಲ:**—ಹಾಗೆ ಹಣ ಕೈಸೇರಿತೆಂದರೆ ನನ್ನ ಸ್ವಾರ್ಥಕ್ಕೆ, ನನ್ನ ಸ್ವಂತ ಸುಖಕ್ಕೆ ವೆಚ್ಚ ಮಾಡದೆ ಅದರ ಸಹಾಯದಿಂದ ಸಮಾಜದಲ್ಲಿ ಇದ್ದುದನ್ನು ಇದ್ದಂತೆ ಚಿತ್ರಿಸುವ ಪ್ರಚಂಡ ಪತ್ರಿಕೆಯೊಂದನ್ನು ಹೊರಡಿಸಲಿರುವೆನು. ಈ ವರ್ತಕರ, ಈ ಲಕ್ಷಾಧೀಶರ ಕುಹಕಕುತಂತ್ರಗಳನ್ನೆಲ್ಲ ಬಯಲಿಗೆ ಎಳೆಯುವೆನು.

**ಸೇಟಜೀ:**—ಅಂಥ ಪತ್ರಿಕೆಗೆ ಚಂದಾದಾರರೆ ಸಿಗಲಾರರು.

**ಗೋಪಾಲ:**—ನಿಜಸ್ಥಿತಿಯನ್ನು ವರ್ಣಿಸಿದರೆ—

**ಗುಂಡುಬುವಾ:**-ನಿಜಸ್ಥಿತಿಯನ್ನು ವರ್ಣಿಸಿದರೆ, ಕಣ್ಣುಕುಕ್ಕ ಮಾತ ನಾಡಿದಂತಾಗುವುದು. ಆಗ ಮಾನನಷ್ಟದ ಮೊಕದ್ದಮೆಗಳನ್ನು ಎದುರಿಸ

ಲಿಕ್ಕಾಗಿ ಕೋರ್ಟುಕಚೇರಿಗಳ ಜಗಲಿಯನ್ನೊ, ಜೈಲನ್ನೊ ನಿಮ್ಮ ಕಾಯಂ ನಿವಾಸಗೃಹವಾಗಿ ಮಾಡಬೇಕಾಗುವುದು. ಅಲ್ಲವೇ ಜೀವನದಾಸರೇ?

ಇದನ್ನು ಕೇಳಿ ಎಲ್ಲರೂ ನಕ್ಕರು. ಅನಂತರ ಹಲವು ವಿಚಾರಗಳು ಚರ್ಚೆಗೆ ಬಂದವು. ಆಗ ತನ್ನಲ್ಲಿರುವ ಅಮಿತ ಧನಸಂಪತ್ತನ್ನು ಹೇಗೆ ವಿನಿಯೋಗಿಸಬಹುದಿತ್ತು ಎಂಬ ವಿಚಾರವು ಒಂದೊಂದಾಗಿ ಸೇಟಜಿಯು ಮನಸ್ಸಿನಲ್ಲಿ ವ್ಯಾಪಿಸಿಕೊಂಡಿತ್ತು. ತನ್ನ ಹಣವನ್ನು ಹೇಗೆ ಸದ್ವ್ಯಯ ಮಾಡಬಹುದೆಂದು ಆತನು ಎಣಿಕೆ ಹಾಕುತಿದ್ದನು. ಅಷ್ಟರಲ್ಲಿ ಕತ್ತ ಲಾದುದರಿಂದ ಅವರೆಲ್ಲರು ತಂತಮ್ಮ ಮನೆಗಳಿಗೆ ಹೋದರು.

---

## ೧೬ನೆ ಅಧ್ಯಾಯ

## ಯದುರಾಜ ಗೋಸಾಯಿಯ ಕೀರ್ತನೆ

ಒಂದೆರಡು ದಿನಗಳಲ್ಲಿ ಯದುರಾಜ ಗೋಸಾಯಿಯು ದೇವಸ್ಥಾನಕ್ಕೆ ಬಂದಿಳಿದನು. ಮಶಾಲುಗಳನ್ನು ಉರಿಸುತ್ತ, ಕೊಂಬು ಕಹಳೆ ವಾದ್ಯಗಳ ಸಮಾರಂಭದಿಂದ ಅಡ್ಡಪಲ್ಲಕಿಯಲ್ಲಿ ತನ್ನ ಪರಿವಾರದೊಂದಿಗೆ ಬಂದಾಗ ಅವರ ಆಶ್ರಿತರೆಲ್ಲ ಅವರನ್ನು ಎದುರುಗೊಂಡು ದೇವಸ್ಥಾನಕ್ಕೆ ತಂದು ಮುಟ್ಟಿಸಿದರು. ಅಂದಿನಿಂದ ಪುರಾಣ, ಭಜನೆ, ಕೀರ್ತನೆಗಳ ಗದ್ದಲವೇ ಗದ್ದಲ. ಆದರೆ ಶ್ರೋತಾಜನಗಳ, ಮುಖ್ಯವಾಗಿ ಸ್ತ್ರೀವೃಂದದ ಸುಳಿ ದಾಟವು ದೇವಸ್ಥಾನದಲ್ಲಿ ಕಡಿಮೆಯಾಯಿತು. ಇದರ ಗುಟ್ಟನ್ನು ತಿಳಿಯ ಬೇಕೆಂದು ಗೋಸಾಯಿಯು ಪಾದಚಾರಿಯಾಗಿ ಮನೆಮನೆಗೆ ಹೋಗಲು ತೊಡಗಿದನು.

ಒಂದು ದಿನ ದಾರಿಯಲ್ಲಿ ಸುಬ್ಬಾಭಟ್ಟನು ಗೋಸಾಯಿಗೆ ಗಂಟು ಬಿದ್ದು 'ಗೋಸಾಯಿ ಮಹಾರಾಜರೆ! ನಿಮ್ಮ ಭಜನೆ ಸಪ್ತಾಹಗಳ ಗಲಾಟೆ ಇಲ್ಲಿ ಬೇಡ. ನಮಗೆ ನಮ್ಮ ಹಳೇ ಅರ್ಚಕನ ಪುರಾಣವೇ ಸಾಕು!' ಎಂದನು.

ಗೋಸಾಯಿಯು ರೇಗಿ ಬಿದ್ದು ಕಣ್ಣನ್ನು ಕೆರಳಿಸುತ್ತ 'ಹಾಗೆಂದ ರೇನು?' ಎಂದು ಪ್ರಶ್ನಿಸಿದನು.

**ಸುಬ್ಬಾ:**—ನಾನು ಈಗಲೇ ಹೇಳಿದೆನಲ್ಲ! ಹಳೆ ಪುರಾಣಿಕರ ಪುರಾಣ ಕೇಳಿ ಇಲ್ಲಿ ಎಷ್ಟೊ ಜನರು ಈ ಲೋಕವನ್ನು ಸ್ವಸ್ಥವಾಗಿ ತ್ಯಜಿಸಿದ್ದಾರೆ. ಅವರ ಶವದಹನ ನಾನೇ ಮಾಡಿದ್ದೇನೆ. ಏನೇನೂ ಅವರಿಗೆ ತೊಂದರೆಯಾಗಲಿಲ್ಲ. ಈಗ ನಿಮ್ಮ ಈ ಹೊಸ ರೀತಿ ಬೇಡ, ಅಂದೆ, ಅಷ್ಟೆ!

**ಗೋಸಾಯಿ:**—ಧರ್ಮಪ್ರಚಾರ, ದೇವರ ಮೇಲೆ ಭಕ್ತಿವಿಶ್ವಾಸಗಳನ್ನು ನೆಲೆಗೊಳಿಸುವುದು ನಮ್ಮ ಕೆಲಸ. ಅದಕ್ಕೆ ನಿಮ್ಮಂಥವರ ಅಡ್ಡಿ ಏನು?

**ಸುಬ್ಬಾ:**—ಗೋಸಾಯಿ ಮಹಾರಾಜರೇ! ನಿಮ್ಮ ಧರ್ಮಗಿರ್ಮ ನಮಗೆ ಬೇಡ. ನೀವು ನಿಮ್ಮ ಭೂಮಿಕಾಣಿಯ ಗೇಣಿ, ವಂತಿಗೆ ವರ್ಷಾದ ಸಂಗ್ರಹಿಸಿ ತೆಪ್ಪಗೆ ತೆರಳುವುದೇ ಲೇಸಂದೆ. ನಿಮ್ಮ ಗೊಂದಲ ಇಲ್ಲಿ ಹಚ್ಚಿದರೆ 'ಗೋಸಾಯಿ' ಇರುವ ಬದಲಾಗಿ ನೀವು 'ಬೇಗಸಾಯಿ' ಆದೀರಿ. ಅಷ್ಟೆ!

ಈ ತುಂಟನೊಡನೆ ಹರಟೆ ಉಪಯೋಗವಿಲ್ಲೆಂದು ಗೋಸಾಯಿಯು ಮುಂದರಿಸಿ ರಾಧಾಬಾಯಿಯ ಮನೆ ಮೆಟ್ಟಲನ್ನು ಹತ್ತಿದನು. ಅವನ ಹಿಂದೆಯೇ ಸುಬ್ಬಾಭಟ್ಟನೂ ಹಿಂಬಾಲಿಸಿದನು.

ಅಲ್ಲಿ ಮೊಗಸಾಲೆಯಲ್ಲಿ ಸೇಟಜಿಯು ತಕ್ಲಿಯಿಂದ ನೂಲುತ್ತಿರುವಾಗ ಗೋಸಾಯಿಗೆ ಅವನ ಗುರುತು ಹತ್ತಿತು. ಅವನ ಕಡೆಗೆ ನೋಡಿ 'ಎಲೇ ಜಬ್ಬಾ! ನೀನು ಇಲ್ಲಿಗೇಕೆ ಬಂದೆ?' ಎಂದು ಹುಬ್ಬು ಹಾರಿಸಿ ಕೇಳಿದನು. ಸೇಟಜಿಯು ತಲೆಯನ್ನು ಎತ್ತಿ, ಪ್ರತ್ಯುತ್ತರ ಕೊಡದೆ ತಕ್ಲಿಯನ್ನು ತಿರುಗಿಸುತ್ತ ಕುಳಿತನು. ಆಗ ಗೋಸಾಯಿಯು 'ಇವನು ನಿನ್ನ ಬಂಧುಬಾಂಧವರೊಳಗಿನವನೇ?' ಎಂದು ರಾಧೆಯೊಡನೆ ಕೇಳಿದನು.

ಹೊಸ್ತಿಲ ಬಳಿಯಲ್ಲಿ ಒಳಗಡೆ ಕುಳಿತ ರಾಧಾಬಾಯಿ ಎದ್ದು ಹೊರಕ್ಕೆ ಬಂದು ಗೋಸಾಯಿಯ ಕಡೆಗೂ ಸೇಟಜಿಯ ಕಡೆಗೂ ನೋಡಿ 'ಇಲ್ಲ, ಅವನು ನನ್ನ ಬಂಧುವಲ್ಲ!' ಎಂದಳು.

**ಗೋಸಾಯಿ:**—ಹಾಗಾದರೆ ಅವನು ಇಲ್ಲೇನು ಮಾಡುತಿದ್ದಾನೆ?

**ರಾಧೆ:**—ಅವನು ತಕ್ಲಿಯಿಂದ ನೂಲನ್ನು ತೆಗೆಯುತ್ತಾನಲ್ಲವೆ?

**ಗೋಸಾಯಿ**:—ಸರಿ! ಅದು ನನ್ನ ಕಣ್ಣಿಗೆ ಕಾಣುತ್ತದೆ. ನನ್ನದು ಆ ಪ್ರಶ್ನೆಯಲ್ಲ. ಆತನು ಈ ಊರಿಗೆ ಯಾತಕ್ಕೆ ಬಂದಿದ್ದಾನೆ ಎಂದು ಕೇಳಿದೆ. ಕೆಲವು ಸಮಯದ ಹಿಂದೆ ಆತನನ್ನು ಕೆಲವು ಪೋಕರಿಗಳ ಜತೆಯಲ್ಲಿ ಕಂಡೆ. (ಆತನ ಕಡೆಗೆ ನೋಡಿ) ನಾನು ನಿನ್ನನ್ನು ಅಲ್ಲಿ ಕಂಡಿಲ್ಲವೆ?

**ಸೇಟಜೀ**:—ಹೌದು.

**ಗೋಸಾಯಿ**:—ಆಗ ನೀನು ನಾಸಿಕಕ್ಕೆ ಹೋಗುವವನೆಂದೆ.

**ಸೇಟಜೀ**:—ಆಗ ನನ್ನ ಉದ್ದೇಶ ಅದಾಗಿತ್ತು.

**ಗೋಸಾಯಿ**:—ಹಾಗಿದ್ದರೆ ಈಗ ಇಲ್ಲೇನು ಮಾಡುತ್ತಿ?

**ಸೇಟಜೀ**:—ಜೀವನಕ್ಕಾಗಿ ದುಡಿಯುತ್ತೇನೆ.

**ಗೋಸಾಯಿ**:—(ರಾಧೆಯ ಕಡೆಗೆ ನೋಡಿ) ಅದು ನಿಜವೇ?

**ರಾಧೆ**:—ಅದು ನಿಜ. ಆತನು ಸುಳ್ಳು ಏತಕ್ಕೆ ಹೇಳುವನು?

**ಗೋಸಾಯಿ**:—ಅವನು ನಿನ್ನ ಮನೆಯಲ್ಲಿ ಇದ್ದಾನೆಯೇ?

**ರಾಧೆ**:—ಹೌದು.

**ಗೋಸಾಯಿ**:—ಹಾಗಿದ್ದರೆ ನಿನ್ನನ್ನು ಆತನು ಸುಲಿಗೆ ಮಾಡಿಯಾನು. ಅವನ ಜತೆಯ ಪುಂಡರಿಗೆ ನಿನ್ನಲ್ಲಿ ಹಣವಿದೆ ಎಂದು ಹೇಳಿಕೊಟ್ಟಾನು. ಆ ದರೋಡೆಕಳ್ಳ ತಾಂತಿಯನ ಜತೆಯಲ್ಲಿ ಇದ್ದವನು ಅವನು. ಆ ಅಧಮ ತಾಂತಿಯನು ಅಲ್ಲಿ ಭಯಂಕರ ಕೊಲೆ ಮಾಡಿದನು. ಅಷ್ಟೆ ಅಲ್ಲ, ಸರಕಾರದವರಿಗೆ ಅವನನ್ನು ಗಲ್ಲಕ್ಕೇರಿಸುವ ಹಗ್ಗದ ಖರ್ಚು ಕಡಿಮೆ ಮಾಡುವಂತೆ ಆತ್ಮಹತ್ಯ ಮಾಡಿಕೊಂಡನು. ಈ ಮೋಸಗಾರನನ್ನು ನಿನ್ನ ಮನೆಯಿಂದ ಹೊರಗೆ ದೊಬ್ಬು, ಕಂಡ್ಯಾ!

**ಸೇಟಜೀ**:—(ಫಕ್ಕನೆ ತಲೆ ಎತ್ತಿ) ತಾಂತಿಯನನ್ನು ನಾನು ಕಂಡದ್ದು ಅದೇ ಮೊದಲು. ಆದರೆ ಅವನು ತುಂಬಾ ರೇಗುವುದಕ್ಕೆ ಸಾಕಷ್ಟು ಕಾರಣವಿತ್ತು. ಆ ಕೊಲೆ ನನ್ನ ಕಣ್ಣೆದುರಿಗೇ ನಡೆಯಿತು.

**ಗೋಸಾಯಿ:**—ಕೊಲೆ ನಿನ್ನ ಕಣ್ಣೆದುರಿಗೆ ಆಯಿತೇ? ಹಾಗಿದ್ದರೂ ನೀನು ಈ ಮನೆಯಲ್ಲಿ ಈಗ ವಾಸಮಾಡುತ್ತೀಯಾ?

**ಸೇಟಜೀ:**—ಮತ್ತೆ ನಾನು ಅಲ್ಲೆ ಇರಬೇಕೆಂದು ನಿಮ್ಮ ಆಸೆಯಿತ್ತೆ? ಅಲ್ಲಿ ಆದ ಕೊಲೆಯನ್ನು ನೋಡಿದವರಲ್ಲಿ ನಾನೊಬ್ಬನು. ಆ ಕೊಲೆಯು ನ್ಯಾಯವಾದ ಮುಯ್ಯಿಯೆಂದು ನನಗೆ ಕಂಡಿತು.

**ಗೋಸಾಯಿ:**—ಕೊಲೆಯು ನ್ಯಾಯವಾದದ್ದೆಂದು ಪ್ರತಿಪಾದಿಸುತ್ತಿಯಾ? (ರಾಧೆಯ ಕಡೆಗೆ ನೋಡಿ) ಇಂಥವನಿಗೆ—ಇಂಥ ನೀಚನಿಗೆ ನಿನ್ನ ಮನೆಯಲ್ಲಿ ಆಶ್ರಯ ಕೊಡುತ್ತಿಯಾ?

**ರಾಧೆ:**—ಇವನು ನೀಚನಲ್ಲ. ಆ ತಾಂತಿಯನೂ ನೀಚನೆಂದು ನನಗೆ ತೋರಲಿಲ್ಲ. ಅವನು ಎಷ್ಟೊ ಬಡ ಜನರಿಗೆ ದಾತಾರನಾಗಿದ್ದುದು ಕೇಳಿಬಲ್ಲೆ. ಆತನ ಕೂಸನ್ನು ಕೊಂದವನು ನಿಜವಾದ ಕೊಲೆಗಾರನೆನ್ನಬೇಕು.

**ಗೋಸಾಯಿ:**—'ನಿನ್ನ ಅಂಬೋಣ ಹಾಗಿದೆಯೋ? ಹಾಗಾದರೆ ನೀನು ಒಳ್ಳೆಯ ನಿಷ್ಠಾವಂತಳು, ಸಭ್ಯಳು.' ರಾಧೆಯು ಉತ್ತರ ಕೊಡದೆ ತನ್ನ ಹೊಲಿಗೆಯ ಕೆಲಸದಲ್ಲಿ ಮಗ್ನಳಾಗಿದ್ದಳು.

ಉನ್ಮತ್ತನಾದ ಗೋಸಾಯಿಯು ರಾಧೆಯ ಸ್ವಾಭಾವಿಕ ಅಂದಚೆಂದವನ್ನು ನೋಡಿ ತೀರಾ ಮುಗ್ಧನಾಗಿದ್ದನು. ಮಂತ್ರೋಪದೇಶಮಾಡುವ ನೆವದಿಂದ ಅವಳ ಮಾನಭಂಗಮಾಡಲು ಹೇಸುತ್ತಿರಲಿಲ್ಲ. ಅಂಥ ಕೆಲಸಕ್ಕೆ ಈ ಮುದುಕನು ಅಲ್ಲಿ ಇರೋಣವು ಕಂಟಕಪ್ರಾಯವಾಗಿತ್ತು! ಆದ್ದರಿಂದ ಆ ಕೊಲೆಯ ಸಮಾಚಾರವನ್ನು ಎತ್ತಿಕೊಂಡು—

**ಗೋಸಾಯಿ:**—'ಅನಿರೀಕ್ಷಿತ ಅಪಘಡಗಳು ಎಲ್ಲಿ ಸಂಭವಿಸುವುದಿಲ್ಲ? ಜೋರಿನಿಂದ ಹೋಗುವ ಮೋಟರಿನ ಮುಂದೆ ಒಂದು ಮಗು ಅಡ್ಡಯಿಸಿದರೆ ಅದಕ್ಕೆ ಅಪಾಯಬರುವುದರಲ್ಲಿ ತಪ್ಪೇನು? ದೇಸಾಯಿಯು ಮಹಾ ಶ್ರೀಮಂತನು. ತಾಂತಿಯನಿಗೆ ಆದ ನಷ್ಟಕ್ಕೆ ಕೈತುಂಬಾ ಹಣ ಕೊಡುತಿದ್ದನು.' ಈ ಮಾತನ್ನು ಕೇಳಿದೊಡನೆ ಸೇಟಜಿಯು ಎದ್ದು ನಿಂತು ನಡುಗುತ್ತ ಆರ್ತಸ್ವರದಿಂದ:—

**ಸೇಟಿಜೀ:**— ಏನು! ಜೀವಹಾನಿ ಮಾಡಿದ್ದಕ್ಕೆ ದುಡ್ಡಿನ ಪ್ರತಿಫಲವೇ? ಮಗುವಿನ ಪ್ರಾಣಕ್ಕೆ ದುಡ್ಡಿನ ಬೆಲೆಯೇ? ಆ ಮಗುವಿನ ಪ್ರೀತಿಗೆ ಪ್ರತಿಯಾಗಿ ದುಡ್ಡೇ? ನೀವು ಸಾಧುಗಳು, ಇಹದ ವಿಚಾರಗಳನ್ನೆಲ್ಲ ತ್ಯಜಿಸಿದವರು, ಪ್ರಾಚೀನ ಮಠದ ಅಧಿಪತಿಗಳು, ಸನಾತನಧರ್ಮದ ಸ್ತಂಭಗಳು ಎಂದು ಹೇಳಿಕೊಳ್ಳುವವರು. ನೀವೇ ಒಂದು ಜೀವದ ಬೆಲೆಯನ್ನು ದುಡ್ಡಿನ ರೂಪದಲ್ಲಿ ಕಟ್ಟುತ್ತೀರಾ? ಚೆನ್ನಾಯಿತು. ನಾನೊಬ್ಬನು ನೀವು ಹೇಳಿದಂತೆ ಪರದೇಶಿ, ಕಳ್ಳಕಾಕರ ಕೂಟದಲ್ಲಿರುವವನು; ಇರಲಿ. ಅದಕ್ಕೆ ಬದಲಾಗಿ ನಾನೊಬ್ಬ ಕೋಟ್ಯಾಧೀಶನೆ ಆಗಿದ್ದರೆ, ಆ ಮಗುವಿನ ಪ್ರಾಣನಷ್ಟವನ್ನು ದುಡ್ಡಿನಿಂದ ಭರ್ತಿಮಾಡುವ ಬದಲಾಗಿ ನಾನೇ ಆತ್ಮಹತ್ಯಮಾಡಿಕೊಳ್ಳುತಿದ್ದೆ. ನನ್ನ ಸ್ವಾರ್ಥಕ್ಕಾಗಿ ಇತರರನ್ನು ಬಲಿ ಹಾಕುತ್ತಿರಲಿಲ್ಲ. ನೀವು ಧರ್ಮಬೋಧಕರಂತೆ; ನಿಮ್ಮ ಧರ್ಮಗ್ರಂಥಗಳಲ್ಲಿ ಅಹಿಂಸೆಯೇ ಪರಮಧರ್ಮವೆಂದು ಸಾರುವುದಿಲ್ಲವೇ? ದೇವರ ಸೃಷ್ಟಿಯ ಒಂದೇ ಒಂದು ಪ್ರಾಣಿಯನ್ನಾದರೂ ನಿಷ್ಕಾರಣವಾಗಿ ನಾಶಪಡಿಸುವುದು ಧರ್ಮಕ್ಕೆ ವಿರೋಧವೆಂದು ಶಾಸ್ತ್ರಗಳು ಹೇಳುತ್ತವಂತೆ!'

ಗೋಸಾಯಿಯು ಈ ಮರ್ಮಭೇದಕ ವಾಕ್ಯಗಳಿಂದ ಕಿಡಿಕಿಡಿಯಾದನು. 'ನಮಗೆ ಧರ್ಮಬೋಧೆ ಮಾಡುವುದಕ್ಕೆ ನೀನಾರು?' ಎಂದು ದೊಡ್ಡ ಸ್ವರದಿಂದ ಕೇಳಿದನು.

ರಾಧೆಯು 'ಮಹಾರಾಜರೇ! ಈಗ ನೀವು ಬಿಡಾರಕ್ಕೆ ದಯಮಾಡಿಸಿ! ಈ ಮುದುಕನಿಗೆ ಎದೆರೋಗ ಉಂಟಂತೆ. ಅವನನ್ನು ಕೆಣಕಿದರೆ ಅವನ ಜೀವಕ್ಕೆ ಅಪಾಯ ಬಂದೀತು. ಅಂಥವನ ಹತ್ತಿರ ದೊಡ್ಡ ಮನುಷ್ಯರ ಪ್ರಶ್ನೆಯನ್ನು ಚರ್ಚಿಸಿ ಉಪಯೋಗವಿಲ್ಲ.'

**ಗೋಸಾಯಿ:**— ಹೇಗೂ ನಿನ್ನ ಮನೆಯಲ್ಲಿ ಇಂಥ ತುಂಟರಿಗೆ ಆಶ್ರಯಕೊಡುವುದು ಸರಿಯಲ್ಲ. ಈ ವಿಷಯದಲ್ಲಿ ಊರೆಲ್ಲ ನಾನು ಸಾರುವೆನು. ತಿಳಿದಿರಲಿ!

**ರಾಧೆ:**— ನಿಮಗೆ ಇಷ್ಟವಿದ್ದಂತೆ ಮಾಡಬಹುದು.

ಗೋಸಾಯಿಯು ಉರಿಮೊಗದಿಂದ ಮನೆಯನ್ನು ಇಳಿದು ಹೋದನು. ಇನ್ನೂ ಸಿಟ್ಟಿನಿಂದ ನಡುಗುತ್ತಿರುವ ಸೇಟಜಿಯನ್ನು ಕೈಹಿಡಿದು ಕುಳ್ಳಿರಿಸಿ ರಾಧೆ 'ತಾತಾ! ನಿನಗೆ ಎಂದೂ ಕಾಣದ ಸಿಟ್ಟು ಬಂತಲ್ಲ! ಅಷ್ಟೇಕೆ ಕಳವಳಗೊಂಡೆ!'

**ಸೇಟಜೀ:**—ಅಷ್ಟು ಸಿಟ್ಟು ನನಗೆ ಎಂದೆಂದಿಗೂ ಬರಲಿಲ್ಲ, ಒಂದು ಮಗುವಿನ ಜೀವಹೋದುದಕ್ಕೆ ಪ್ರತಿಫಲವಾಗಿ ಹಣಕೊಡುವುದೆಂದರೇನು? ಬಡವರ ಜೀವವೆಂದರೆ ಅಷ್ಟು ಅಲ್ಪವೇ, ಈ ದುಡ್ಡಿನ ಗುಲಾಮರಿಗೆ? ಕೂಸಿನ ಮೇಲಣ ಪ್ರೇಮವನ್ನು ದುಡ್ಡು ಕೊಟ್ಟು ಕೊಂಡುಕೊಳ್ಳುವುದು ಸಾಧ್ಯವೇ? ಒಬ್ಬನಿಗೆ ಎಷ್ಟೆ ದುಡ್ಡಿದ್ದರೂ ಅದರಿಂದ ಸುಖಪಡುವ ಮಕ್ಕಳು ಮರಿ ಇಲ್ಲದಿದ್ದರೆ ಏನು ಪ್ರಯೋಜನ? ನೀನೆ ಹೇಳು!

**ರಾಧೆ:**—'ದುಡ್ಡಿದ್ದು ಮಕ್ಕಳಿಲ್ಲದವನಿಗಿಂತಲೂ ಬಡವನಾಗಿ ತನ್ನ ತೊಡೆಯ ಮೇಲೆ ಮುದ್ದಾಡಿಸುವ ಮಕ್ಕಳಿದ್ದರೆ ಎಷ್ಟೊ ಸುಖ! ನನಗೂ ಒಮ್ಮೆ ಆ ಸುಖ ಬಂದೀತೆ ಎಂಬ ಆಸೆಯಿತ್ತು. ಆದರೆ ಇನ್ನು ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ. ಅಂತು ಮನುಷ್ಯನಿಗೆ ತನ್ನ ನಿಷ್ಕಾಮಪ್ರೇಮಕ್ಕೆ ಪಾತ್ರವಾದ ಒಂದು ವಸ್ತು ಇದ್ದೇ ತೀರಬೇಕು. ಇಲ್ಲವಾದರೆ ಜೀವನ ವೆಂಬುದು ತೀರಾ ಮರಳುಕಾಡಾಗುತ್ತದೆ. ಈಗ ನೋಡು! ನನ್ನ ತಂದೆಯಿರುವಾಗ ನನ್ನ ಪ್ರೇಮಪಾತ್ರವಾದ ವಸ್ತುವೊಂದು ನಮ್ಮ ಮನೆ ಯಲ್ಲಿಯೇ ಇತ್ತು. ಅವನು ಕಾಲವಾದನಂತರ ನನ್ನ ಜೀವನವೆಂಬುದು ಮರುಭೂಮಿಯಂತಾಯಿತು. ಆದರೆ ನೀನು ಇಲ್ಲಿಗೆ ಬಂದ ಮೇಲೆ— ಏನು ಋಣಾನುಬಂಧವೊ, ಅಪರಿಚಿತನಾದ ನಿನ್ನ ಆರೈಕೆಯಲ್ಲಿ ನನಗೆ ತಂದೆ ಕಳೆದು ಹೋದುದನ್ನು ನಾನು ಮರೆಯತೊಡಗಿದ್ದೆ. ಈಗ ಎಲ್ಲಾದರೂ ನೀನು ನಾಸಿಕಕ್ಕೆ ಹೊರಟುಬಿಡುವಿಯೊ ಎಂದು ನನಗೆ ದಿಗಿಲು.' ಇಷ್ಟು ಹೇಳುವಾಗ ರಾಧೆಯು ತನ್ನ ಕಣ್ಣುಗಳನ್ನು ಒರಸಿಕೊಳ್ಳುತಿದ್ದಳು.

ಸೇಟಜಿಯ ಎದೆಯೂ ದ್ರವಿಸಿತು. ಅವನು ಗದ್ಗದ ಸ್ವರದಿಂದ 'ಹೆದರಬೇಡ, ಮಗು! ನೀನೆ ನನ್ನ ಭಾಗ್ಯದೇವತೆ. ಮಕ್ಕಳುಮರಿಯಿಲ್ಲದ,

ಅನಾಥನಾದ ನನಗೆ ನೀನೆ ನನ್ನ ಮಗಳು ಎಂದು ತಿಳಿ. ನಾನು ಪೂರ್ವ ಜನ್ಮದಲ್ಲಿ ಮಾಡಿದ ಪುಣ್ಯಫಲದಿಂದ ನೀನು ಈ ವೃದ್ಧಾಪ್ಯದಲ್ಲಿ ನನಗೊಂದು ಊರುಗೋಲಾದೆ. ನಾನು ಮಹಾಸೌಭಾಗ್ಯಶಾಲಿಯೆಂದು ಗೋಪಾಲನೂ ಪದೇ ಪದೇ ಅನ್ನುತ್ತಾನೆ. ನೀನೊಂದು ಸಂಸಾರ ಮಾಡಿ ಸುಖವಾಗಿರುವುದನ್ನು ನೋಡಬೇಕೆಂದೇ ನನ್ನ ಆಸೆ.

**ರಾಧೆ**:—'ಛೆ! ಅದು ಬರೇ ಬಯಲಾಸೆ. ನನಗೆ ವಿವಾಹದ ಪ್ರಾಯ ದಾಟಿತು. ಇನ್ನು ಒಂಟಿಯಾಗಿಯೇ—' ಎಂದು ಕಣ್ಣೀರಿಕ್ಕಿದಳು.

**ಸೇಟಜೀ**:—ಹಾಗೆನ್ನ ಬೇಡಮ್ಮಾ! ನೀನು ವಿವಾಹಮಾಡಿಕೊಳ್ಳುವುದಾದರೆ ಅಂಥ ಭಾಗ್ಯಶಾಲಿಗಳು ಮುಂದೆ ಬಂದಾರು.

**ರಾಧೆ**:—ತಾತಾ! ನನ್ನನ್ನು ಸುಮ್ಮನೆ ಮರುಳುಗೊಳಿಸಬೇಡ, ಕಂಡ್ಯಾ!

**ಸೇಟಜೀ**:—ಇದು ನನ್ನದೊಂದೇ ಅಭಿಪ್ರಾಯವಲ್ಲ, ನಮ್ಮ ಗೋಪಾಲನದೂ ಹಾಗೆಯೇ.

**ರಾಧೆ**:—ಗೋಪಾಲ ಇನ್ನೂ ತರುಣ, ಅವನಿಗೆ ಲೋಕಾಚಾರದ ಅರಿವು ಇನ್ನೂ ಇಲ್ಲ.

**ಸೇಟಜೀ**:—ಆದರೆ ನೀನು ವಿವಾಹಿತಳಾಗುವೆಯೊ ಇಲ್ಲವೊ ಎಂದು ಅವನ ಸಂದೇಹ.

**ರಾಧೆ**:—'ಅವನು'—ಎಂದು ತಲೆತಗ್ಗಿಸಿ ಏನೊ ಹೊಲಿಯುವಂತೆ ಮೌನವಾದಳು.

**ಸೇಟಜೀ**:—ಹಾಗಲ್ಲ ಮಗು! ನೀನು ಅವನನ್ನು ಮದುವೆಯಾಗುವೆಯಾದರೆ—

**ರಾಧೆ**:—(ತಲೆತಗ್ಗಿಸಿಕೊಂಡು) ಗೋಪಾಲನು ವಿವಾಹಮಾಡಿಕೊಳ್ಳಬೇಕೆಂದಿದ್ದರೆ ಅವನಿಗೆ ಎಷ್ಟೋ ಅನುರೂಪರಾದ ಸ್ತ್ರೀಯರು ಸಿಗಬಹುದು. ಅವನಿಗೆ ಒಂದು ದಿನ ಅಲ್ಲ ಒಂದು ದಿನ ಪ್ರಖ್ಯಾತಿಬರುವುದು ಖಂಡಿತ. ಆಗ ಅವನನ್ನು ವಿವಾಹಮಾಡಿಕೊಳ್ಳಲಿಕ್ಕೆ—

**ಸೇಟಜೀ:**—ಆದರೆ ಅಂಥ ಅನುರೂಪಳಾದ ಸ್ತ್ರೀಯಲ್ಲಿ ನಿಜವಾದ ಪ್ರೇಮದ ಬೀಜವು ಮೊಳೆಯದಿದ್ದರೆ ಗೋಪಾಲನು ಸರ್ವಥಾ ಸುಖಿಯಾಗ ಲಾರನು.

**ರಾಧೆ:**—ಅವನ ಅಂತರ್ಯವನ್ನು ತಿಳಿದವರು ಅವನ ಪ್ರೇಮಪಾಶ ದಲ್ಲಿ ಬೀಳದೆ ಇರರು.

**ಸೇಟಜೀ:**—ಆ ವಿಮಲೆಯ ಕಥೆಯನ್ನು ಮರೆತೆಯಾ?

**ರಾಧೆ:**—ವಿಮಲೆಯು ಸ್ವಾರ್ಥದ ಪುಂಜ; ದುಷ್ಟೆ.

**ಸೇಟಜೀ:**-ಒಂದು ವೇಳೆ ಆತನಿಗೆ ನಿನ್ನನ್ನು ವರಿಸುವ ಆಸೆಯಿದ್ದರೆ-

ರಾಧೆ ನೀರವವಾಗಿ ಆ ಮಾತನ್ನು ಕೇಳದಂತೆ ಸುಮ್ಮನಿದ್ದು ಬಿಟ್ಟಳು. ಅವಳ ತಗ್ಗಿಸಿದ ಮುಖವು ಮಾತ್ರ ಕೆಂಪಡರಿತ್ತು. ಸೇಟಜಿಯು ಮತ್ತೆ ಮಾತನಾಡಲಿಲ್ಲ. ಆದರೆ ಕಮಲೆಗೆ ಆ ವಿಷಯವು ಅಸಮಾಧಾನ ವನ್ನು ಹುಟ್ಟಿಸಿತು ಎಂದು ಸೇಟಜಿಗೆ ಕಂಡುಬರಲಿಲ್ಲ. ಇವರಲ್ಲಿ ಒಬ್ಬರಿ ಗಾದರೂ ಧನಸಮೃದ್ಧಿ ಇದ್ದರೆ ಅಂಥ ವಿವಾಹವು ಸುಖಕರವಾಗುತಿತ್ತೊ ಇಲ್ಲವೊ ಎಂಬದು ಅವನಿಗೆ ಸಂದೇಹಕರವಾಗಿತ್ತು. 'ಇವರ ಹೃದಯ ದಲ್ಲಿ ಪ್ರಣಯದ ಬೀಜವು ಮೊಳೆತಿದ್ದರೆ ಅದನ್ನು ಕೆಡಿಸದೆ ಉಪಾಯದಿಂದ ಗೊಬ್ಬರ ಹಾಕಿ ಬೆಳೆಯಿಸಬೇಕು, ಅಂಥ ನಿಷ್ಕಾಮಪ್ರೇಮದಲ್ಲಿ ದ್ರವ್ಯದ ಲಾಂಛನ ತಟ್ಟಿದರೆ ಹಾಲಿನಲ್ಲಿ ವಿಷದ ಬೊಟ್ಟು ಬಿದ್ದ ಹಾಗೆ ಅವರ ಸಂಸಾರವೇ ವಿಷಮಯವಾಯಿತು, ದೇವರೆ! ಇವರು ಸರ್ವವಿಷಯ ಗಳಲ್ಲಿಯೂ ಒಬ್ಬರಿಗೊಬ್ಬರು ಅನುಕೂಲರಾಗಿಯೇ ಇದ್ದಾರೆ. ಇವರನ್ನು ಒಂದುಗೂಡಿಸಿ ಇವರ ಜೀವನವು ಲೋಕೋಪಕಾರಿಯಾಗುವಂತೆ ಮಾಡು' ಎಂದು ದೇವರನ್ನು ಬೇಡುತ್ತ ತನ್ನ ಕೋಣೆಗೆ ತೆರಳಿದನು.

---

## ೧೭ನೆ ಅಧ್ಯಾಯ

## ರಾಧೆಯ ಶಾಂತಚಿತ್ತ

ಗೋಸಾಯಿಯ ಪುರಾಣಪ್ರವಚನಗಳಿಗೆ ಬರುವ ಜನರ ಸಂಖ್ಯೆಯು ಬರಬರುತ್ತ ಕಡಿಮೆಯಾಯಿತು. ಕೊನೆಗೆ ದೇವಸ್ಥಾನದ ಅರ್ಚಕನು, ಪಾತಾಳಿ ಇವರು ಮಾತ್ರ ಇರುತಿದ್ದರು. ಅವರೂ ದೇವಸ್ಥಾನದ ಗರ್ಭ ಗೃಹದ ಬೀಗಮುದ್ರೆ ಮಾಡುವುದಕ್ಕೆ ಮಾತ್ರ ಹಿಂದುಳಿಯುತಿದ್ದರು. ಗೋಸಾಯಿಗೆ ರಾಧೆಯ ಮೇಲೆ ಮನಸ್ಸು ನಾಟಿತ್ತು. ಅವಳ ವಿಷಯ ಅರ್ಚಕನೊಡನೆ ಹೀಗೆ ಪ್ರಶ್ನಿಸಿದನು: —

**ಗೋಸಾಯಿ:**— ಅರ್ಚಕರೇ! ಆ ರಾಧಮ್ಮನನ್ನು ನೀವು ಬಲ್ಲಿರಾ? ಅವಳ ತಂದೆ ತಾಯಿ ಯಾರು! ಪಾಪ! ಒಂಟಿಯಾಗಿ ಅವಳು ಮನೆಯಲ್ಲಿ ಇರುವುದು ಯೋಗ್ಯವಲ್ಲ!

**ಅರ್ಚಕ:**— ಅವಳ ತಾಯಿ ಮೊದಲೇ ತೀರಿಹೋಗಿದ್ದಳು. ಅವಳ ತಂದೆ ಬಿದ್ದುಹೋಗಿ ಈಗ ಎರಡು ವರ್ಷಗಳಾದುವು. ಬಾಲವೈಧವ್ಯದ ಯೋಗವಿದೆ ಎಂದು ತಂದೆಯು ಅವಳಿಗೆ ವಿವಾಹ ಮಾಡಲಿಲ್ಲ. ಆದ್ದರಿಂದ ಅವನಿಗೆ ಜಾತಿಬಹಿಷ್ಕಾರವಾಯಿತು.

**ಗೋಸಾಯಿ:**— ಅಯ್ಯೋ ಪಾಪ! ಆದರೆ ಅವಳ ಮನೆಯಲ್ಲಿ ಆ ಮುದುಕನು ಯಾಕೆ ಇದ್ದಾನೆ! ಅವನು ಶುದ್ಧ ಪೋಕರಿ ಕೂಟದವ. ಅವನನ್ನು ತಾಂತಿಯನೊಂದಿಗೆ ಆ ಗಂಗಮ್ಮನ ಖಾನಾವಳಿಯಲ್ಲಿ ಕಂಡೆ. ಅನಂತರ ತಾಂತಿಯನು ಕೊಲೆಮಾಡಿದಾಗ ಆ ಖಾನಾವಳಿಯಲ್ಲಿಯೂ ಇವನು ಇದ್ದ.

**ಅರ್ಚಕ:**— ಅವನು ಸಮುದ್ರದ ಕಿನಾರೆಯ ಗುಡ್ಡದ ದಾರಿಯಲ್ಲಿ ಸ್ಮೃತಿ ತಪ್ಪಿ ಬಿದ್ದಿದ್ದನು. ಅವನು ಅನಾಥನೆಂದು ಗೊತ್ತಾಗಿ ಅವಳು ಅವನನ್ನು ಈಗ 6 ತಿಂಗಳಿಂದಲೂ ಸಾಕುತಿದ್ದಾಳೆ. ಅವನು ಅಂಥ ಪೋಕರಿ ಯಲ್ಲ, ಸಭ್ಯನೆಂದೆ ಎಲ್ಲರೂ ಅನ್ನುತ್ತಾರೆ.

**ಗೋಸಾಯಿ**:—'ಛೆ! ಛೆ! ಇಂಥ ಠಕ್ಕರು ಎಷ್ಟೊ ಮಂದಿ ಇದ್ದಾರೆ. ಅವನ ವಿಷಯವಾಗಿ ನಾನೆ ಅವಳಿಗೆ ಎಚ್ಚರಿಸುವೆನು.' ಹೀಗೆಂದು ಹೇಳಿ ಮರುದಿನ ಸಾಯಂಕಾಲ ಮುದುಕನು ಇಲ್ಲದಿರುವ ಸಮಯ ನೋಡಿ ಅವನು ತೋಟದ ಬಾಗಿಲನ್ನು ತಳ್ಳಿ ರಾಧೆಯ ಮನೆಯೊಳಕ್ಕೆ ಕಾಲಿಟ್ಟನು.

ಆಗ ಉಚ್ಚಸ್ವರದಿಂದ ಹಾಡುವ ಹೆಣ್ಣು ಸ್ವರವು ಕೇಳಿಸಿತು. 'ಕಂಠವು ಚೆನ್ನಾಗಿದೆ' ಎಂದು ಗೋಸಾಯಿಯು ಶಬ್ದ ಮಾಡದೆ ನಿಧಾನ ವಾಗಿ ಕಾಲಿಡುತಿದ್ದನು. ಹಾಡು ಪುರಂದರದಾಸರ ಕೀರ್ತನೆಯಿಂದ; ಹೀಗಿತ್ತು:—

ಉದರವೈರಾಗ್ಯವಿದು ನಮ್ಮ<br>
ಪದುಮನಾಭನಲ್ಲಿ ಲೇಶಭಕುತಿಯಿಲ್ಲ ॥<br>
ಕರದಲಿ ಜಪಮಣಿ ಬಾಯಲಿ ಮಂತ್ರವು<br>
ಅರಿವೆ ಮುಸುಕು ಮೋರೆಗೆ ಹಾಕಿ<br>
ಪರಸತಿಯರ ಗುಣ ಮನದಲಿ ಸ್ಮರಿಸುತ<br>
ಪರಮವೈರಾಗ್ಯಶಾಲಿಯೆಂದೆನಿಪುದು ॥

**ಗೋಸಾಯಿ**:—(ತನ್ನ ಮನಸ್ಸಿನಲ್ಲಿ) 'ಛೆ! ಛೆ! ಪರಸತಿಯೆಂಬ ಭಾವನೆಯಿದ್ದರೆ ಮಾತ್ರ ಈ ಮಾತು. ರಾಧೆ! ನೀನು ಪರಸತಿಯಲ್ಲ. ನೀನು ನನ್ನವಳೆ ಎಂದು ನಂಬಿದ್ದೇನೆ' ಎಂದು ಮೊಗಸಾಲೆಯ ಮೆಟ್ಟಲನ್ನು ಹತ್ತಿ—

'ರಾಧೆ! ಆ ಮುದುಕನನ್ನು ಓಡಿಸಿದೆಯಾ! ಚೆನ್ನಾಯಿತು. ನೀನು ಯಾಕೆ ದೇವಸ್ಥಾನದಲ್ಲಿ ಪುರಾಣಕ್ಕೆ ಬರುವುದಿಲ್ಲ?'

**ರಾಧೆ**:—(ಎದ್ದು ನಿಂತು) ಮನೆಯಲ್ಲಿ ಕೆಲಸ, ಶಾಲೆಯಲ್ಲಿ ಕೆಲಸ ಅನ್ನುವಾಗ ನನಗೆ ವಿರಾಮವೇ ಸಿಗುವುದಿಲ್ಲ. ಅಷ್ಟೆ!

**ಗೋಸಾಯಿ**:—'ನಿನ್ನ ದೇಹವು ಇಂಥ ಕೆಲಸಬೊಗಸೆಗಳಿಂದ ದಣಿಯಬೇಕಿಲ್ಲ. ನೀನು ನಮ್ಮ ಮಠಕ್ಕೆ ಬಾ. ನಾನು ಇನ್ನು ಕೆಲವು ದಿನಗಳಲ್ಲಿ ಇಲ್ಲಿಂದ ನಮ್ಮೂರಿಗೆ ಹೊರಡಲಿರುವೆನು. ಪಲ್ಲಕಿಯನ್ನು ನಿನಗಾಗಿ ಕಳುಹಿಸುವೆನು. ನಮ್ಮಿಂದ ಮಂತ್ರೋಪದೇಶ ಪಡೆದು ಎಷ್ಟೊ

ಸ್ತ್ರೀಪುರುಷರು ಧನ್ಯರಾಗಿದ್ದಾರೆ. ನೀನು ಇನ್ನೂ ಅವಿವಾಹಿತೆಯಾಗಿದ್ದುದೇ ದೋಷಕರ, ಪಾಪಕರ. ಆದ್ದರಿಂದ ಈ ಪಾಪಕ್ಕೆ ಪರಿಹಾರವಾಗಿ ನೀನು ನನ್ನಿಂದ ಮಂತ್ರೋಪದೇಶ ಪಡೆದು ಧನ್ಯಳಾಗು.' ಎಂದು ಪ್ರಣಯದೃಷ್ಟಿಯನ್ನು ಅವಳ ಕಡೆಗೆ ಬೀರಿದನು.

**ರಾಧೆ:**—(ನಾಚಿಕೆಯಿಂದ ತಲೆಯನ್ನು ತಗ್ಗಿಸಿ) ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹಾಗೆ ಹೇಳುವುದಿಲ್ಲ.

**ಗೋಸಾಯಿ:**—ಓಹೊ! ಶಾಸ್ತ್ರಗಳ ಅರಿವು ಸ್ವಲ್ಪವೂ ಇಲ್ಲದ ನಿನಗೆ ಭಗವದ್ಗೀತೆಯಂತಹ ಉಕ್ಕಿನ ಕಡಲೆಯ ಸಮಾಚಾರವೇಕೆ? ನಿಮ್ಮಂಥವರಿಗೆ ಭಜನೆಪುರಾಣಗಳ ಶ್ರವಣದಿಂದಲೇ ಮುಕ್ತಿ.

**ರಾಧೆ:**—ಸಿಟ್ಟು ಮಾಡಬೇಡಿ. ಮುಕ್ತಿಯ ಬಾಗಿಲ ಬೀಗದ ಕೈ ನಿಮ್ಮಂಥವರ ಕೈಯಲ್ಲಿ ಕೊಟ್ಟಿಲ್ಲ. ಮನುಷ್ಯನು ತನ್ನ ಕರ್ಮದ ಫಲವಾಗಿಯೇ ಮುಕ್ತಿ-ನರಕಗಳ ದಾರಿಯನ್ನು ಕಡಿದುಕೊಳ್ಳುತ್ತಾನೆ ಎಂದು ನನ್ನಪ್ಪ ಪದೇ ಪದೇ ಹೇಳುತಿದ್ದ.

ಗೋಸಾಯಿಯು ಸಿಟ್ಟು ತಡೆಯಲಾರದೆ 'ಏನು ಒರಟು ಮಾತು? ಅವಿಚಾರದ ಮಾತು?' ಎಂದು ಹೇಳಿ ನೆಟ್ಟಗೆ ಅವಳನ್ನು ಸಮೀಪಿಸಿ 'ರಾಧಾ! ನಿನ್ನ ಸುಖದ ವೃಕ್ಷಕ್ಕೆ ಕೊಡಲಿ ಇಡಬೇಡ!' ಎಂದು ಅವಳ ಕೈ ಹಿಡಿಯಲು ಹೋದನು. ಅವಳು ಸಿಂಹಿಣಿಯಂತೆ ಗರ್ಜಿಸಿ, ಅವನ ಕೈಯನ್ನು ತಪ್ಪಿಸಿಕೊಂಡು, 'ಮೂಢಾ! ಏಕಾಕಿನಿಯಾದ ಅಬಲೆಯ ಮೇಲೆ ಅತ್ಯಾಚಾರ ಮಾಡಲು ಮುಂದರಿಸಿದ ಕಳ್ಳ! ತೊಲಗು ಇಲ್ಲಿಂದ, ಇಲ್ಲವಾದರೆ ಬೀದಿಯ ಜನರನ್ನು ಕೂಗಿ ಕರೆಯುವೆನು' ಎಂದು ಒಳಕ್ಕೆ ಕಾಲಿಟ್ಟು, ಬಾಗಿಲನ್ನು ಮುಚ್ಚಲು ಯತ್ನಿಸಿದಳು. ಹತಾಶನಾದ ಗೋಸಾಯಿಯು 'ನನ್ನ ಸೇಡಿನ ತೀಕ್ಷ್ಣತೆಯನ್ನು ನೀನು ಬೇಗನೆ ತಿಳಿಯುವೆ!' ಎಂದು ಕಿಡಿಕಿಡಿಯಾಗುತ್ತ ಮೆಟ್ಟಲನ್ನು ಇಳಿದು, ಹಿತ್ತಿಲನ್ನು ದಾಟಿ, ಬೀದಿಗೆ ಇಳಿದು ಹೋದನು.

ಅಂದಿನಿಂದ ಗುಟ್ಟಿನಲ್ಲಿ ಒಬ್ಬಿಬ್ಬರೊಡನೆ ರಾಧಾಬಾಯಿಯ ವರ್ತನವನ್ನು ಕುರಿತು ಸುಳ್ಳು ಅಪವಾದಗಳನ್ನು ಹೊರಿಸಲು ಗೋಸಾಯಿಯು

ತೊಡಗಿದನು. ಆದರೆ ಆ ಹಳ್ಳಿಯವರೆಲ್ಲ ಸಾಮಾನ್ಯ ಜನಗಳು; ಅವರಿಗೆ ಈಗ ಕೆಲವು ವರ್ಷಗಳಿಂದಲೂ ರಾಧಾಬಾಯಿಯ ಪರಿಚಯವಿದ್ದುದರಿಂದ ಅವರ ಮನಸ್ಸು ಕದಡಲಿಲ್ಲ. ಆದರೆ ಶಕುನದ ಸಂಕಮ್ಮನಿಗೆ ಮಾತ್ರ ಗೋಸಾಯಿಯ ಮೇಲೆ ಏನೇನೂ ಸಮಾಧಾನವಿರಲಿಲ್ಲ. ಒಂದು ದಿನ ಅವಳು ಮಧ್ಯಾಹ್ನದ ಬಿಸಿಲಿಗೆ ಓಡಿ ಬಂದು 'ರಾಧಮ್ಮಾ ಕೇಳಿದಿಯಾ! ಆ ಷಂಡ ಗೋಸಾಯಿಯು ಬಂದ ದಿನ ಒಂದು ಗೂಬೆ ದೇವಸ್ಥಾನದ ಹೊರಗಿನ ಮರದ ಮೇಲೆ ಕುಳಿತು ರಾತ್ರಿಯಲ್ಲಿ ಕೂಗಿತು. ಆಗಲೇ ನಮ್ಮ ಊರಿಗೆ ಏನೊ ಅನಿಷ್ಟ ಪ್ರಾಪ್ತಿ ಎಂದು ನಾನು ನಮ್ಮವರ ಬಳಿಯಲ್ಲಿ ಹೇಳಿದೆ. ಅವರೆಂದರೆ ಬಿಳೇ ಸುಣ್ಣದ ನೀರು ಕಂಡರೆ ಹಾಲೆನ್ನುವವರು. ಅವರಿಗೆ ನನ್ನ ಮಾತಿನ ಮೇಲೆ ವಿಶ್ವಾಸವಿರಲಿಲ್ಲ. ಇಗೊ! ಗೋಸಾಯಿ ಬಂದದ್ದೆ ತಡ! ಅವನ ಭಜನೆ ಪುರಾಣ ಕೇಳಲಿಕ್ಕೆ ಬಾರದಿದ್ದ ಅವನ ವಕ್ಲಿಗಳಿಗೆಲ್ಲ ಬಾಡಿಗೆ ಏರಿಸಿದ್ದೇನೆಂದು ಕಠಿಣ ಅಪ್ಪಣೆ! ಆದರೂ ಅವರು ಪುರಾಣಕ್ಕೆ ಹೋಗುವುದಿಲ್ಲ. ಇನ್ನು ಅವರೆಲ್ಲರ ಮೇಲೆ ದಾವೆ ಮಾಡಿಸುತ್ತಾರೋ ಏನೊ? ಅದನ್ನು ಕೇಳಿ ನಮ್ಮ ಗೋಪಾಲರಾಯನು ದೇವಸ್ಥಾನದ ಕಟ್ಟೆಯ ಮೇಲೆ ದೊಡ್ಡದೊಂದು—ಅದೆಂಥದ್ದು—'

**ರಾಧೆ:**—(ನಸುನಕ್ಕು) ಭಾಷಣವೇ?

**ಸಂಕಮ್ಮ:**—'ಹೌದು ಹೌದು! ಈ ಹಾಳು ಶಬ್ದಗಳು ನಮ್ಮಂಥವರ ಬಾಯಿಗೆ ಬರುತ್ತವೆಯೇ? ಭಾ-ಷಣ ಮಾಡಿದರು. ಜನರೆಲ್ಲ ಕೇಳಿ ಹುರಿದುಂಬಿದರು. ಗೋಸಾಯಿಯ ಬಳಿಗೆ ತಾನೇ ಹೋಗಿ ಮಾತಾಡುತ್ತೇನೆಂದು ಗೋಪಾಲರಾಯರು ಹೇಳಿದರು. ಇನ್ನೇನೇನು ಕಷ್ಟಗಳು ಬರುತ್ತವೊ, ಏನೊ?' ಎಂದು ಹೇಳಿ 'ನಮ್ಮವರು ಮನೆಗೆ ಊಟಕ್ಕೆ ಬರುವ ಹೊತ್ತಾಯಿತು, ಇನ್ನೊಮ್ಮೆ ಸಿಗುತ್ತೇನೆ' ಎಂದು ಮರಳಿ ಮನೆಗೆ ಓಡಿದಳು.

ಸಾಯಂಕಾಲ ಗೋಪಾಲನು ಬಂದಾಗ ಈ ವಿಷಯವನ್ನು ರಾಧೆಯು ಆತನೊಡನೆ ಹೇಳಿದಳು. ಆಗ ಆತನು 'ಹೌದು! ಆ ಗೋಸಾಯಿಗೆ ಒಮ್ಮೆ ಒದ್ದು ಹೊರಗೆ ಹೊರಡಿಸಲೇ ಎಂದು ಮನಸ್ಸಿನಲ್ಲಿ ಕುದಿಯುತ್ತದೆ.' ಎಂದನು.

**ಸೇಟಜೀ:**—ಹಾ! ನಿಮ್ಮ ಧೈರ್ಯವೆ!

**ಗೋಪಾಲ:**—ನನಗೆ ಅವನ ಹೆದರಿಕೆಯಾದರೂ ಏನು? ನಾನು ಮುಂಬಯಿಯಲ್ಲಿ ಪತ್ರಿಕೆಯ ಉಪಸಂಪಾದಕನಾಗಿದ್ದೆ. ಇಂಥ ಗೋಸಾಯಿಗಳನೇಕರ ಸಮಾಚಾರ ನನಗೆ ಗೊತ್ತಿದೆ, ಅವರು ಅವರ ದೀಕ್ಷೆಯಂತೆ ಸದಾಚಾರಿಗಳಾಗಿರುವ ಬದಲಾಗಿ ಅನೇಕ ವಿಧದ ದುಷ್ಟ ಆಚಾರಗಳಲ್ಲಿ ಮಗ್ನರಾಗಿದ್ದಾರೆ. ಈಗಲೂ 'ನೀನು ಸುಮ್ಮನಿರದಿದ್ದರೆ ಮುಂಬಾಯಿಯ ಪತ್ರಿಕೆಯಲ್ಲಿ ನಿನ್ನ ಜೀವನಚರಿತ್ರೆಯನ್ನೆಲ್ಲ ಬರೆದು ಜನರಿಗೆ ಎಚ್ಚರಿಸುವೆನು' ಎಂದೆ. ನನ್ನನ್ನು ಚುರಚುರನೆ ದೃಷ್ಟಿಸಿ ಆತನು ಒಮ್ಮೆ ನೋಡಿದನು. ಕೊನೆಗೆ ತಲೆತಗ್ಗಿಸಿ ತನ್ನ ಬಿಡಾರದೊಳಕ್ಕೆ ಹೋದನು.

ರಾಧೆಯೂ ಸೇಟಜಿಯೂ ಈ ಮಾತುಗಳನ್ನು ಕೇಳಿ ಗಹಗಹಿಸಿ ನಕ್ಕರು. ಆ ಮೇಲೆ ಗೋಪಾಲನು 'ಕೇಳಿದಿರಾ ಈ ಸಮಾಚಾರ! ಆ ವಿಮಲೆಯು ಗಾಳ ಹಾಕಿದ ಜಬ್ಬನು ವಿಲಾಯತಿಗೆ ಹೋದ ಮೇಲೆ ಅವನ ಸಮಾಚಾರವೇ ಇಲ್ಲವಂತೆ! ಅವನು ಎಲ್ಲಿಯೊ ಸತ್ತಿರಬೇಕೆಂದು ಪತ್ರಿಕೆಗಳ ಊಹನೆ! ಅವನ ಸೊಲಿಸಿಟರ್ 'ಅವನು ಸತ್ತಿಲ್ಲ, ಆ ವರ್ತಮಾನ ಸುಳ್ಳು' ಎಂದು ಪತ್ರಿಕೆಯಲ್ಲಿ ಪ್ರಕಟಿಸಿರುವನಂತೆ! ಅಷ್ಟು ಹೆಸರುಗೊಂಡ ಮನುಷ್ಯನ ಪತ್ತೆಯಿಲ್ಲವೆಂದರೆ, ಎಲ್ಲಿಯೊ ಏಕಾಂಗಿಯಾಗಿ ಹೋಗುವಾಗ ವಿಲಾಯತಿಯ ಚತುರ ಕಳ್ಳರು ಅವನನ್ನು ಸುಲಿದು ಕೊಂದುಹಾಕಿರಬೇಕು!'

**ಸೇಟಜೀ:**—(ಮುಖಚಹರೆಯನ್ನು ಬದಲಾಯಿಸದೆ)—ಅವನಿಗೆ ಉತ್ತರಾಧಿಕಾರಿಗಳು ಯಾರೂ ಇಲ್ಲವೇ?

**ಗೋಪಾಲ:**—ಯಾರೂ ಇಲ್ಲವಂತೆ. ಇದ್ದ ಮಕ್ಕಳು ಬಾಲ್ಯದಲ್ಲಿ ಮಡಿದಿರುವರಂತೆ! ಅಷ್ಟು ಅಸಂಖ್ಯಾತವಾದ ಹಣವಿದ್ದವನು ಅದರ ವ್ಯವಸ್ಥೆ ಮಾಡದೆ ಇರುವನೆ? ಅವನ ಸೊಲಿಸಿಟರು ಆ ವಿಷಯದಲ್ಲಿ ನಿಗಾ ತಕ್ಕೊಂಡಿರಬೇಕು. ಆದರೆ ಆ ವಿಮಲೆಗೆ ಅವನು ವೀಲಿನಲ್ಲಿ ಏನಾದರೂ ಕೊಟ್ಟುಬಿಡದೆ ಇದ್ದಲ್ಲಿ ಅವಳ ಗತಿ ಏನು?

**ಸೇಟಜೀ:**—ಗತಿ ಏನು, ಗೋದಿ ಬೀಸೋದೆ!

ಅಷ್ಟು ಮಾತುಗಳು ನಡೆಯುವಷ್ಟರಲ್ಲಿ ಸುಬ್ಬಾಭಟ್ಟನು ಓಡಿ ಓಡಿ ಬಂದೇ ಬಿಟ್ಟನು. 'ಕೇಳಿದಿರಾ ಹೊಸ ವರ್ತಮಾನ! ಆ ದುರುಳ ಗೋಸಾಯಿಯು ದೇವಸ್ಥಾನದಲ್ಲಿ ಹೂಮಾಲೆ ಕಟ್ಟುವವಳ ಮಗಳನ್ನು ಕದ್ದು ಕೊಂಡು ನಿನ್ನೆ ರಾತ್ರಿಯಲ್ಲಿಯೇ ಓಡಿಹೋದನಂತೆ! ಒಳ್ಳೆ ಗೋಸಾಯಿ! ಕಿ! ಕಿ! ಕಿ! ದೇವಸ್ಥಾನದಲ್ಲೆಲ್ಲ ಬೊಬ್ಬೆ ಬಿದ್ದಿದೆ. ಹಿ! ಹಿ! ಹಿ! ಅವನು ಇಲ್ಲಿ ಇನ್ನು ಒಂದೆರಡು ದಿನ ಉಳಿದಿದ್ದರೆ ಅವಳ ಗಂಡನು ಅವನನ್ನು ಕೊಲೆ ಮಾಡುತಿದ್ದನು. ಹಿ! ಹಿ! ಹಿ! ನನಗೊಂದಿಷ್ಟು ಕಟ್ಟಿಗೆ ಖರ್ಚಾಗುತಿತ್ತು. ಹಿ! ಹಿ! ಹಿ! ಆದರೆ ಮರೆತೆ! ಅವನು ಗೋಸಾಯಿಯಾದುದರಿಂದ ಅವನನ್ನು ಹೊಂಡದಲ್ಲಿ ಹೂಳಬೇಕಲ್ಲ. ಹಾ! ಹಾ! ಹಾ! ಅವನ ವಾರಾಂಗನೆಯೊಬ್ಬಳು ಅವನನ್ನು ಹುಡುಕಿ ಬಂದಿದ್ದಳಂತೆ' ಎಂದು ನಗತೊಡಗಿದನು. ಅವರೆಲ್ಲರೂ ಇದೇ ವಿಷಯವನ್ನು ಕೊಂಚ ಹೊತ್ತು ಚರ್ಚಿಸಿದರು. ಆ ಮೇಲೆ ಸುಬ್ಬಾ ಭಟ್ಟನೂ ಗೋಪಾಲನೂ ಅಲ್ಲಿಂದ ಹೊರಟರು. ರಾಧೆಯೂ ಅಡಿಗೆ ಮನೆಗೆ ಹೋದಳು. ಸೇಟಜಿಯು ಜಗಲಿಯಲ್ಲೆ ಕುಳಿತು ಹೀಗೆ ಯೋಚಿಸ ತೊಡಗಿದನು:—

'ರಾಧೆ ಗೋಪಾಲ ಇವರಿಬ್ಬರು ಏಕರೀತಿಯ ಸ್ವಭಾವದವರು. ಅವರ ದೃಷ್ಟಿಯಲ್ಲಿ ನಾನು ತೀರಾ ಬಡವನಾದ ನಿರಾಧಾರಿಯಾದೊಬ್ಬ ಮುದುಕನು. ಇವರಿಗೆ ನಾನು ಯಾರೆಂದು ತಿಳಿಸಲೇ? ಅವರು ಸರ್ವಥಾ ನಂಬಲಾರರು. ಒಂದು ವೇಳೆ ಪ್ರಯತ್ನದಿಂದ ನನ್ನ ಮಾತನ್ನು ನಂಬುವಂತೆ ಮಾಡಿದರೆ ಅವರು ತಮ್ಮನ್ನು ನಾನು ಮೋಸಮಾಡಿದೆನೆಂದು ರೇಗಿಬೀಳುವರು. ಇವರನ್ನು ಹೀಗೆ ಕೊನೆಯ ವರೆಗೆ ಮೋಸಪಡಿಸುವುದು ಉಚಿತವೇ? ಎಷ್ಟೋ ಜನರು ನನ್ನ ದುಡ್ಡಿನ ಮೇಲಣ ಅಭಿಮಾನದಿಂದ—ನನ್ನ ಮೇಲಣ ಅಭಿಮಾನದಿಂದಲ್ಲ—ನನ್ನ ತಾಳಕ್ಕೆ ಕುಣಿಯುತಿದ್ದರು. ಅಂಥವರು ನಿಜ ವಾಗಿಯೂ ಠಕ್ಕರು. ಇವರು ಹಾಗಲ್ಲ. ನನ್ನಿಂದ ಏನೊಂದು ಪ್ರತಿಫಲ ಹಾರೈಸದಿದ್ದರೂ ಇಷ್ಟು ಪ್ರೀತಿಯಿಂದ ನನ್ನನ್ನು ಕಾಣುತ್ತಾರೆ. ಇಂಥವರಿಗೆ ನನ್ನಲ್ಲಿಯ ಬಡತನ, ವೃದ್ಧಾಪ್ಯದ ನಿಶ್ಶಕ್ತಿ ಇವುಗಳೇ ಕನಿಕರ ಹುಟ್ಟಿಸುತ್ತವೆ, ಎದೆಕರಗಿಸುತ್ತಿವೆ. ಇಂಥ ಎರಡು ನಿಸ್ಪೃಹರಾದ ವ್ಯಕ್ತಿಗಳು-ದೇವರ ಸೃಷ್ಟಿ

ಯಲ್ಲಿ ಒಬ್ಬರಿಗಾಗಿ ಇನ್ನೊಬ್ಬರು ಸಿದ್ಧಮಾಡಲ್ಪಟ್ಟಂತೆ—ನನ್ನಿಂದ ಇವರ ಸಮಾಗಮ—ನನ್ನ ಮೂಲಕ ಪರಸ್ಪರ ಪರಿಚಿತಿಯನ್ನು ಮಾಡಿಕೊಂಡರು. ಅಷ್ಟೆ ಅಲ್ಲ, ಪರಸ್ಪರ ಪ್ರಣಯಿಗಳಾಗಿರುವರು. ಇಂಥವರನ್ನು ಒಂದು ಕುಟುಂಬವಾಗಿ ಒಂದುಗೂಡಿಸಿದರೆ ನನ್ನ ಜನ್ಮದಲ್ಲಿ ಒಂದಾದರೂ ಪುಣ್ಯ ಕಾರ್ಯವನ್ನು ಮಾಡಿದಂತಾಗುವುದು. ಇದು ದೈವಸಂಕಲ್ಪವೇ ಆಗಿರ ಬಹುದೇ? ಕೋಟ್ಯಾಧೀಶನಾಗಿ ಕುಬೇರಪುತ್ರನಂತೆ ಐಶ್ವರ್ಯದಲ್ಲಿ ಮುಳು ಗಿದ್ದರೂ ಒಂದೇ ಒಂದು ದಿನ ನಿಜವಾದ ಪ್ರೇಮ—ನಿಷ್ಕಲಂಕವಾದ ಪ್ರೇಮ ವೇನೆಂದು ಕನಸಿನಲ್ಲಿಯೂ ಕಾಣದಿದ್ದ ನನಗೆ—ನನ್ನ ಸರ್ವಾದಿಯನ್ನು ಇಲ್ಲಿ ಬಿಟ್ಟು ಇನ್ನೊಂದು ಲೋಕಕ್ಕೆ ತೊಲಗುವಾಗ ಇಂಥ ನಿಷ್ಕಾಮಪ್ರೇಮ ವನ್ನು ಒಂದುಗೂಡಿಸಿದ ಸ್ವರ್ಗೀಯ ಸುಖವು ನನ್ನ ಪಾಲಿಗೆ ಬರುವುದೇ? ಹಾಗಿದ್ದರೆ ನಾನು ಧನ್ಯನು! ಇಂದಿಗೆ ಖಂಡಿತವಾಗಿಯೂ ಧನ್ಯನು! ಶ್ರೀಮಂತರಲ್ಲಿ ಕಾಣದ ಭಾಗ್ಯವನ್ನು ಬಡವರಲ್ಲಿ ಕಂಡುಹಿಡಿದ ನಾನು ನಿಶ್ಚಯವಾಗಿಯೂ ಧನ್ಯನು!'

ಎನ್ನುವಷ್ಟರಲ್ಲಿ ಅವನ ಚಿಕ್ಕ ನಾಯಿಯು ಮೆಲ್ಲಗೆ ಹಾರಿ ಅವನ ತೊಡೆಗಳ ಮೇಲೆ ಕುಳಿತು ಅವನ ಕೈಗಳನ್ನು ನೆಕ್ಕತೊಡಗಿತು. ಆಗ ಆತನು 'ರಾಜಾ! ನೀನು ನನಗೆ ಪ್ರಥಮದ ಗೆಳೆಯನು. ನಿನಗೆ ನನ್ನ ಮೀಲಿನಲ್ಲಿ ಏನನ್ನು ಕೊಡಲಿ! ನಿನಗೆ ದ್ರವ್ಯದ ಮೇಲೆ ಆಸೆಯಿಲ್ಲ. ದ್ರವ್ಯ ಕೊಟ್ಟು ನಿನ್ನ ಮೊದಲಿನ ಯಜಮಾನನು—ಅವನು ಯಾರೊ ಪುಣ್ಯಾತ್ಮ!-ನಿನ್ನನ್ನು ಕೊಂಡುಕೊಂಡನು. ಆದರೆ ಆ ದ್ರವ್ಯವು ನಿನ್ನನ್ನು ಅವನ ಬಳಿಯಲ್ಲಿ ಉಳಿಸಲಿಲ್ಲ. ದೈವವಶಾತ್ ನನ್ನ ಕೈ ಸೇರಿದೆ. ನಿನ್ನಿಂದಲೆ ನನ್ನ ಜೀವ ಉಳಿಯಿತು. ಈ ಸಾಧ್ವಿಯ ಪರಿಚಯವಾಯಿತು. ಇಲ್ಲಿಯೇ ನಾನು ಈ ವರೆಗೆ ಅನುಭವಿಸದ ಭೂತದಯೆ—ಅನುತಾಪಗಳ ಪರಿಚಯವನ್ನು ಮಾಡಿಕೊಂಡೆ. ನನ್ನ ಧನವನ್ನೆಲ್ಲ ವೆಚ್ಚಮಾಡಿ ನಾನು ದಿಗ್ದೇಶಗಳಲ್ಲಿ ಸುತ್ತಾಡಿದರೂ ಇದು ನನಗೆ ಸರ್ವಥಾ ಲಭಿಸುತ್ತಿರಲಿಲ್ಲ.'

ಅಷ್ಟರಲ್ಲಿ 'ತಾತಾ! ಹಾಲು ಬಿಸಿಯಾಗಿದೆ. ಒಂದಿಷ್ಟು ಕುಡಿದು ನಿದ್ದೆಮಾಡು' ಎಂದು ಹೇಳುತ್ತ ರಾಧೆಯು ಮೊಗಸಾಲೆಗೆ ಬಂದಳು.

ಅವಳು 'ಅಪರಾಧಿ ನಾನಲ್ಲ, ಅಪರಾಧವೆನಗಿಲ್ಲ, ಕಪಟನಾಟಕಸೂತ್ರ ಧಾರಿ ನೀನೆ' ಎಂದು ಸಣ್ಣ ಸ್ವರದಿಂದ ಹಾಡುತ್ತ ಬಂದಳು. ಸೇಟಜಿಯು 'ಮಗು! ನೀನು ಯಾವಾಗಲೂ ಹಾಡುತ್ತ ಇರುವುದನ್ನು ನೋಡಲು ನನಗೆ ತುಂಬಾ ಸುಖವಾಗುತ್ತಿದೆ. ನಿನ್ನಲ್ಲಿ ತೃಪ್ತಿ ಶಾಂತಿ ಎಂಬ ಎರಡು ಅಪರಿ ಮಿತ ದ್ರವ್ಯಗಳು ಇರುವುದರಿಂದಲೇ ಹಾಗೆ ಹಾಡು ತಾನಾಗಿಯೇ ಬರು ತ್ತದೆ. ಇಂಥ ಸುಖದ ಮನೆಯನ್ನು ನಾನೆಲ್ಲಿಯೂ ಕಾಣಲಿಲ್ಲ!' ಎಂದನು. 'ತಾತಾ! ನನ್ನ ಈ ಬಡ ಮನೆಯನ್ನು ಬರಿದೆ ಹೊಗಳಬೇಡ. ನಿನಗೆ ಇಲ್ಲಿ ಸುಖವಾಗಿದೆ ಎಂದು ನೆನಸಿ ಹೀಗೆ ಹೇಳುತ್ತಿಯೆ! ನಿನ್ನಲ್ಲಿ ತೃಪ್ತಿ ಶಾಂತಿ ಇದ್ದುದರಿಂದ ಇತರರಲ್ಲಿ ಅದೇ ಪ್ರತಿಫಲಿಸುತ್ತದೆ.' ಎಂದು ಅವನ ಬೆನ್ನನ್ನು ತಟ್ಟಿ, ಅವನು ಹಾಲು ಕುಡಿದ ಮೇಲೆ ಅವನ ಕೋಣೆಯ ವರೆಗೆ ಮುಟ್ಟಿಸಿದಳು. ಸೇಟಜಿಯು ತನ್ನ ಕೋಣೆಗೆ ಹೋಗಿ ದೇವರನ್ನು ಚಿಂತಿ ಸುತ್ತ ನಿದ್ರೆಹೋದನು.

---

## ೧೮ನೆ ಅಧ್ಯಾಯ

## ರಾಧಾಗೋಪಾಲರ ಪಾಣಿಗ್ರಹಣ

ಹೀಗೆ ಕೆಲವು ದಿನಗಳು ಕಳೆದುವು. ಚಳಿಗಾಲವು ದಾಟಿ ವಸಂತ ಕಾಲವು ಸಮಿಾಪಿಸಿತು. ಅದರೊಂದಿಗೆ ಗೋಸಾಯಿಯ ಸಮಾಚಾರವೂ ಜನರಿಗೆ ವಿಸ್ಮೃತಿಯಾಯಿತು. ಆದರೆ ಗೋಸಾಯಿಯ ದುಷ್ಟ ವರ್ತನದ ಸಮಾಚಾರವು ಮುಂಬಯಿ ಪೂನಾ ಪಟ್ಟಣಗಳ ವರ್ತಮಾನ ಪತ್ರಿಕೆಗಳಲ್ಲಿ ಹಬ್ಬಿತು. ಅದರಿಂದ ಗಲಭೆಯೆದ್ದು ಗೋಸಾಯಿಯ ಮಠದ ಸರ್ವಾಧಿ ಕಾರಿಗಳಾದ ಆಠಾರಾ ಪಂಥಕೂಟದವರು ಆತನನ್ನು ಪಟ್ಟದಿಂದ ತಳ್ಳಿ ಮಠದಿಂದ ಹೊರಡಿಸಿದರು. ಮತ್ತೆ ಅವನು ಎಲ್ಲಿ ಹೋದನೆಂದೂ ಸಮಾಚಾರವೇ ತಿಳಿಯಲಿಲ್ಲ.

ವಸಂತಕಾಲವು ಬಂದೊಡನೆ ಸೇಟಜಿಯು ಎಂದಿನಂತೆ ಕಡಲದಂಡೆಗೆ ವಾಯುಃಸೇವನೆಗೆ ಹೋಗತೊಡಗಿದನು. ಅಲ್ಲಿ ಬೆಸ್ತರ ಮಕ್ಕಳು ಅವನು

ಕುಳಿತಲ್ಲಿಗೆ ಬಂದು ಅವನಿಂದ ಬೇರೆಬೇರೆ ದೇಶಗಳ ಪ್ರಯಾಣದ ಕಥೆಗಳನ್ನು ಕೇಳುತ್ತ ಸಂತೋಷಪಡುತಿದ್ದರು. ಒಂದು ದಿನ ಚಿನ್ನದ ಗನಿಗಳ ಸಮಾಚಾರವನ್ನು ಸೇಟಜಿಯು ವರ್ಣಿಸುತಲಿದ್ದಾಗ ಒಬ್ಬ ಬಿಸ್ತ ಹುಡುಗನು 'ನಮ್ಮಲ್ಲಿಯೂ ಅಷ್ಟು ಹಣವಿದ್ದರೆ ನಾವು ಬೇಕು ಬೇಕಾದುದನ್ನು ತರಿಸಿಕೊಳ್ಳಬಹುದಿತ್ತಲ್ಲ!' ಎಂದನು.

ಆಗ ಸೇಟಜಿಯು 'ಮಗೂ! ಹಣವಿದ್ದರೆ ಎಲ್ಲ ಸಿಕ್ಕುತ್ತದೆ ಎಂಬದು ತಪ್ಪು ಗ್ರಹಿಕೆ. ಈಗ ನೋಡು! ನನ್ನಲ್ಲಿ ಹಣವಿದ್ದರೆ ನಿನ್ನನ್ನು ನನಗೆ ವಿಕ್ರಯಿಸು ಎಂದರೆ ನಿನ್ನ ತಾಯಿ ಒಪ್ಪುತಿದ್ದಳೇ? ಅಷ್ಟೆ ಅಲ್ಲ, ಸಾವಿರ ಹೊನ್ನನ್ನು ಒಂದು ತ್ರಾಸಿನ ತಟ್ಟೆಯಲ್ಲಿ ಹಾಕಿ ಇನ್ನೊಂದು ತಟ್ಟೆಯಲ್ಲಿ ಹರಕು ಬಟ್ಟೆ ತೊಟ್ಟ ನಿನ್ನನ್ನು ಇಟ್ಟರೆ ಯಾವುದಕ್ಕೆ ನಿನ್ನ ತಾಯಿ ಕೈಚಾಚುವಳು?'

**ಹುಡುಗ:**—(ಕಣ್ಣರಳಿಸಿ ನಗುತ್ತ) ನನ್ನನ್ನೆ ಅವಳು ಎತ್ತಿಕೊಳ್ಳುವಳು! ಅದಕ್ಕೇನು ಸಂದೇಹ!

**ಸೇಟಜೀ:**—ಸರಿ ಸರಿ! ಈಗ ಗೊತ್ತಾಯಿತೇ ದುಡ್ಡು ಕೊಟ್ಟರೂ ಪಡೆಯಲಾರದ ಒಂದು ವಸ್ತುವಿದೆಯೆಂದು? ಅದು ಮಗುವಿನ ಮೇಲಣ ಪ್ರೀತಿ!

**ಹುಡುಗ:**—ಹೌದು! ನಾನು ಹಲವು ವಸ್ತುಗಳನ್ನು ಕೊಂಡುಕೊಳ್ಳಬಹುದು ಎಂದೆ; ಎಲ್ಲವನ್ನು ಎಂದಿಲ್ಲ!

**ಸೇಟಜೀ:**—ಆ ಹಲವು ವಸ್ತುಗಳು ಒಮ್ಮೆ ನಮ್ಮ ಕೈಗೆ ಸಿಕ್ಕಿದವೆಂದರೆ ಅವುಗಳ ಮೇಲೆ ನಮಗೆ ಬೇಸರ ಹುಟ್ಟೀತು! ಪ್ರೀತಿಯನ್ನು ಮಾತ್ರ ನಾವು ಕೊಂಡುಕೊಳ್ಳಲಾರೆವು. ಪ್ರೀತಿ ಎಂಬದು ದೈವಿಕ ವಸ್ತು!

ಆ ಹುಡುಗನು ಸೇಟಜಿಯ ಮಾತುಗಳಿಂದ ಬೆರಗಾಗಿ ಸೇಟಜಿಯನ್ನು ಪಿಳಿಪಿಳಿ ನೋಡುತಿದ್ದನು. ಸೇಟಜಿಯು ಅವನನ್ನು ನೋಡಿ ನಕ್ಕು 'ನಿನಗೆ ಒಂದಿಷ್ಟು ಹಣ ಬೇಕೇ?' ಎಂದು ಕೇಳಿದನು. 'ತಾತಾ! ನೀನೆಲ್ಲಿಂದ ಕೊಡುವೆ? ನೀನು ತೀರಾ ಬಡವನಲ್ಲವೇ! ಪಾಪ!' ಎಂದು ಹುಡುಗನು ಹೇಳಿದನು. ಸೇಟಜಿಯು ನಸುನಕ್ಕು ಅವನ ಬೆನ್ನು ಸವರಿದನು.

ಇಷ್ಟು ಮಾತುಗಳು ನಡೆಯುವಾಗ ರಾಧೆಯೂ ಗೋಪಾಲನೂ ಅವನಿಗೆ ಎದುರಾಗಿ ಬರುತಿದ್ದರು. ಇಬ್ಬರ ಮೋರೆಗಳಲ್ಲಿಯೂ ಗೆಲುವು ಇತ್ತು. ರಾಧೆಯು 'ತಾತಾ! ತಾತಾ!' ಎಂದು ಸೇಟಜಿಯನ್ನು ಕರೆದು ಓಡಿ ಬಂದು ಅವನ ಕಾಲೆಡೆಯಲ್ಲಿ ಕುಳಿತುಕೊಂಡಳು. ಒಡನೆಯೇ ಗೋಪಾಲನು ಬಂದು ಅವನ ಪಕ್ಕದಲ್ಲಿ ಕುಳಿತನು. ಆಗ ಸೇಟಜಿಯು ಈ ಗೋಧೂಳಿ ಲಗ್ನದಲ್ಲಿಯೇ ಸೂರ್ಯಸಾಕ್ಷಿಯಾಗಿ ಪಾಣಿಗ್ರಹಣ ವೆಂದು ಅವರೀರ್ವರ ಕೈಗಳನ್ನು ಜೋಡಿಸಿ ತನ್ನ ಆಶೀರ್ವಾದ ಮಾಡಿ ದನು. 'ಕ್ರಮವಾಗಿ ನಮ್ಮ ವಿವಾಹವು ರಿಜಿಸ್ಟರಾಗಬೇಕಿದ್ದರೂ ನಿನ್ನ ಆಶೀರ್ವಾದದಿಂದ ಪಾಣಿಗ್ರಹಣಮಾಡಿಕೊಂಡೆವು. ಆದರೆ ನಮ್ಮ ಸುಖದ ಪರಮಾವಧಿಯಾಗಬೇಕಾದರೆ ನೀನು ಎಲ್ಲಿಯೂ ಹೋಗದೆ ನಮ್ಮ ಜತೆ ಯಲ್ಲಿ ನಮ್ಮ ಮನೆಯಲ್ಲಿ ವಾಸಮಾಡುತ್ತೇನೆಂದು ಮಾತು ಕೊಡಬೇಕು' ಎಂದು ಅವರಿಬ್ಬರೂ ಸೇಟಜಿಗೆ ಒತ್ತಾಯಪಡಿಸಿದರು. ಸೇಟಜಿಯು 'ಇನ್ನು ನಾನು ಇಲ್ಲಿ ಇರುವುದು ಸರಿಯಲ್ಲ, ನನ್ನ ಗೆಳೆಯನನ್ನು ಹುಡುಕಿ ಹೋಗಬೇಕು. ನಾನು ಯಾರು, ನೀವು ಯಾರು? ಏನೊ ಇಷ್ಟು ದಿನಗಳ ಋಣಾನುಬಂಧವಿದ್ದುದರಿಂದ ನಾನು ಇಲ್ಲಿ ಉಳಿದೆ. ಅಷ್ಟೆ. ಈಗ ನನಗೆ ದಿನೇ ದಿನೇ ಮೈಯಲ್ಲಿ ತ್ರಾಣ ಕುಂದಿಬರುತ್ತದೆ. ಆಗ ನಿಮಗೊಂದು ಹೊರೆಯಾಗಿ ನಾನು ಇಲ್ಲಿ ಕಾಲ ಕಳೆಯಲಾರೆ.' ಎಂದು ನುಡಿದನು.

'ತಾತಾ! ನೀನಿಲ್ಲದಿದ್ದರೆ ನಮಗೆ ಬೇಸರವಾದೀತು, ನೀನು ನಮ್ಮವ ರಲ್ಲಿ ಒಬ್ಬನೆ ಎಂಬಷ್ಟು ನಮ್ಮಲ್ಲಿ ಪರಸ್ಪರ ವಿಶ್ವಾಸವು ಬೆಳೆದಿದೆ. ನೀನು ಇಲ್ಲಿಂದ ಹೋದರೆ ನಮಗೆ ತುಂಬಾ ದುಃಖವಾದೀತು' ಎಂದು ಇಬ್ಬರೂ ಆತನ ಒಂದೊಂದು ಕೈ ಹಿಡಿದು ಅಲುಗಿಸಿದರು.

ಆಗ 'ತೀರಾ ಅಪರಿಚಿತನಾದವನೊಬ್ಬನನ್ನು ಈಗ ಕೆಲವು ಕಾಲದಿಂದ ತುಂಬಾ ಕನಿಕರದಿಂದ ತುಂಬಾ ಪ್ರೇಮದಿಂದ ನೀವು ನೋಡಿಕೊಳ್ಳು ತಿದ್ದುದು ನಿಜ. ಇನ್ನು ಮುಂದೆ ಅದೇ ವಿಶ್ವಾಸವು ನಮ್ಮೊಳಗೆ ಸ್ಥಿರವಾಗಿ ನಿಲ್ಲುವುದು ಎಂದು ನಾನು ಬಲ್ಲೆ. ನಿಮ್ಮ ಉಪಕಾರವನ್ನು ಸರ್ವಥಾ

ಮರೆಯುವಂಥವನಲ್ಲ. ನಾನು ಇಲ್ಲಿ ಕಳೆದ ದಿನಗಳು ನನ್ನ ಇಡೀ ಜೀವನಕಾಲದಲ್ಲಿ ಅತಿ ಅನರ್ಘ್ಯವಾದವುಗಳು. ಯಾಕಂದರೆ ಇಲ್ಲಿ ಯಷ್ಟು ಸುಖವನ್ನು ಎಂದೂ ನಾನು ಪಡೆಯಲಿಲ್ಲ. ದೇವರೇ ನಿಮಗೆ ಅದಕ್ಕಾಗಿ ಪ್ರತಿಫಲವನ್ನು ಕೊಡದಿರನು. ನಿಮ್ಮ ಜೀವನವು ಸುಖಕರ ವಾಗಲಿ!' ಎಂದು ಇಬ್ಬರ ತಲೆಗಳ ಮೇಲೆ ಕೈಯಿಟ್ಟು ಸೇಟಜಿಯು ಹರಸಿದನು.

---

## ೧೯ನೆ ಅಧ್ಯಾಯ

## ಸೇಟಜಿಯು ವೀಲು

ಹಿಂದಿನ ಸಂಭಾಷಣೆ ನಡೆದು ಮೂರು ದಿನಗಳು ದಾಟಿದುವು. ನಾಲ್ಕನೆ ದಿನ ನಸುಕಿನಲ್ಲಿ ಸೇಟಜಿಯು ತನ್ನ ಪೋಷಾಕನ್ನು ಧರಿಸಿಕೊಂಡು ತನ್ನ ತುಂಡಂಗಿಯ ಹೊಲಿಗೆಯನ್ನು ಬಿಡಿಸಿ ಅದರಲ್ಲಿ ನೋಟುಗಳ ಕಟ್ಟು ಸರಿಯಾಗಿದೆಯೊ ಎಂದು ಎಣಿಸಿ ನೋಡಿ, ಅವುಗಳಿಂದ 50 ರೂಪಾಯಿಯ ನೋಟುಗಳನ್ನು ಪ್ರತ್ಯೇಕಿಸಿ ಇನ್ನೊಂದು ಕಿಸೆಯಲ್ಲಿ ಮಡಚಿ ಇಟ್ಟನು. ಆ ಮೇಲೆ ತೋಟದ ಹೆಬ್ಬಾಗಲನ್ನು ಮೆಲ್ಲಗೆ ತೆರೆದು ಬೀದಿಯಲ್ಲಿ ಕಾಲಿಟ್ಟನು. ರಾಧೆಯು ಇನ್ನೂ ಹಾಸಿಗೆಯನ್ನು ಬಿಟ್ಟು ಎದ್ದಿರಲಿಲ್ಲ. ತನ್ನ ಜತೆಯಲ್ಲಿ ನಾಯಿಯನ್ನೂ ಕರೆದುಕೊಳ್ಳದೆ ಒಂಟಿಯಾಗಿ — ಪುರದ ದಾರಿಯನ್ನು ಹಿಡಿದನು. ದಾರಿಯಲ್ಲಿ ಒಂಟಿಯಾಗಿ ನಡೆಯುವಾಗ ಅವನ ಕಣ್ಣುಗಳಲ್ಲಿ ನೀರು ಒಸರಿತು.

'ನಾನು ಈಗ ನನ್ನ ಪ್ರೇಮವಿಶ್ವಾಸಗಳಿಗೆ ನೆಲೆಯಾಗಿದ್ದ — ನನ್ನ ಶಾಂತಿಯ ತವರುಮನೆಯಾಗಿದ್ದ ಮನೆಯನ್ನು ಬಿಟ್ಟು ಏಕಾಂಗಿಯಾಗಿ ಹೊರಟಿದ್ದೇನೆ. ಆದರೆ ಈ ಮನೆಯಲ್ಲಿಯೇ ನನ್ನ ಕೊನೆಯ ದಿನಗಳನ್ನು ನಾನು ಕಳೆಯುವಂತೆ- ಹೇ ಭಗವಂತನೆ,- ನನ್ನ ಮೇಲೆ ಕರುಣಿಸು. ನಾನು ಇನ್ನು ಏನನ್ನೂ ಬೇಡುವುದಿಲ್ಲ.' ಎಂದು ಕಣ್ಣು ಮುಚ್ಚಿ ಪ್ರಾರ್ಥಿಸಿ ಮುಂದಕ್ಕೆ ಕಾಲು ಹಾಕಿದನು. ಮೆಲ್ಲಗೆ ಆ ಹಳ್ಳಿಯ ಒಂದು ಬದಿ ಯಲ್ಲಿರುವ ಗುಡ್ಡದ ತುದಿಗೆ ನಿಧಾನವಾಗಿ ಮುಟ್ಟಿದನು. ಹಿಂದೆ ತಿರುಗಿ

ನೋಡಿದಾಗ ತನ್ನನ್ನು ಯಾರೂ ಹುಡುಕಾಡಿ ಬಂದಂತೆ ಕಾಣಿಸಲಿಲ್ಲ. ಈ ಗುಡ್ಡದ ತುದಿಯಿಂದ ಒಂದು ಕಡೆಯಲ್ಲಿ ವಿಸ್ತಾರವಾದ ಸಮುದ್ರವು ದಿಗಂತದ ವರೆಗೆ ವ್ಯಾಪಿಸಿತ್ತು. ಇದನ್ನು ನೋಡುತ್ತಾ ದಣುವಾರಿಸಲಿಕ್ಕೆ ನಿಂತಾಗ ಸೂರ್ಯನು ಇನ್ನೂ ಮೂಡಿ ಬಂದಿದ್ದಿಲ್ಲ. ಕತ್ತಲಲ್ಲಿ ಶಾಂತ ವಾದ ಈ ಸಾಗರವು ಮುಂದೇನು ಇದೆ ಎಂದು ತೋರಿಸದೆ ಹರಡಿಕೊಂಡಿರು ವಾಗ ಮರಣವೆಂಬ ಗಡಿಯು ಈ ಸಂಸಾರಸಾಗರದ ದಿಗಂತದಲ್ಲಿದ್ದು ಮುಂದೇನು ಇದೆ ಎಂದು ತೋರಿಸದೆ ಇದ್ದಂತೆ ಸೇಟಜಿಗೆ ಭಾಸವಾಯಿತು. 'ಈ ಲೋಕವು ಕೂಡಾ ತುದಿ ಬುಡ ಕಾಣದ ಬ್ರಹ್ಮಾಂಡದಲ್ಲಿ ಒಂದು ಸಣ್ಣ ಚುಕ್ಕಿಯಾಗಿದ್ದರೂ, ನಮ್ಮ ಪ್ರೇಮವಿಶ್ವಾಸಕ್ಕೆ ಬದ್ಧವಾದ ಒಂದೆರಡು ವ್ಯಕ್ತಿಗಳ ದೆಸೆಯಿಂದ ನಮ್ಮ ಹೃದಯವು ಲಂಗರು ಹಾಕಿದಂತೆ ಈ ಲೋಕ ವನ್ನು ಸಾಧ್ಯವಿದ್ದಷ್ಟು ಕಾಲ ಬಿಗಿಯಾಗಿ ಹಿಡಿದುಕೊಳ್ಳುತ್ತದೆ. ಆ ಲಂಗರು ಹಗ್ಗ ಕಡಿದೊಡನೆ ನಮ್ಮ ಆತ್ಮನು ಎಲ್ಲಿಗೆ ಹೋಗುತ್ತಾನೆ, ಕಷ್ಟಪಡುತ್ತಾನೋ ಸುಖಪಡುತ್ತಾನೊ ಎಂಬ ವಿಚಾರವೇ ನಮ್ಮ ಗೋಚ ರಕ್ಕೆ ಬರುವುದಿಲ್ಲ. ಈಗ ನನ್ನ ಆತ್ಮನು ಈ ಹಳ್ಳಿಯಲ್ಲಿ ನಿಷ್ಕಲ್ಮಷವಾದ ಹೃದಯದ ಬಾಲೆಯೊಬ್ಬಳ—ನನ್ನನ್ನೇ ತಂದೆಯೋಪಾದಿ ಕಾಣುವವಳ— ನಿಷ್ಕಾಮಪ್ರೇಮದ ಲಂಗರಿನ ಪಾಶಕ್ಕೆ ಗಂಟುಬಿದ್ದಿದ್ದಾನೆ. ಅಂಥ ಹಳ್ಳಿ ಯನ್ನು ಬಿಟ್ಟು ನಾನು ಪಟ್ಟಣಕ್ಕೆ ಹೋಗುತಿದ್ದೇನೆ. ದುರಾಶಾಪಾಶಗಳಿಂದ ಬಂಧಿಸಲ್ಪಟ್ಟ, ನೈತಿಕವಿಚಾರಗಳನ್ನು ಮೂಲೆಗೊತ್ತಿ ಕಾಸೇ ಕೇಶವನೆಂದು ಷೋಡಶೋಪಚಾರಗಳಿಂದ ಆರಾಧಿಸುವ ಸ್ವಾರ್ಥಪರರಾದ ಜನಸ್ತೋಮ ದಿಂದ ನಿಬಿಡವಾದ ಪಟ್ಟಣಕ್ಕೆ ಹೋಗುತಿದ್ದೇನೆ. ನಾನು ಮುಟ್ಟಿದ್ದೆಲ್ಲ ಚಿನ್ನವಾಗುವಂತಿದ್ದರೂ, ಆ ಚಿನ್ನದ ಶೀತಸ್ಪರ್ಶವೇ ಅಲ್ಲದೆ ನಿಷ್ಕಾಮ ಪ್ರೇಮದ ಸುಖಕರವಾದ ಉಷ್ಣವು ನನ್ನ ದೇಹಕ್ಕೆ ಇದುವರೆಗೆ ಅಂಟಿ ಕೊಂಡದ್ದಿಲ್ಲ. ಇಂಥ ನಿಷ್ಕಾಮಪ್ರೇಮ, ಗಂಭೀರವಾದ ಸಾಗರ-ಆಕಾಶ ಗಳು, ಪ್ರತಿಫಲಾಕಾಂಕ್ಷೆಯಿಲ್ಲದೆ ಇಂಪಾಗಿ ಹಾಡುವ ವಿವಿಧ ಪಕ್ಷಿಗಳು, ಸೊಗಸಾದ ಪರಿಮಳವನ್ನು ಬೀರುವ ಅಂದವಾದ ಹೂಗಳು ಇವುಗಳಿಂದ ಸುಶೋಭಿತವಾದ ಈ ಭೂಲೋಕವನ್ನು ಬಿಟ್ಟು ಹೋಗಲೇ? ಆದರೆ ಚೇತನವು ತಾನಾಗಿಯೇ ಕಡಿಮೆಯಾಗುತಿದ್ದಾಗ ಅಂಥ ಪರಿಣಾಮವು

ಬರಲೇ ಬೇಕು, ಅದನ್ನು ತಡಿಸಲು ಯಾರಿಗೂ ಶಕ್ಯವಲ್ಲ. ನನ್ನ ಜೀವನ ಸಂಧ್ಯಾಕಾಲವು ಸಮೀಪಿಸಿತು; ಸೂರ್ಯನು ಮುಳುಗಲು ಇನ್ನು ಹೆಚ್ಚು ಸಮಯ ಉಳಿದಿಲ್ಲ,' ಎಂದು ಮುಂತಾಗಿ ಯೋಚಿಸುತ್ತ ಕುಳಿತನು. ಅಷ್ಟರಲ್ಲಿ ಸೂರ್ಯನು ಮೆಲ್ಲಮೆಲ್ಲಗೆ ಅಡಿಯಿಡುತ್ತ ದಿಗಂತದ ಮೇಲೆ ಬಂದು ಸೃಷ್ಟಿಯ ಸೌಂದರ್ಯವನ್ನು ಪ್ರಕಟಗೊಳಿಸತೊಡಗಿದನು. ತಾನಾಗಿಯೇ ಸೇಟಜಿಯ ಕೈಗಳು ಈ ಸೂರ್ಯನ ಪ್ರಭೆಯನ್ನು ನೋಡುತ್ತ ಮುಗುಳುಗೊಂಡವು. ಈಗ ಸೇಟಜಿಗೆ ನಾಸಿಕಕ್ಕೆ ಹೋಗುವ ಇಚ್ಛೆ ಕುಗ್ಗಿ ಹೋಯಿತು. ಕಾಲುನಡೆಯಾಗಿ ಅವನ ಕಾಲುಗಳು ಮುಂದೆ ಹೋಗಲೊಲ್ಲವು. ಅಷ್ಟರಲ್ಲಿ ಬಂಡಿ ಹೊಡಕೊಂಡು ಹೋಗುವವನೊಬ್ಬನು ಆ ದಾರಿಯಾಗಿ ಬರುತಿದ್ದನು. ಅವನನ್ನು ಕಂಡು ಸೇಟಜಿಯು 'ನೀನೆಲ್ಲಿಗೆ ಹೋಗುವೆ? ರೈಲ್ವೆ ಸ್ಟೇಶನಿಗೇನು? ನನ್ನನ್ನು ಅಲ್ಲಿಗೆ ಕೊಂಡುಹೋಗುವೆಯಾ? ನಿನಗೆ 8 ಆಣೆ ಕೂಲಿ ಕೊಡುವೆನು' ಎಂದನು.

'ಓಹೊ! ನಾಲ್ಕೇ ಆಣೆ ಕೊಟ್ಟರೆ ಸಾಕು. ಸ್ವಲ್ಪ ತಡೆ. ಈ ಚೀಲಗಳ ಮೇಲೆ ಸರಿಯಾಗಿ ಸ್ಥಳಮಾಡಿಕೊಡುತ್ತೇನೆ. ಆ ಮೇಲೆ ನೀನು ಸುಖವಾಗಿ ನಿದ್ದೆಹೋಗಬಹುದು' ಎಂದು ಬಂಡಿಯುವನು ಅಂದನು. ಸೇಟಜಿಯನ್ನು ಕೈಹಿಡಿದು ಬಂಡಿಯಲ್ಲಿ ಹತ್ತಿಸಿ, ಅವನನ್ನು ಸುಖವಾಗಿ ಕುಳ್ಳಿರಿಸಿದನು. ಸೇಟಜಿಯು ದಣಿದು ಬಂದವನಾಗಿದ್ದು ನಿದ್ದೆ ಮಾಡತೊಡಗಿದನು.

ಸಕಾಲದಲ್ಲಿ ಬಂಡಿಯು ರೈಲ್ವೆ ಸ್ಟೇಷನಿಗೆ ಮುಟ್ಟಿತು. ಬಂಡಿಯವನಿಗೆ ದುಡ್ಡು ತೆತ್ತು ಸೇಟಜಿಯು 3ನೆ ಕ್ಲಾಸು ಟಿಕೇಟು ಪಡೆದು ರೈಲು ಬಂಡಿಯಲ್ಲಿ ಕುಳಿತನು. ಆಗ ಅವನಲ್ಲಿ 'ನಾನು ಕೋಟ್ಯಾಧೀಶನಾದ ಜಗಜೀವನದಾಸನೇ, ಅಥವಾ ತಕ್ಲಿಯಲ್ಲಿ ನೂತು ಪರಪುಷ್ಟನಾಗಿ ಜೀವಿಸುವ ಜೀವನದಾಸನೆ? ಇದೊಂದು ಮಾಯಾಪ್ರಪಂಚವೇ ಸರಿ! ಇಂದು ಕಾಜಿಯಾದವ ನಾಳೆ ಪಾಜಿಯಾಗುತ್ತಾನೆ! ಆದರೆ ರಾಧಾಬಾಯಿಯ ನಿಷ್ಕಾಮಪ್ರೇಮವು ಮಾತ್ರ ಅಳಿವಿಲ್ಲದ ವಸ್ತು' ಎಂದು ಅವಳ ಮೋರೆಯನ್ನು ಚಿಂತಿಸುತ್ತ ಇದ್ದನು. ಬಂಡಿಯು ಪ್ರಯಾಣ ಮಾಡುತ್ತಾ ಇತ್ತು.

ಇತ್ತಲಾಗೆ ರಾಧಾಬಾಯಿಯು ಬೆಳಗ್ಗೆ ನಿದ್ದೆಯಿಂದ ಎಚ್ಚತ್ತು ಸೇಟಜಿಗೋಸ್ಕರ ಗಂಜಿ ಬೇಯಿಸಿ ಅವನ ಕೋಣೆಗೆ ಬಂದು ಕರೆದರೆ ಅವನಿಲ್ಲ! ಅದರ ಬದಲಾಗಿ ಒಂದು ಲಕೋಟೆ ಅವನ ಹಾಸಿಗೆ ಮೇಲೆ ಇತ್ತು. ಆ ಲಕೋಟೆ ಒಡೆದು ನೋಡಿದಾಗ ಅದರಲ್ಲಿ ಹೀಗಿತ್ತು:—

ಮಗೂ ರಾಧಾ!

ಬೆಳಗ್ಗೆ ನನ್ನನ್ನು ಕಾಣದಿದ್ದರೆ ಗಾಬರಿಯಾಗ ಬೇಡ. ನಾನು ಒಂದೆರಡು ದಿನಕ್ಕೆ ಮನೆ ಬಿಟ್ಟು ಹೋಗಿರುವೆನು. ನೀನೂ ಗೋಪಾಲನೂ ಸಂಸಾರ ಮಾಡಿರುವಾಗ ಬರೆ ತಕ್ಲಿಯಿಂದ ನೂಲು ತೆಗೆಯುವ ವೃತ್ತಿ ಗಿಂತಲೂ ಹೆಚ್ಚಿಗೆ ಆದಾಯ ಸಿಗುವುದೊಂದು ವೃತ್ತಿಯನ್ನು ಕೈಕೊಂಡು ನಿಮ್ಮಿಬ್ಬರ ಉತ್ಪನ್ನವನ್ನು ವೃದ್ಧಿಸಲು ನೋಡಬೇಕೆಂದಿರುವೆನು. ನಾನು ವಯೋವೃದ್ಧನು ನಿಜ; ಆದರೆ ನಿಮಗೊಂದು ಹೊರೆಯಾಗಿರಬಾರದೆಂದೆ ನನ್ನ ಎಣಿಕೆ. ಇದರಿಂದ ನೀವು ನನ್ನ ಕಾರ್ಯಗಳಿಗೆ ಅಪಾರ್ಥವನ್ನು ಹಚ್ಚಬಾರದೆಂದು ಕೇಳಿಕೊಳ್ಳುತ್ತೇನೆ. ನನ್ನ ಅನುಪತ್ಯದ ಕಾಲದಲ್ಲಿ ನೀನು ನನಗೆ ತುಂಬಾ ಸಹಾಯಮಾಡಿದುದರಿಂದ ನನ್ನ ಕೃತಜ್ಞತೆಯ ದೃಷ್ಟಾಂತವನ್ನು ನಿಮಗೆ ತೋರಿಸದೆ ಇದ್ದರೆ ನಾನು ಶಾಂತಚಿತ್ತದಿಂದ ಇಹವನ್ನು ತ್ಯಜಿಸಲಾರೆನು. ನಾನು ಎರಡೇ ದಿನಗಳಲ್ಲಿ ಹಿಂತಿರುಗಿ ಬರು ವೆನು. ಅಷ್ಟರ ವರೆಗೆ ನನ್ನ ನಾಯಿಯನ್ನು ಎಂದಿನಂತೆ ನೀನು ನೋಡಿ ಕೊಳ್ಳುವೆ ಎಂದು ಭರವಸೆಯಿದೆ.

ಇತಿ ನಿನ್ನ ನಿರಂತರ ಕ್ಷೇಮಾಭಿಲಾಷಿ,

**ಜೀವನದಾಸ**

ಈ ಪತ್ರವನ್ನು ಓದಿದೊಡನೆ ರಾಧಾಬಾಯಿಯ ಕಣ್ಣಿನಿಂದ ನೀರು ಧಾರಾಕಾರವಾಗಿ ಸುರಿಯಿತು. 'ಅಯ್ಯೊ! ತಾತಾ! ಕೈಯಲ್ಲಿ ಕಾಸಿಲ್ಲದ ನೀನು ಏನು ಸಾಹಸಮಾಡಲಿರುವೆ? ಎಲ್ಲಿ ಹೋದೆ? ಏನು ದುಡುಕುತನ ವಿದು? ನಿನ್ನ ಮೈಯಲ್ಲಿ ಶಕ್ತಿ ಕೂಡಾ ಸಾಕಷ್ಟು ಇದ್ದಿಲ್ಲ!' ಎಂದು ಕೂಡಲೇ ಏನೊ ಕಳೆದುಕೊಂಡಂತೆ ಅತ್ತಿತ್ತ ನೆಲ ಮೂಸುತಿದ್ದ ನಾಯಿಯನ್ನೂ ಎತ್ತಿ ಕೊಂಡು ಬೀದಿಗೆ ಇಳಿದು ಮಾರ್ಗದಲ್ಲಿ ಗುಡ್ಡದ ತುದಿಯ ವರೆಗೆ ಹೋಗಿ ಅತ್ತಿತ್ತ ನೋಡಿದಳು. ಸೇಟಜಿಯ ಕುರುಹು ಒಂದಿಷ್ಟು ಕೂಡ ಕಾಣಿಸು

ಲಿಲ್ಲ. ಒಡನೆಯೆ ಮನೆಗೆ ಬಂದು ಬರಿದಾಗಿದ್ದ ಕೋಣೆಯನ್ನು ಕಂಡು ಅಳುತ್ತ ಕುಳಿತಳು. ಅಂದಿನ ಮಧ್ಯಾಹ್ನದ ಊಟ ಅವಳಿಗೆ ರುಚಿಸಲೇ ಇಲ್ಲ. ಸಾಯಂಕಾಲ ಎಂದಿನಂತೆ ಗೋಪಾಲನು ಬಂಧು ಸೇಟಜಿಯು ಇಲ್ಲವೆಂಬ ವರ್ತಮಾನ ತಿಳಿದನು. 'ನಮ್ಮಿಬ್ಬರ ಸುಖಕ್ಕೆ ತಾನೊಬ್ಬ ಕಂಟಕನೆಂದೂ ಅವನಿಗೆ ಎಣಿಕೆ ಬಂತೆ? ಆದರೂ ಎರಡೇ ದಿನಗಳಲ್ಲಿ ಹಿಂತಿರುಗಿ ಬರುವೆನೆಂದು ಹೇಳಿರುವುದರಿಂದ ಅವನು ದೂರ ಹೋಗಿರ ಲಾರನು. ಎಲ್ಲಿಗೆ ಹೋಗಿರಬಹುದು?' ಎಂದನು.

ರಾಧೆಯು 'ಅವನ ಬಳಿಯಲ್ಲಿ ಒಂದೇ ಒಂದು ಕಾಸು ಕೂಡಾ ಇಲ್ಲ. ತಕ್ಲಿಯಲ್ಲಿ ನೂತ ನೂಲಿನ ಕ್ರಯವನ್ನು ಕೂಡಾ ಅವನು ನನಗೆ ದಿನಂಪ್ರತಿ ಒಪ್ಪಿಸುತ್ತಾನೆ. ಇದು ತನ್ನ ಖರ್ಚನ್ನು ನೋಡಿದುದಕ್ಕೆ ಪ್ರತಿ ಫಲವೆಂದು ಅವನ ಅಂಬೋಣ.' ಎಂದಳು. 'ಹೇಗಿದ್ದರೂ ನಾನೇ ಒಂದೆರಡು ಮೈಲು ದೂರ ಹೋಗಿ ಅವನ ಸುಳಿವು ಏನಾದರೂ ಉಂಟೇ ಎಂದು ನೋಡಿ ಬರುತ್ತೇನೆ'ಂದು ಹೊರಟಳು.

ಅಷ್ಟರಲ್ಲಿ ಈ ವರ್ತಮಾನವು ಸುಬ್ಬಾಭಟ್ಟನಿಗೂ ಅವನ ಹೆಂಡತಿಗೂ ತಿಳಿಯಿತು. ಅವಳು ಓಡಿ ಬಂದು 'ಏನಮ್ಮ! ತಾತಾ ಹೋದನೆ? ನನಗೆ ಅದೇ ಸಂದೇಹ! ಬೆಳಗಿನ ಜಾವದಲ್ಲಿ ಬಿದ್ದ ಸ್ವಪ್ನಗಳು ನಿಜವಾಗುತ್ತವಂತೆ. ನಾನು ಈ ದಿನ ಸ್ವಪ್ನದಲ್ಲಿ ತಾತನು ಕಾಶಿಗೆ ಹೋಗಲಿಕ್ಕೆ ಹೊರಟಿರು ವಂತೆಯೂ ನೀವೆಲ್ಲರೂ ಅವನನ್ನು ಕೈಹಿಡಿದು ತಡೆದಂತೆಯೂ, ಅವನು ನಿಮ್ಮ ಕೈತಪ್ಪಿಸಿ ಆಕಾಶಕ್ಕೆ ಹಾರಿ ಹೋದಂತೆಯೂ ಕಂಡಿತು. ಪಾಪದ ಮುದುಕ! ಯಾರೂ ಇಲ್ಲದ ಪರದೇಶಿ! ಈಗ ನೀನೇನು ಮಾಡುವೆ? ನೀನು ಒಬ್ಬಳೆ ಜೀವಿಸಬೇಕಲ್ಲ! ಆ ಗೋಪಾಲನನ್ನು ಯಾಕೆ ಮದುವೆಯಾಗಬಾರದು? ನಿನಗೆ ಮದುವೆಯಾಗುವ ಪ್ರಾಯ ದಾಟಿಲ್ಲ! ಅವನು ಯೋಗ್ಯ, ಸಂಭಾ ವಿತ! ಅವನಿಗೆ ನಿನ್ನಲ್ಲಿ ಅನುರಾಗವಿದೆ ಎಂದು ನನಗೆ ಗೊತ್ತು. ನಿನ್ನ ವಿಷಯವನ್ನು ಮಾತನಾಡುವಾಗ ಅವನ ಮುಖ ಅರಳುತ್ತದೆ. ಈಗ ಹೊಸ ನಮೂನೆಯ ಮದುವೆಗಳ ಕ್ರಮ ಬಂದಿದೆಯಲ್ಲ. ಪ್ರಾಯ ಸಮರ್ಥರ ವಿವಾಹಕ್ಕೆ!' ಎಂದು ಮಾತಿನ ಸುರಿಮಳೆಯನ್ನು ಸುರಿಸ ತೊಡಗಿದಳು.

ಅವಳ ಮಾತುಗಳನ್ನು ಒಂದು ಕಡೆ ಕೇಳಿ ನಗು, ತಾತನ ಸಮಾಚಾರವಿಲ್ಲದ್ದಕ್ಕೆ ದುಃಖ ಹೀಗೆ ಅಳುಮೋರೆಯಿಂದ ನಗುತ್ತ 'ಒಮ್ಮೆ ತಾತನು ಬರಲಿ. ಆ ಮೇಲೆ ಬಾಕಿಯ ವಿಚಾರ!' ಎಂದಳು. 'ಇಲ್ಲ, ಇಲ್ಲ, ಅವನಿನ್ನೂ ಬರುವ ಹಾಗೆ ಇಲ್ಲ, ಕಡಲುದಂಡೆಯಲ್ಲಿರುವ ಬೆಸ್ತರ ಮಕ್ಕಳಿಗೆ ಅದನ್ನು ಕೇಳಿ ಬಹಳ ದುಃಖವಾಗುವುದು. ಅಷ್ಟೇಕೆ, ಇಡೀ ಹಳ್ಳಿಯವರೇ ಮರುಗುವರು' ಎಂದು ಹೇಳಿ ಸಾಯಂಕಾಲವಾಯಿತೆಂದು ತನ್ನ ಮನೆಯ ಕಡೆಗೆ ಓಡಿದಳು. ಹೋಗುತ್ತ ಈ ಸಮಾಚಾರವನ್ನು ಊರೆಲ್ಲ ಹಬ್ಬಿಸಿದಳು. ಅವಳು ಹೇಳಿದ ಮಾತು ವಾಸ್ತವವಾದುದು. ಯಾಕಂದರೆ ಇಡೀ ಹಳ್ಳಿಯವರಿಗೆ ಸೇಟಜಿಯ ಮೇಲೆ ಒಂದು ಬಗೆಯ ಮಮತೆ ಬಿದ್ದಿತ್ತು.

ಅಷ್ಟರಲ್ಲಿ ರೈಲುಬಂಡಿ ಹತ್ತಿದ ಸೇಟಜಿಯು ಪಟ್ಟಣಕ್ಕೆ ಬಂದನು. ಅಲ್ಲಿ ಒಂದು ಖಾನಾವಳಿಯನ್ನು ನೋಡಿ ಅಲ್ಲಿ ರಾತ್ರೆ ಊಟಕ್ಕೆ ಮತ್ತು ತಂಗುವುದಕ್ಕೆ ಏರ್ಪಡಿಸಿಕೊಂಡನು. ಅವನು ಬಡವನಂತೆ ಇದ್ದರೂ ಸಭ್ಯನ ಮುಖಲಕ್ಷಣಗಳಿದ್ದುದರಿಂದ ಖಾನಾವಳಿಯ ಯಜಮಾನನು ಏನೂ ಹಿಂಜರಿಯಲಿಲ್ಲ. ಮರುದಿನ ಬೆಳಗ್ಗೆ ಅವನು ಒಂದು ಅಂಗಡಿಗೆ ಹೋಗಿ ಒಂದು ಹಾಳೆ ಕಾಗದವನ್ನು ತಂದು ತನ್ನ ವೀಲನ್ನು ಬರೆದು ಅದರಲ್ಲಿ ತನ್ನ ಸರ್ವಾದಿ ಆಸ್ತಿಯನ್ನು ರಾಧಾಬಾಯಿಗೆ ಕೊಟ್ಟನು. ಆ ಮೇಲೆ ಮಧ್ಯಾಹ್ನದ ಊಟ ಮುಗಿಸಿ ಅಲ್ಲಿ ಬೀದಿಬೀದಿಗಳಲ್ಲಿ ಸುಳಿದು ಒಂದು ವಕೀಲನ ಪಾಟಿಯನ್ನು ಕಂಡು ಹೆಬ್ಬಾಗಿಲಿಗೆ ತಟ್ಟಿ 'ವಕೀಲರು ಒಳಗೆ ಇದ್ದಾರೆಯೋ?' ಎಂದು ಕೇಳಿದನು. ಆಗ ಒಬ್ಬ ಹುಡುಗನು 'ಅವರು ಊಟಮಾಡಿ ಮಲಗಿದ್ದರು. ಈಗಲೆ ಎಚ್ಚತ್ತು ಹೊರಗೆ ಆಫೀಸು ಕೋಣೆಗೆ ಬಂದಿದ್ದಾರೆ' ಎಂದನು. ಕೋರ್ಟು ಕಚೇರಿ ಇರುವ ದಿನಗಳಲ್ಲಿಯೂ ಮಧ್ಯಾಹ್ನ ನಿದ್ದೆಮಾಡುವವನೆಂದರೆ ಆತನಿಗೆ ಕೆಲಸ ಕಡಿಮೆಯಿರಬೇಕು ಎಂದು ಸೇಟಜಿಯು ಅಂದುಕೊಂಡು ಆಫೀಸುಕೋಣೆಗೆ ಕಾಲಿಟ್ಟನು.

ವಕೀಲನು ಚಿನ್ನದ ಸುತ್ತಿನ ಕನ್ನಡಕವನ್ನು ಮೂಗಿನ ಮೇಲೇರಿಸಿ, ಸಿಗರೇಟಿನ ಪೊಟ್ಟಣದಿಂದ ಒಂದು ಸಿಗರೇಟನ್ನು ತೆಗೆದು ಬಾಯೊಳಗೆ

ಇಟ್ಟು, ಅವರ ತುದಿಗೆ ಬೆಂಕಿ ಹಚ್ಚಿದನು. 'ಏನು ಬಂದೆ? ನಿನಗೆ ಬರುವ ಹಣಕ್ಕೆ ರಿಜಿಸ್ಟ್ರಿ ನೋಟೀಸು ಕಳುಹಿಸಬೇಕೇ? ನೋಟೀಸು ನಾವು ಕಳುಹಿಸಿದರೆ ಆ ಮೇಲೆ ದಾವಾ ಸಾವೇ ಮಾಡಬೇಕು. ಆದ್ದರಿಂದ ರಿಕಾರ್ಡು ಕೊಡು!' ಎಂದು ವಕೀಲನು ಹೇಳಿದನು.

ಆಗ ಸೇಟಜಿಯು 'ಸ್ವಾಮಿ! ಅಂಥ ಗಲಾಟೆಯೇನೂ ಇಲ್ಲ. ನಾನೊಂದು ವೀಲು ಬರೆದಿಟ್ಟಿದ್ದೇನೆ. ಅದು ಕಾಯಿದೆ ಕಾನೂನಿಗೆ ಸರಿಯಾಗಿದೆಯೇ ಎಂದು ಓದಿನೋಡಬೇಕು. ನೀವು ಹೇಳುವ ಫೀಸು ಕೊಡುತ್ತೇನೆ' ಎಂದನು. 'ಹತ್ತು ರೂಪಾಯಿ ಕೊಡಲಿಕ್ಕೆ ಸಿದ್ಧವಿದ್ದೀರೆ?' ಎಂದು ವಕೀಲನು ಈಗ ಬಹುವಚನದಿಂದ ಸಂಬೋಧಿಸಿದನು.

'ವೀಲನ್ನು ನೋಡಬೇಕು' ಎನ್ನುವಾಗ ತನ್ನಲ್ಲಿ ಸಂಪತ್ತು ಇರಬೇಕು ಎಂಬದರಿಂದ ಮೊದಲಿನ ಏಕವಚನದ ಸಂಬೋಧನೆಯು ಈ ಬಹುವಚನಕ್ಕೆ ಬಂತು ಎಂದು ಸೇಟಜಿಯು ತನ್ನಲ್ಲಿಯೇ ನಕ್ಕು ಹತ್ತು ರೂಪಾಯಿ ಕೊಡಲು ಒಪ್ಪಿದನು.

'ನೀವು ಬರೆದ ವೀಲು ನೋಡೋಣ!' ಎಂದೊಡನೆ ಸೇಟಜಿಯು ವೀಲನ್ನು ವಕೀಲನ ಕೈಗೆ ಕೊಟ್ಟನು. ವಕೀಲನು ಕನ್ನಡಕವನ್ನು ಚೆನ್ನಾಗಿ ಒರಸಿ ಮೂಗಿಗೇರಿಸಿ, ವೀಲನ್ನು ಓದತೊಡಗಿದನು:—

"ಜಗಜೀವನದಾಸ ಸೇಟನಾದ ನಾನು'-ಹುಂ! ನೀವು ಜಗಜೀವನದಾಸ ಸೇಟರೆ? ಅದೇ ಹೆಸರಿನ ಕೋಟ್ಯಾಧೀಶರೊಬ್ಬರು ಮುಂಬಯಿಯ ಗಿರಣಿ ಮ್ಹಾಲಿಕರಾಗಿ ಇದ್ದರು. ಇದು ವಿಚಿತ್ರ! ನೀವು ಅವರ ಹೆಸರನ್ನು ಕೇಳಿದ್ದಿರಾ?'

**ಸೇಟಜೀ:**—ನಿಜವೇ? ನನ್ನ ಹೆಸರಿನ ಕೋಟ್ಯಾಧೀಶರು! ಆಶ್ಚರ್ಯ! ನಾನು ಅವರ ಹೆಸರನ್ನು ಕೇಳಲೆ ಇಲ್ಲ.

**ವಕೀಲ:**—ನೀವೇ ಅವರಾಗಿ ಇದ್ದಿದ್ದರೆ ಈ ವೀಲು ದೇಶದಲ್ಲೆಲ್ಲ ಪುಕಾರೆ ಎಬ್ಬಿಸುತಿತ್ತಲ್ಲ! ಆ ಕೋಟ್ಯಾಧೀಶನ ಹಣದ ವಿನಿಯೋಗ ಹೇಗೆ ಆಗಲಿಕ್ಕಿದೆ ಎಂದು ಎಲ್ಲರೂ ಕಿವಿನಿಗುರಿಸಿ ಕಾಲ ಹೆಬ್ಬೆಟ್ಟಿನ ಮೇಲೆ ನಿಂತು ತಲೆ ಎತ್ತಿ ಚರ್ಚಿಸುತಿದ್ದರಲ್ಲ! ನಿಮಗೆ ಅವರ ಹೆಸರು ಗೊತ್ತಿಲ್ಲವೆಂದರೆ ನೀವು ಯಾವುದೊ ಹಳ್ಳಿಗಾಡಿನವರಿರಬೇಕು. ಈಗ ವೀಲು ಓದೋಣ.

'ಜಗಜೀವನದಾಸ ಸೇಟನಾದ ನಾನು ನನ್ನ ಚಿತ್ತಸ್ವಾಸ್ಥ್ಯವಿದ್ದು, ಆರೋಗ್ಯವಂತನಾಗಿದ್ದು ದೇವರ ಸಾಕ್ಷಿಯಾಗಿ ಈ ವೀಲನ್ನು ಬರೆದಿಟ್ಟಿದ್ದೇನೆ. ಇದರಿಂದ ಈ ಮೊದಲಿನ ವೀಲುಗಳು ಏನಿದ್ದರೂ ರದ್ದಾಗಬೇಕು. ನನ್ನ ಸರ್ವಾದಿ ಸೊತ್ತಿನ ವಿಲೆವಾರಿ ಬರೆಯುವುದಕ್ಕೆ ಮುಂಚಿತವಾಗಿ ನನ್ನ ಆತ್ಮ ವನ್ನು ದೇವರ ಸನ್ನಿಧಿಗೆ ಸಮರ್ಪಣೆ ಮಾಡುತ್ತೇನೆ.'

'ಛೆ! ಛೆ! ಇದೆಲ್ಲ ಹಳೇ ಸಂಪ್ರದಾಯ. ಈಗ ಆತ್ಮಸಮರ್ಪಣೆಯ ವಿಚಾರವನ್ನು ಯಾರೂ ಬರೆಯುವುದಿಲ್ಲ. ಸ್ಥಿರಚರಸೊತ್ತುಗಳ ವಿಲೆವಾರಿ ಯನ್ನು ಮಾತ್ರ ಬರೆಯುತ್ತಾರೆ. ಇದೆಲ್ಲ ಘೋರ ಒಕ್ಕಣೆ ಯಾಕೆ?'

**ಸೇಟಜೀ:**—ನಾನು ಹಳೆ ಸಂಪ್ರದಾಯದವನೆಂಬುದೇನೊ ನಿಜ. ನನಗೆ ನನ್ನ ಸ್ಥಿರಚರಸೊತ್ತುಗಳಿಗಿಂತಲೂ ನನ್ನ ಆತ್ಮವು ಮಹತ್ವದ್ದು. ಆದ್ದರಿಂದ ಹಾಗೆ ಬರೆದೆ. ಅದರಿಂದ ದೋಷವಿಲ್ಲವಷ್ಟೆ!

**ವಕೀಲ:**—ಅಂಥದ್ದೇನೂ ಇಲ್ಲ. ನಾನು ವಾಡಿಕೆಯ ಕ್ರಮವನ್ನು ಮಾತ್ರ ಹೇಳಿದೆ; ಅಷ್ಟೆ.

**ಸೇಟಜೀ:**— ಈಗಿನ ಜನರು ದೇವರು ಇದ್ದಾನೆಂದೂ ನಂಬುವುದಿಲ್ಲ; ಒಂದು ವೇಳೆ ಆತನು ಇದ್ದಾನೆಂದರೂ ಸೃಷ್ಟಿಯ ಕಡೆಗೆ ಉದಾಸೀನನಾಗಿ ದ್ದಾನೆ ಎಂದೇ ಭಾವಿಸುತ್ತಾರೆ. ಆದರೆ ನನ್ನ ಮಟ್ಟಿಗೆ ದೇವರು ನಮ್ಮ ಚರ್ಯೆಚೇಷ್ಟೆಗಳನ್ನೆಲ್ಲ ಲಕ್ಷ್ಯವಿಟ್ಟು ನೋಡುತ್ತಾನೆಂದೇ ಅಭಿಪ್ರಾಯ.

**ವಕೀಲ:**—'ಸರಿ ಸರಿ! 'ಈ ವೀಲಿನಲ್ಲಿ ನನ್ನ ಸರ್ವಾದಿ ಸ್ಥಿರಚರ ಸೊತ್ತನ್ನು ನಾನು—ಗ್ರಾಮದ—ಜಾತಿಯ ರಾಧಾಬಾಯಿ—ನನ್ನ ಮಗ ಳಂತಿದ್ದು ನನ್ನ ಅಂತ್ಯಕಾಲದಲ್ಲಿ ನನ್ನನ್ನು ಸಾಕಿ ಆರೈಕೆ ನೋಡಿದವಳಿಗೆ ಏನೂ ಶರ್ತಗಳ ನಿರ್ಬಂಧವಿಲ್ಲದೆ ಸಮುಷ್ಟಿ ಹಕ್ಕಿನಿಂದ ಸಂತಾನ ಪಾರಂಪರ್ಯವಾಗಿ ಅನುಭವಿಸಿಬರುವಂತೆ ಒಪ್ಪಿಸಿಕೊಟ್ಟಿರುತ್ತೇನೆ!' ಅಷ್ಟೆ ಅಲ್ಲವೆ? ಈ ಒಕ್ಕಣೆ ಸರಿಯಾಗಿದೆ. ಈಗ ಇದಕ್ಕೆ ಸಾಕ್ಷಿ ಹಾಕಬೇಕಲ್ಲ! ಒಬ್ಬ ನಾನು, ಒಬ್ಬ ನನ್ನ ಗುಮಾಸ್ತ, ಎರಡು ಸಾಕ್ಷಿಗಳೇ ಸಾಕು. ಇನ್ನೊಬ್ಬರನ್ನು ಹುಡುಕಿ ಹೋದರೆ ನಿಮ್ಮ ಪರಿಚಯ ಅವರಿಗೆ ಮಾಡಿಸ ಬೇಕು. ಅವರಿಗೆ ಏನಾದರೂ ಹಣ ಕೈಗೆ ತಾಗಿಸಬೇಕು. ಇದೆಲ್ಲ ಅಡಚಣೆ

ಬೇಡ' ಎಂದು ಹೇಳಿ ಮೊದಲು ಸೇಟಜಿಯು ರುಜು ಹಾಕಿಸಿ ತನ್ನ ಸಾಕ್ಷಿ ಯನ್ನು ಹಾಕಿದನು. ಹಾಗೆ ತನ್ನ ಗುಮಾಸ್ತ ಸದಾಶಿವರಾಯನನ್ನು ಕರೆದು 'ಇದಕ್ಕೊಂದು ಸಾಕ್ಷಿ ಹಾಕು' ಎಂದನು. ಆತನು ಈ ಕಾಗದ ವನ್ನು ಕೈಯಲ್ಲಿ ಎತ್ತಿಕೊಂಡು 'ಜಗಜೀವನ ಸೇಟ' ಎಂದು ಓದಿದೊಡನೆ ಕೈ ಸುಟ್ಟಂತಾಗಿ ಕಾಗದವನ್ನು ಕೆಳಕ್ಕೆ ಮೇಜಿನ ಮೇಲೆ ಇರಿಸಿ ಬೆರಗಾಗಿ ನೋಡತೊಡಗಿದನು.

ಆಗ ವಕೀಲನು 'ನೀನು ಜಗಜೀವನದಾಸ ಸೇಟ ಎಂಬ ಹೆಸರನ್ನು ಓದಿ ಗಾಬರಿಯಾದೆಯಾ? ಇಗೊ! ಆ ಹೆಸರನ್ನು ಕೇಳದ ಮಹಾತ್ಮನು ಇವ ನೊಬ್ಬನೇ!' ಎಂದು ಹೇಳಿದನು.

ಆಗ ಸೇಟಜೀಯು:—'ಆ ಕೋಟ್ಯಾಧೀಶನೂ ವಿಲ್ಲು ಮಾಡಿದ್ದಾ ನೆಯೇ?'

**ವಕೀಲ:**— ಅವನೂ ಮಾಡಿರಬೇಕು. ಇಲ್ಲದಿದ್ದರೆ ಸರಕಾರಕ್ಕೆ ದೊಡ್ಡದೊಂದು ಅಯಾಚಿತ ಆದಾಯವಾದೀತು. ಹೇಗೂ ಇರಲಿ. ಆ ದೊಡ್ಡ ಮನುಷ್ಯನಿಗೆ ನೀನೊಮ್ಮೆ ಭೇಟಿಯಾದರೆ ಒಳ್ಳೇದು.

**ಸೇಟಜೀ:**— ಯಾಕೆ?

**ವಕೀಲ:**— ತನ್ನ ಹೆಸರಿನವನೊಬ್ಬನಿದ್ದಾನೆ ಎಂದು ಕೇಳಿದರೆ ಆತನಿಗೆ ಸಂತೋಷವಾದೀತು. 'ನನಗೂ ಧನಿಷ್ಠೆ, ರಾಜನಿಗೂ ಧನಿಷ್ಠೆ' ಎಂದು ಹಿಂದೆ ಒಬ್ಬನು ಹೇಳಿದ್ದನಂತೆ. ಈಗ ನೀನು ಅವನನ್ನು ಕಂಡರೆ ಸಂತೋಷದಿಂದ ನಿನಗೆ ಒಂದಿಷ್ಟು ಧನದಾನ ಮಾಡಿಯಾನು.

**ಸೇಟಜೀ:**-(ನಸುನಗುತ್ತ) ಹಾಗಿದ್ದರೆ ಆತನನ್ನು ಖಂಡಿತವಾಗಿಯೂ ಕಾಣುವೆನು.

**ಗುಮಾಸ್ತ:**— ಆತನು ಸತ್ತಿರುವನಂತೆ, ಅಲ್ಲವೆ? ವರ್ತಮಾನಪತ್ರಿಕೆ ಗಳು ಅನ್ನುತಿದ್ದುವು.

**ವಕೀಲ:**— ಆತನು ಸತ್ತಿಲ್ಲವೆಂದು ಅದೇ ಪತ್ರಿಕೆಗಳಲ್ಲಿ ಪುನಃ ಪ್ರಕಟವಾಗಿದೆ.

ಸೇಟಜಿಯು ಸಾಕ್ಷಿ ಹಾಕಿದ ವೀಲನ್ನು ತನ್ನ ಒಳಕಿಸೆಯಲ್ಲಿ ಒಂದು ಲಕೋಟೆಯೊಳಗೆ ಇಟ್ಟು ವಕೀಲನಿಗೆ ಫೀಸನ್ನು ಕೊಟ್ಟು ನಮಸ್ಕರಿಸಿ ಬೀದಿಗೆ ಇಳಿದನು. ಅಲ್ಲಿಂದ ಖಾನಾವಳಿಗೆ ಬಂದು ತನ್ನ ಸೊಲಿಸಿಟರ್ ಜಹಾಂಗೀರ ಅರ್ದೆಶೀರ್‌ನಿಗೆ ಒಂದು ದೊಡ್ಡ ಪತ್ರವನ್ನು ಬರೆದನು—

ಗೆಳೆಯಾ,

ಈ ಶಹರಿನಲ್ಲಿ ನಾನು ಈ ದಿನ ನಿಮ್ಮ ಇಚ್ಛೆಯಂತೆ ನನ್ನ ವೀಲನ್ನು ಮಾಡಿದೆನು. ಅದು ನನ್ನ ಸ್ವಹಸ್ತದಲ್ಲಿಯೇ ಬರೆದು ಇದೆ. ಅದನ್ನು ಇಲ್ಲಿಯ ವಕೀಲರೊಬ್ಬರಿಗೆ ತೋರಿಸಿ ಅವರ ಸಾಕ್ಷಿಯನ್ನು ಪಡೆದಿದ್ದೇನೆ. ಈ ವೀಲು ನನ್ನ ಬಳಿಯಲ್ಲಿಯೇ ಇರುವುದರಿಂದ ನನ್ನ ಅವಸಾನದ ವರೆಗೆ ನಿಮ್ಮ ಕೈಸೇರಲಾರದು. ಅದರ ಅನಂತರ ನಿಮ್ಮ ಕೈಸೇರಿದೊಡನೆ ಇಲ್ಲಿ ಹೇಳಿದ ವಿಲೆವಾರಿಯನ್ನು ಏನೂ ವಿಳಂಬಮಾಡದೆ ಜಾರಿಮಾಡಬೇಕು. ಮತ್ತು ನನ್ನ ಸೊತ್ತನ್ನೆಲ್ಲ ಇದರಲ್ಲಿ ಬರೆದ ವ್ಯಕ್ತಿಗೆ ಒಪ್ಪಿಸಿಕೊಡಬೇಕು.

ಮುಂಬಯಿಯ ಕೃತಕಜೀವನದ ಸೌಭಾಗ್ಯವನ್ನು ತೊಲಗಿ ಈಗ ಸುಮಾರು ಒಂದು ವರ್ಷ ಕಾಲದಿಂದ ಇಲ್ಲಿ ಅಪೂರ್ವಸುಖದಿಂದ ಕಾಲ ಕಳೆಯುತಿದ್ದೇನೆ. ನಾನು ಏನನ್ನು ಹುಡುಕುತಲಿದ್ದೆನೊ ಅದು ಅಯಾಚಿತವಾಗಿ ನನ್ನ ಕೈಗೆ ಎಟಕಿದೆ—ಅದೇ **ನಿಷ್ಕಾಮ ಪ್ರೇಮ.** ನನ್ನ ಹೇರಳ ಧನವನ್ನು ಬೇಕಾದಂತೆ ವ್ಯಯಿಸಿ, ಸುಖವನ್ನು ಪಡೆದಿದ್ದೆ. ಅದೆಲ್ಲ ಕೃತಕಸುಖ—ಆದರೆ ಬಡತನ, ರೋಗರುಜೆ ಮುಂತಾದವುಗಳಿಂದ ಸವೆದು ಹೋಗದ ನಿಷ್ಕಾಮಪ್ರೇಮದ ಸುಖವನ್ನು ನಾನು ಅಲ್ಲಿ ಅನುಭವಿಸಿರಲಿಲ್ಲ. ಇಲ್ಲಿ ಅನುಭವಿಸುತಿದ್ದೇನೆ. ಆ ಧನಸಂಪತ್ತಿನಲ್ಲಿ ಇಲ್ಲದ ಸುಖವನ್ನು ಈ ಬಡಪತ್ತಿನಲ್ಲಿ ನಾನು ಕಾಣುತ್ತೇನೆ. ಆದ್ದರಿಂದ ನನ್ನ ಅವಸಾನದ ವರೆಗೆ ನೀವು ಇನ್ನು ನನ್ನನ್ನು ಕಾಣಲಾರಿರಿ. ನನ್ನ ಆಕಾಂಕ್ಷೆಯು ಪೂರೈಸಿದೆ. ಇನ್ನು ಶಾಂತಚಿತ್ತನಾಗಿ ಸಾಯಲು ನನಗೆ ಸಾಧ್ಯವಿದೆ. ನನ್ನ ಮತ್ತು ನಿಮ್ಮ ಗೆಳೆತನವೂ ಬಹಳ ಕಾಲದ್ದಿದ್ದು ನನ್ನ ಅನಂತರವೂ ನಿಮ್ಮ ಅಭಿಮಾನವು ಅಳಿಯದೆ ಉಳಿಯುವುದು ಎಂದು ನನ್ನ ಭರವಸೆ. ನನ್ನ ಈಗಿನ ಅನುಭವದಿಂದ ಇಷ್ಟೊಂದು ನನಗೆ ಖಚಿತವಾಗಿದೆ. ಮರಣ

ವೆಂಬುದು ಒಂದು ಘರದೆ. ಅದು ಈ ಅಪೂರ್ಣವಾದ ಜೀವನದಿಂದ ನೂತನವಾದ ಸಂಪೂರ್ಣಜೀವನಕ್ಕೆ ಹೋಗುವ ದಾರಿಯನ್ನು ಖುಲಾಸು ಮಾಡುತ್ತದೆ. ಇಲ್ಲಿಯ ನಿಷ್ಕಾಮಪ್ರೇಮವೇ ಭಗವಂತನ ಅಪಾರವಾದ ಪ್ರೇಮದ ಛಾಯೆ. ಆ ಛಾಯೆಯಿಂದಲೇ ಆ ಮೂಲವಸ್ತುವಿನ ಗೊತ್ತುಹಚ್ಚಬೇಕಾಗುತ್ತದೆ. ಸಾಧ್ಯವಿದ್ದರೆ ನಾನು ಘಕ್ಕನೆ ಮುಂಬಯಿಗೆ ಬರಲಿಕ್ಕೂ ಸಾಕು. ಆದರೆ ಅದೆಲ್ಲ ಈಶ್ವರೇಚ್ಛೆಯ ಮೇಲೆ ಹೊಂದಿದೆ. ನಾನು ಒಂದು ವೇಳೆ ಬಾರದಿದ್ದರೆ ನನ್ನ ವ್ಯವಹಾರಗಳೆಲ್ಲ ನಿಮ್ಮ ಕೈಯಲ್ಲಿ ಭದ್ರವಾಗಿವೆ ಎಂದು ನನಗೆ ತುಂಬಾ ಭರವಸೆಯಿದೆ. ನಾನು ಸತ್ತಿದ್ದೇನೆಂಬ ವರ್ತಮಾನ ಸುಳ್ಳೆಂದು ನೀವು ವರ್ತಮಾನಪತ್ರಿಕೆಯಲ್ಲಿ ಖಂಡಿಸಿ ಬರೆದುದಕ್ಕೆ ತುಂಬಾ ಆಭಾರಿಯಾಗಿದ್ದೇನೆ.

ಇತಿ ಪ್ರೇಮವಿರಲಿ,

**ನಿಮ್ಮ ಮಿತ್ರ ಜಗಜೀವನದಾಸ**

ಈ ಕಾಗದವನ್ನು ಮುಂಬಯಿಗೆ ಜಹಾಂಗೀರನ ವಿಳಾಸಕ್ಕೆ ಬರೆದಿಟ್ಟು ಅಲ್ಲಿಂದ ಊರನ್ನು ಸುತ್ತಿ ಬರುವಾಗ ಒಂದು ದೇವಸ್ಥಾನದಲ್ಲಿ ಸಾಯಂಕಾಲದ ಪೂಜೆಯಾಗುತಿತ್ತು. ಬೀದಿಯಲ್ಲಿಯೆ ತುಸು ನಿಂತು ಆ ಪೂಜೆಯನ್ನು ನೋಡುತ್ತ 'ನನ್ನ ಜೀವನದ ಅಂತ್ಯಕಾಲದಲ್ಲಿಯಾದರೂ ಈ ಬಗೆಯ ಸುಖಶಾಂತಿಗಳನ್ನು ದಯೆಪಾಲಿಸಿದ್ದಕ್ಕೆ ನಿನ್ನನ್ನು ಎಷ್ಟು ಪ್ರಾರ್ಥಿಸಿದರೂ ಸಾಲದು' ಎಂದು ಕಣ್ಣುಮುಚ್ಚಿ ಸ್ವಲ್ಪ ಸಮಯದವರೆಗೆ ಆ ಸರ್ವಾಂತರ್ಯಾಮಿಯಾದ ಈಶ್ವರನನ್ನು ವಂದಿಸಿದನು.

---

## ೨೦ನೆ ಅಧ್ಯಾಯ

## ಸೇಟಜಿಯ ಪುನರಾಗಮನ

ಸೇಟಜಿಯು ಈಗ ರಾಧಾಬಾಯಿಯು ವಾಸವಾಗಿರುವ ಹಳ್ಳಿಗೆ ಸಮಿಪಿಸಿದನು. ಅವನ ಮನಸ್ಸಿನಲ್ಲಿ ಒಂದು ಬಗೆಯ ಉಲ್ಲಾಸವು ಉಕ್ಕಿಬರುತಿತ್ತು. ಶಾಲಾರಜೆ ಸಿಕ್ಕಿದೊಡನೆ ಮನೆಕಡೆಗೆ ಹೊರಟ ವಿದ್ಯಾರ್ಥಿಯ ಗೆಲುವು ಆತನ ಮುಖದ ಮೇಲೆ ಹರಡಿತ್ತು. ಅವನಲ್ಲಿ

ಒಂದಿಷ್ಟು ಹೆಚ್ಚಿಗೆ ತ್ರಾಣವಿದ್ದರೆ ಅವನು ಖಂಡಿತವಾಗಿಯೂ ಓಡಿ ಓಡಿ ರಾಧಾಬಾಯಿಯ ಮನೆ ಸೇರುತ್ತಿದ್ದನು. ಆದರೆ ಅಷ್ಟು ತ್ರಾಣ ಅವನಲ್ಲಿರಲಿಲ್ಲ. ಒಂದು ಕಡೆ ವಸಂತಋತುವಿನಲ್ಲಿ ಪ್ರಫುಲ್ಲವಾದ ಗಿಡಮರಗಳ ಸೌಂದರ್ಯ, ಶುಭ್ರವಾಗಿ ಮೋಡಗಳಿಲ್ಲದ ನೀಲಾಕಾಶ, ಸೂರ್ಯನ ಬಿಸಿಲು ಇದ್ದರೂ ತಂಗಾಳಿಯ ಬೀಸುವಿಕೆಯಿಂದ ಅದರ ಶಾಖವು ತಗ್ಗಿ ಉಂಟಾಗುವ ಉಲ್ಲಾಸ ಇವುಗಳಿಂದ ಸೇಟಜಿಯು ನವಚೇತನಹೊಂದಿದಂತೆ ನಡೆಯುತ್ತಿದ್ದನು. ತಾನು ಈ ಲೋಕದಲ್ಲಿ ಮಾಡಬೇಕಾದ ಕೆಲಸ ಒಂದೂ ಬಾಕಿ ಉಳಿಯಲಿಲ್ಲ ಎಂಬದೇ ಅವನಿಗೆ ತೃಪ್ತಿ. ಮರಣದಲ್ಲಿ ಜನ್ಮವು ಅಂತ್ಯವಾಗುವುದಿಲ್ಲ, ಜೀವನಿಗೆ ಹೊಸತೊಂದು ಉತ್ಕೃಷ್ಟವಾದ ಜನ್ಮವು ದೊರೆಯುತ್ತದೆ ಎಂಬ ವಿಚಾರವು ಆತನಲ್ಲಿ ಗಳಿಗೆ ಗಳಿಗೆಗೂ ಬಲಗೊಳ್ಳುತ್ತಿತ್ತು. ಅಂಥ ಹೊಸ ಜನ್ಮ ಹೊಂದುವುದಕ್ಕೆ ತಾನು ಸಿದ್ಧತೆ ಮಾಡಿದ್ದೇನೆಂಬದೆ ಅವನಿಗೆ ಸಮಾಧಾನ. ಅವನು ತನ್ನಷ್ಟಕ್ಕೆ ಈ ವಿಷಯದಲ್ಲಿ ಚರ್ಚಿಸತೊಡಗಿದನು:—

'ಮನುಷ್ಯನು ಇಹದಲ್ಲಿ ಜನ್ಮವೆತ್ತುವ ಕಾರಣವೇನೆಂದು ತಿಳಿಯದೆ, ತನ್ನ ಒಪ್ಪಿಗೆಯಿಲ್ಲದೆ ಜನ್ಮಹೊಂದುತ್ತಾನೆ. ತನ್ನ ಯಾವುದೊಂದು ಇಚ್ಛೆಯ ಪರಿಣಾಮವಾಗಿಲ್ಲದೆ ಪ್ರಕೃತಿಯ ಸೌಂದರ್ಯದ ನಡುವೆ ಜನ್ಮವೆತ್ತುತ್ತಾನೆ. ಈ ಭೂಮಿಯಲ್ಲಿ ಅವನಿಗೆ ಅನಗತ್ಯವಾದುದು ಯಾವುದೂ ಇಲ್ಲ. ಧೂಳಿಯಕಣವಾದರೂ ಅವನಿಗೆ ಬೇಕೇ ಬೇಕು; ಸೃಷ್ಟಿಕರ್ತನ ನಿಯಮಕ್ಕೆ ವಿರೋಧವಾಗಿ ಒಂದು ಹಣ್ಣು ಕೂಡಾ ಉದುರುವುದಿಲ್ಲ. ಮನುಷ್ಯನ ನ್ಯಾಯವಾದ ಸೌಕರ್ಯಕ್ಕಾಗಿಯೇ ಈ ಲೋಕದಲ್ಲಿ ಎಲ್ಲವೂ ಸಿದ್ಧವಾಗಿದೆ, ಅನುಕೂಲವಾಗಿದೆ. ಅದರ ಔಚಿತ್ಯವನ್ನು ಅರಿಯದೆ ಅದರ ಕರ್ತನ ಅಸ್ತಿಕ್ಯವನ್ನು ತೃಣೀಕರಿಸಿ ಜೀವನಕಾರ್ಯಗಳ ಗೂಢವನ್ನು ತಿಳಿಯದೆ, ಮನುಷ್ಯನು ಸ್ವೇಚ್ಛಾನುವರ್ತಿಯಾದರೆ ಎಲ್ಲವೂ ಕಾಲು ಕೀಲಾಗುತ್ತದೆ. ಅವನ ಉದ್ದೇಶವು ಉತ್ಕ್ರಾಂತಿಯ ಕಡೆಗೆ ದೃಷ್ಟಿ ಇಡುವುದು—ಅಂದರೆ ಬರೆ ವಿಷಯವಾಸನೆಗಳ ಪೂರೈಕೆಗಳ ಕಡೆಗಲ್ಲ— ಅವನ ಆತ್ಮನ ಬೆಳವಣಿಗೆಯ ಕಡೆಗೆ ದೃಷ್ಟಿ ಇಡುವುದು. ಯಾಕಂದರೆ

ಜೀವಾತ್ಮನು ನಿತ್ಯನು, ಸತ್ಯನು, ಪ್ರಕೃತಿಯು ಜಡವಾಗಿದ್ದು ಅಳಿವು ಉಳ್ಳದ್ದು. ಆದರೆ ಮನುಷ್ಯನು ಅವಿಚಾರದಿಂದ ಈ ಜಡಹೊಟ್ಟೆಯ ಕಡೆಗೆ ಆಸೆಯಿಡುತ್ತಾನಲ್ಲದೆ ಅದರ ಒಳಗಿನ ಜೀವಾಳವಾದ ಜೀವಾತ್ಮನ ಕಡೆಗೆ ಕಣ್ಣೆತ್ತಿ ನೋಡುವುದಿಲ್ಲ. ಹೀಗಾಗಿ ಅವನು ಅಭಿವೃದ್ಧಿ ಹೊಂದುತ್ತಾನೆಂದು ಕಂಡರೂ ಅದು ತಪ್ಪು ದಾರಿಯಲ್ಲಿ ಬೆಳೆವಣಿಗೆ. ಹೀಗಿದ್ದುದರಿಂದ ಅವನು ನಾಗರಿಕತೆಯಲ್ಲಿ ಮುಂದೆ ಸರಿಯುತ್ತೇನೆಂದು ಭ್ರಮೆಕಟ್ಟಿಕೊಳ್ಳುತ್ತಾನೆ. ಆದರೆ ಇದು ಆತ್ಮಪ್ರತಿಷ್ಠೆಯ ಮಾರ್ಗವಾದುದ ರಿಂದ ಒಂದು ವೃತ್ತಾಕಾರದಲ್ಲಿ ಸುಳಿದು ಪುನಃ ವನ್ಯಸ್ಥಿತಿಗೆನೆ ಬಂದಿಳಿಯು ತ್ತದೆ. ಈಗ ನನ್ನ ದೃಷ್ಟಾಂತವನ್ನು ತೆಗೆದುಕೊಳ್ಳೋಣ. ನನ್ನ ಜೀವನದ ಉದ್ದೇಶವು ಹಣಮಾಡುವುದು ಎಂದಿತ್ತು. ಅದನ್ನು ಮಾಡಿದೆನು. ಅದರಿಂದ ನನ್ನಲ್ಲಿ ನನ್ನ ಎಂಥ ಇಚ್ಛೆಯನ್ನಾದರೂ ಪೂರೈಸುವ ಶಕ್ತಿ ಬಂತು. ಅದೇ ನಾಗರಿಕತೆಯ ಏರುಮೆಟ್ಟಿಲು ಎಂದೆ. ಈಗ ಜೀವನದ ಕೊನೆಗಾಲದಲ್ಲಿ ಏನು ಕಂಡುಬರುತ್ತದೆ? ನಾನು ಮಾಡಿದ ಒಳಿತು ಏನೂ ಇಲ್ಲ, ನನಗಿಂತಲೂ ಶುದ್ಧಮನಸ್ಸಿನ ಮತ್ತು ಮನೋದಾರ್ಢ್ಯವುಳ್ಳ ಒಬ್ಬ ವ್ಯಕ್ತಿಯ ಕೈಯಲ್ಲಿ ನನ್ನ ದ್ರವ್ಯಸಂಚಯವನ್ನೆಲ್ಲ ಒಪ್ಪಿಸಿ, ಅದು ಮುಂದಾದರೂ ಸದುಪ ಯೋಗಕ್ಕೆ ಬೀಳುವಂತೆ ಏರ್ಪಡಿಸಿದುದೇ ನಾನು ಮಾಡಿದ ಕೆಲಸಗಳಲ್ಲಿ ಬೆಲೆ ಎಣಿಸತಕ್ಕ ಕೆಲಸ. ಹೀಗಾದುದರಿಂದ ಈ ದ್ರವ್ಯದ ಕೀಳು ತರದ ಲೋಹದ ಕವಚವನ್ನು ಕಿತ್ತು ಬಿಸಾಡಿ, ನನ್ನ ಆತ್ಮವನ್ನು ಪುಟಕ್ಕೆ ಹಾಕಿ ಶುದ್ಧೀಕರಿಸಿ, ಮುಂದಿನ ಜನ್ಮದ ಕಾರ್ಯವನ್ನು ಸುಲಭಮಾಡಿಕೊಂಡದ್ದೇ ನ್ಯಾಯ.'

ಹೀಗನ್ನುತ್ತಾ ಮುಂದೆ ನಡೆಯುವಾಗ ಅವನಿಗೆ ಫಕ್ಕನೆ ತಾಂತಿಯನ ನೆನಪಾಯಿತು. ಅದರೊಂದಿಗೆ ನಿರಪರಾಧಿಯಾದ ಅವನ ಕೂಸಿನ ಮರ ಣವೂ ಸ್ಮರಣೆಗೆ ಬಂತು. ಆಗ ದೇವರ ಸೃಷ್ಟಿನಿಯಮಗಳ ಉಲ್ಲಂಘನೆ ಮಾಡಿ ಅವುಗಳಿಗೆ ಭಂಗತರಲು ಯತ್ನಿಸುವ ಒಬ್ಬ ಸೈತಾನನು ಇದ್ದಾನೆಯೇ ಎಂಬ ಪ್ರಶ್ನೆಯು ಹೊಳೆಯಿತು. ಇದರಿಂದ ಈ ಲೋಕದಲ್ಲಿ ಒಳ್ಳೆದು ಕೆಟ್ಟದು, ಸರಸ ನಿರಸ, ಉತ್ತಮ ಅಧಮ ಈ ರೀತಿಯ ಭೇದಾಭೇದಗಳು

ಇದ್ದೇ ಇವೆ ಎಂದು ತಿಳಿದುಬಂತು. ಅಷ್ಟರಲ್ಲಿ ಹೀಗೆ ಯೋಚಿಸುತ್ತಾ ಇದ್ದಾಗ 'ಒಂದು ವೇಳೆ ಅಕಸ್ಮಾತ್ತಾಗಿ ಆ ರಾಧೆಗೆ ಮರಣ ಬಂದಿದ್ದರೆ—' ಎಂಬ ಅಭಿಪ್ರಾಯವು ತಲೆಯೊಳಗೆ ಬಂದೊಡನೆ ಅವನ ಕೈಕಾಲುಗಳು ಥರಥರನೆ ನಡುಗಲಾರಂಭಿಸಿದುವು. 'ಎಂಥ ಅನ್ಯಾಯ! ಹಾಗಿದ್ದರೆ ಲೋಕ ದಲ್ಲಿ ನೀತಿನ್ಯಾಯವೇ ಇಲ್ಲವೆಂದಾಯಿತು. ಹಾಗೆ ಸಂಭವಿಸಿದರೆ 'ದೇವರೆ ಇಲ್ಲ, ಅಥವಾ ಇದ್ದರೂ ಆತನು ತನ್ನ ಕರ್ತವ್ಯದ ಕಡೆಗೆ ಉದಾಸೀನನು' ಎಂದು ಹೇಳಬೇಕಾಗುತ್ತದೆ' ಎನ್ನುವಷ್ಟರಲ್ಲಿ 'ತಾತಾ, ತಾತಾ, ಬಂದೆಯಾ!' ಎಂಬ ಮಾತುಗಳು ಕೇಳಿಸಿದುವು. ಈ ಮಾತುಗಳು ಕಿವಿಗಳಲ್ಲಿ ಬಿದ್ದವೊ ಇಲ್ಲವೊ ಸೇಟಜಿಯು ತಲೆ ತಿರುಗಿದಂತಾಗಿ ಅಲ್ಲಿಯೆ ಕುಳಿತುಬಿಟ್ಟನು. ರಾಧೆಯು ಬೇಗಬೇಗನೆ ಓಡಿ ಬಂದು ಅವನಿಗೆ ಗಾಳಿ ಹಾಕಿ ಮಾರ್ಗದ ಬದಿಯಲ್ಲಿ ಒಂದು ಬಂಡೆಕಲ್ಲಿಗೆ ಒರಗಿಸಿ ಕುಳ್ಳಿರಿಸಿದಳು. ಅವನು ಸ್ವಲ್ಪ ಚೇತರಿಸಿಕೊಂಡನು. 'ತಾತಾ! ನೀನೇಕೆ ನನ್ನನ್ನು ಬಿಟ್ಟು ಹೋದೆ? ನಿನ್ನ ಕೈಯಲ್ಲಿ ಒಂದು ಕಾಸು ಕೂಡಾ ಇರಲಿಲ್ಲ! ನಿನಗೆಷ್ಟು ಪ್ರಯಾಸ ವಾಯಿತೊ! ನಿನ್ನನ್ನು ನಾವು ಅಲಕ್ಷ್ಯಮಾಡೇವೆಂದು ಸಂದೇಹಪಟ್ಟೆಯಾ? ನನ್ನ ತಂದೆಗಿಂತ ಹೆಚ್ಚು ಪ್ರೀತಿಯಿಂದ ನಾನು ನಿನ್ನನ್ನು ಕಾಣುತ್ತಿದ್ದೆನಲ್ಲ! ನೀನು ನಡೆದು ಬಹಳ ದಣಿದಂತೆ ಕಾಣುತ್ತದೆ. ಸ್ವಲ್ಪ ನೆರಳಲ್ಲಿ ವಿಶ್ರಮಿಸು, ಆ ಮೇಲೆ ಮನೆಗೆ ಹೋಗೋಣ!' ಎಂದು ಆತನ ಬಳಿಯಲ್ಲಿ ಕುಳಿತಳು. ಸೇಟಜಿಗೆ ರಾಧಾಬಾಯಿಯ ಪ್ರೀತಿಯ ಭರವನ್ನು ಕಂಡು ಆನಂದಬಾಷ್ಪ ಗಳು ಹೊರಟವು. 'ಮಗೂ! ರಾಧಾ! ನಿನ್ನ ಪ್ರೀತಿಯ ಪ್ರದರ್ಶನದಲ್ಲಿ ನಾನೇ ಧನ್ಯನು. ಬರೇ ತಕ್ಲಿಯಲ್ಲಿ ನೂಲುವುದಕ್ಕಿಂತ ಹೆಚ್ಚು ಹಣ ದುಡಿಯು ಲಿಕ್ಕೆ ಸಾಧ್ಯವಿದೆಯೆ, ನಿನ್ನ ಮನೆವಾರ್ತೆಯ ಖರ್ಚಿಗೆ ಏನಾದರೂ ಹೆಚ್ಚಿನ ಸಹಾಯ ಮಾಡಿ ನಿನ್ನ ಋಣದಿಂದ ಹೇಗೆ ವಿಮೋಚನೆಯಾಗಲಿ ಎಂದು ನೋಡುವುದಕ್ಕಾಗಿ ನಾನು ಹೊರಟುಹೋಗಿದ್ದೆ.

**ರಾಧೆ:**— ಅಂಥ ಉದ್ಯೋಗ ಸಿಕ್ಕಿತೇ?

**ಸೇಟಜೀ:**— ಇಲ್ಲ! ಇಲ್ಲ! ಇಲ್ಲಿ ಮೊದಲು ಇದ್ದಾಗ ಎಷ್ಟು ಬಡವ ನಿದ್ದೆನೊ ಅಷ್ಟೆ ಈಗಲೂ ಬಡವನಾಗಿದ್ದೇನೆ. ನನ್ನಂಥ ಮುದುಕರಿಗೆ ಯಾರು ಕೆಲಸ ಕೊಡುತ್ತಾರೆ? ಈಗ ಉದ್ಯೋಗ ಸಿಗುವುದು ಕಷ್ಟ.

**ರಾಧೆ**:—'ತನ್ನನ್ನು ಪ್ರೀತಿಸುವವರನ್ನು ಬಿಟ್ಟು, ಹಟಮಾರಿತನ ವನ್ನು—ಒರಟುತನವನ್ನು ಮಾಡಿ ಹೇಳದೆ ಹೋದರೆ ಅದೇ ಫಲ.' ಎಂದು ಮೆಲ್ಲಗೆ ಅವನ ಬೆನ್ನುತಟ್ಟಿದಳು.

ಸೇಟಜಿಯು ಈ ಚುಚ್ಚುವ ಮಾತುಗಳನ್ನು ಕೇಳಿ ವ್ಯಾಕುಲಚಿತ್ತನಾದ ನೆಂದು ರಾಧೆಗೆ ಗೊತ್ತಾಯಿತು. 'ಸಿಟ್ಟಾಗಬೇಡ, ತಾತಾ! ಬೇಸರಿಸಬೇಡ!' ಎಂದು ಅವಳು ಆತನನ್ನು ಸಮುದಾಯಿಸಿ ಕೈಗೆ ಹಿಡಿದು ಮೆಲ್ಲಗೆ ನಡಿಸ ತೊಡಗಿದಳು. ಅಷ್ಟರಲ್ಲಿ ಗೋಪಾಲನೂ ಅಲ್ಲಿಗೆ ಬಂದು ಅವನ ಇನ್ನೊಂದು ಕೈ ಹಿಡಿದು, ಹೀಗೆ ಮೂವರೂ ಮನೆಯನ್ನು ಸೇರಿದರು. ಹೋಗುತ್ತಾ ಸೇಟಜಿಯು 'ನನ್ನನ್ನು ರಾಜನು ಹುಡುಕಿದನೇ' ಎಂದು ಕೇಳಿದನು.

**ರಾಧೆ**:—ಹೌದು! ನೀನು ಮಲಗುವ ಹಾಸಿಗೆಯನ್ನು ಮೂಸುತ್ತಾ ಹೊರಗೆ ಓಡುತ್ತಾ ಹಿಂತಿರುಗಿ ಕೋಣೆಗಳಲ್ಲೆಲ್ಲ ಹುಡುಕುತ್ತ ಬಹಳ ಅಸಮಾ ಧಾನವನ್ನು ತೋರಿದನು. ಎಂಥ ಬುದ್ಧಿಯುಳ್ಳ ಪ್ರಾಣಿ!

**ಸೇಟಜೀ**:—ಎಷ್ಟೊ ವಿಶ್ವಾಸದ ಪ್ರಾಣಿ! ಎಷ್ಟೊ ನಂಬಿಕೆಯ ಪ್ರಾಣಿ!

**ಗೋಪಾಲ**:—ಹೌದು, (ನಸುನಗುತ್ತ) ಲೋಕದಲ್ಲಿ ಎರಡೇ ಪ್ರಾಣಿ ಗಳು ವಿಶ್ವಾಸಾರ್ಹರು! ನಾಯಿಯೊಂದು, ಪ್ರೀತಿಗೆ ಪಾತ್ರನಾದ ಗಂಡ ನೊಂದು!

**ಕಮಲೆ**:—'ಪ್ರೀತಿಗೆ ಪಾತ್ರಳಾದ ಹೆಂಡತಿ ಈ ವರ್ಗಕ್ಕೆ ಸೇರುವು ದಿಲ್ಲವೇ?' ಎಂದು ನಗುತ್ತ ಸರಸರನೆ ಮುಂದಕ್ಕೆ ನಡೆದಳು.

ಅಷ್ಟರಲ್ಲಿ ರಾಜನು ಓಡಿ ಓಡಿ ಬಂದು ಬೊಗಳುತ್ತ ಅವರನ್ನು ಸುತ್ತುತ್ತ ಸೇಟಜಿಯ ಹಾಗೂ ರಾಧೆಯ ಕೈಗಳನ್ನು ನೆಕ್ಕುವುದಕ್ಕೆ ಹಾರ ತೊಡಗಿತು. ಸೇಟಜಿಗೆ ಈ ನೋಟವನ್ನು ನೋಡಿದೊಡನೆ ಗಂಟಲು ಬೀಗಿಕೊಂಡು ಬಂತು. ಸ್ವರವು ಗದ್ಗದವಾಯಿತು. ಅವನು ಕಂಡ ಕನಸು ಈಗ ಸತ್ಯವಾಯಿತು. ತಾನು ಅಲ್ಲಿಂದ ಹೋಗಿ ಒಂದು ಯುಗ ವಾಯಿತೊ ಎಂಬಂತೆ ಭಾಸವಾಯಿತು. ಮನುಷ್ಯನಿಗೆ ತನ್ನನ್ನು ಅತಿ

ಹೆಚ್ಚಾಗಿ ಮಮತೆಮಾಡುವ ಒಂದು ವಸ್ತು ಇದೆ ಎಂಬ ಭಾವನೆಯೆ ತನ್ನ ಕೆಲಸಗಳಿಗೆಲ್ಲ ಪ್ರೋತ್ಸಾಹಕೊಡುತ್ತದೆ. ಆ ಒಂದು ವಸ್ತುವಿಗೋಸ್ಕರ ಸಭ್ಯನಾಗಬೇಕೆಂದೂ ತನ್ನ ಕಾರ್ಯಗಳೂ ಉದ್ದೇಶಗಳೂ ನಿಷ್ಪೃಹವಾಗಿರ ಬೇಕೆಂದೂ ಆಕಾಂಕ್ಷೆ ಬರುತ್ತದೆ. ಇಂಥ ಮನೋವೃತ್ತಿಯಿಂದ ಸೇಟ ಜಿಯು ರಾಧಾಬಾಯಿಯ ಮನೆಯನ್ನು ಸೇರಿ, ಮೊಗಸಾಲೆಯ ಜಗಲಿಯ ಮೇಲೆ ಕುಳಿತನು. ಕುಳಿತೊಡನೆ ಎರಡು ದಿನಗಳಲ್ಲಿ ಉಂಟಾದ ಆಯಾಸ ದಿಂದ ಅವನಿಗೆ ಅಲ್ಲಿಯೆ ನಿದ್ದೆ ಹತ್ತಿದಂತಾಯಿತು. ನಿಜವಾಗಿಯೂ ಆತ ನಿಗೆ ಕಣ್ಣುಕತ್ತಲೆ ಬಂದಿತ್ತು. ಅರ್ಧ ತಾಸಿನ ಮೇಲೆ ಅವನಿಗೆ ಸ್ಮೃತಿ ಬಂತು. ಅವನಿಗೆ ಮೊದಲು ಆರೈಕೆ ಮಾಡಿದ ಗುಂಡುಬುವಾನೂ ಅವನ ನಾಡಿಯನ್ನು ಪರೀಕ್ಷಿಸುತ್ತ ಕುಳಿತಿದ್ದನು ಎಂದು ಕಂಡು 'ಏನು ನೋಡುತ್ತೀರಿ? ನನಗೆ ಸ್ವಲ್ಪ ಆಯಾಸವಾಗಿತ್ತು, ಅಷ್ಟೆ!' ಎಂದನು.

**ಗುಂಡುಬುವಾ**:—'ಹೌದು ಹೌದು! ನೀವಿನ್ನು ಮೈಯ ಮೇಲೆ ದಣುಹಾಕಿಕೊಳ್ಳಬಾರದು. ನೀವು ಸ್ವಲ್ಪ ದಿನಗಳ ವರೆಗೆ ಹೊರಗೆ ಹೋಗ ಬಾರದು, ನಿಮಗೆ ಈಗ ತಾರುಣ್ಯವಲ್ಲ! ಚೆನ್ನಾಗಿ ವಿಶ್ರಾಂತಿತೆಗೆದುಕೊಳ್ಳ ಬೇಕು.' ಎಂದು ಹೇಳಿ ಬೀದಿಗಿಳಿದು ರಾಧೆಯನ್ನು ಹೊರಗೆ ಕರದು 'ಅಮ್ಮಾ! ತಾತಾಜಿಯ ಎದೆಗುಂಡಿಗೆ ಬಹಳ ಬಲಹೀನವಾಗಿದೆ. ಆದ್ದ ರಿಂದ ಆತನಿಗೆ ತುಂಬಾ ವಿಶ್ರಾಂತಿ ಬೇಕು.' ಎಂದು ಎಚ್ಚರಿಸಿ ಹೋದನು.

ಹೀಗಾಗಿ ಯಾವನ ಆಗಮನವನ್ನು ಮುಂಬೈ ಪೂನೆಗಳ ಶ್ರೀಮಂತರು ಹಾರೈಸಿ ಅವನ ಕಾರುಣ್ಯದ ದೃಷ್ಟಿಯು ತಮ್ಮ ಮೇಲೆ ಬಿದ್ದರೆ ತಾವು ಧನ್ಯರಾದೇವು ಎನ್ನುತಿದ್ದರೊ, ಯಾವಾತನ ಅತುಳೈಶ್ವರ್ಯವನ್ನು ಸೆಳೆಯುವು ದಕ್ಕೆ ದೊಡ್ಡ ದೊಡ್ಡ ಶ್ರೀಮಂತ ಸ್ತ್ರೀಯರು ಆತನನ್ನು ಅಳಿಯನಾಗಿ ಮಾಡಿಕೊಳ್ಳಲು ಹಾತೊರೆಯುತಿದ್ದರೊ, ಯಾವನನ್ನು ಮೆಚ್ಚಿಸಿ ಪಾರಿ ತೋಷಕ ಪಡೆಯಲಿಕ್ಕೆಂದು ಸಾವಿರಾರು ಪರಪುಷ್ಟಜೀವಿಗಳಾದ ಮುಖಸ್ತುತಿ ಮಾಡುವವರು ಅವನ ತಾಳಕ್ಕೆ ಕುಣಿಯುತಿದ್ದರೊ, ಅಂಥವನೆಂದು ಗೊತ್ತಾ ಗದೆ ಬರಿ ದೀನನಾದ ಬಡ ಮನುಷ್ಯನೆಂಬ ಭ್ರಮೆಯನ್ನು ತಳೆದು ಕೂಡಾ ಅವಿರತಶ್ರಮದಿಂದ ರಾಧೆಯೂ ಗೋಪಾಲನೂ ಅವನ ಆರೈಕೆ ನೋಡು

ತ್ತಿರುವುದು ವಿಚಿತ್ರವೇ ಸರಿ. ದ್ರವ್ಯಲೋಭವು ಅವರ ಕಡೆಗೆ ಕಣ್ಣೆತ್ತಿ ಸುಳಿಯುತ್ತಿರಲಿಲ್ಲ. ದೊಡ್ಡ ಶಹರಿನ ಕೃತಕಜೀವನವನ್ನು ತೃಣೀಕರಿಸಿ ಹಳ್ಳಿಗಾಡಿನ ವಾಸಕ್ಕೆ ಹೆಗಲೊಡ್ಡಿ ಕಾಲಯಾಪನೆ ಮಾಡುತ್ತಿರುವ ಸುಶಿಕ್ಷಿತ ತರುಣನೊಬ್ಬನು, ತನ್ನ ಬಡತನದ ಅಲ್ಪಜೀವನದಲ್ಲಿ ಸಂತುಷ್ಟಿ ಪಡೆದು, ಮಹತ್ವಾಕಾಂಕ್ಷೆಗಳಿಗೆ ಎಡೆಕೊಡದೆ, ಶುದ್ಧಾಚರಣೆಯಿಂದಿರುವ ತರುಣಿಯೊಬ್ಬಳು ಈ ರೀತಿಯಿಂದ ಸೇಟಜೀಯ ಆರೈಕೆ ನೋಡುವಾಗ ಅವನಿಗೆ ಸ್ವರ್ಗಕ್ಕೆ ಮೂರೇ ಬೆರಳು ಉಳಿದಂತಾಯಿತು. ಆ ಊರಿನ ಜನರಿಗೂ ಸೇಟಜಿಯು ಬಂದ ವರ್ತಮಾನ ಕೇಳಿ ಹರುಷವಾಗಿತ್ತು. ಅವನನ್ನು ನೋಡಿ ಮಾತನಾಡಿಸುವುದಕ್ಕೆಂದು ಸುಬ್ಬಾಭಟ್ಟನೂ ಅವನ ಹೆಂಡತಿಯೂ ಆಗಾಗ ಬಂದು ಹೋಗುತಿದ್ದರು. 'ನಾನು ಅಂದೇ ಹೇಳಲಿಲ್ಲವೆ, ತಾತಾಜಿಯೂ ಹಿಂತಿರುಗಿ ಬಂದಾನೆಂದು? ಅವನು ಹೋದ ದಿನವೇ ನಾನು ನನ್ನ ರಾಮಾಯಣದ ಪುಸ್ತಕದಲ್ಲಿ ಕಡ್ಡಿಹಾಕಿ ನೋಡಿದೆ. 'ಕಾಡಿನಲ್ಲಿ ಲಕ್ಷ್ಮಣನು ಕೊಂಡುಹೋಗಿ ಬಿಟ್ಟ ಸೀತೆಯು ವಾಲ್ಮೀಕಿಯ ಆಶ್ರಮವನ್ನು ಸೇರಿದಳು' ಎಂದು ಮಾತುಗಳು ಕಣ್ಣಿಗೆ ಬಿದ್ದವು. ಆಗಲೇ ತಾತಾಜಿಯು ಈ ಆಶ್ರಮವನ್ನು ಸೇರುವನೆಂದು ನನಗೆ ಗೊತ್ತು.' ಎಂದು ಸುಬ್ಬಾಭಟ್ಟನ ಹೆಂಡತಿ ಹೇಳಿದ್ದಳು. ಸುಬ್ಬಾಭಟ್ಟನು 'ತಾತಾಜಿ! ನೀವು ಕೆಲಸ ಹುಡುಕುವುದಕ್ಕೆ ಹೊರಟಿರೆ? ನಿಮ್ಮಂಥ ಮುದುಕರು! ಎಂಥ ಕೈಗೆಲಸ ಮಾಡುವಿರಿ? ನನ್ನ ಕೂಲಿಯುವರು ಕಟ್ಟಿಗೆ ತೂಕ ಮಾಡಿ ಬಂಡಿಯಲ್ಲಿ ಹೇರುವಾಗ ತೂಕ ಸರಿಯೊ ಎಂದು ನೋಡಿ ಲೆಕ್ಕ ಬರೆದಿಡಲಿಕ್ಕೆ ಬಂದರೆ ನಾನೇ ದಿನಕ್ಕೆ 4 ಆಣೆಯಂತೆ ಕೊಟ್ಟೇನಲ್ಲ! ನಿಮ್ಮ ದೇಹಕ್ಕೆ ಆಯಾಸವೇನೂ ಇಲ್ಲ. ಹೇಗೂ ನಿಮ್ಮ ಮೈಯಲ್ಲಿ ಸ್ವಲ್ಪ ತ್ರಾಣವಾಗಲಿ. ಆ ಮೇಲೆ ನನ್ನ ಕಟ್ಟಿಗೆ ಚಪ್ಪರಕ್ಕೆ ಬನ್ನಿ' ಎಂದನು.

ಆಗ ಸೇಟಜಿಯು 'ಹಾಗೆಯೇ ಆಗಲಿ. ನಿಮ್ಮ ಪುಣ್ಯಕಾರ್ಯಕ್ಕೆ ನಿಮಗೆ ದೇವರು ಇಹದಲ್ಲಿ ಇಲ್ಲವಾದರೆ ಪರದಲ್ಲಾದರೂ ಒಳ್ಳಿತನ್ನು ಮಾಡುವನು' ಎಂದು ಸುಬ್ಬಾಭಟ್ಟನನ್ನು ಆಶೀರ್ವದಿಸಿದನು.

ಅಷ್ಟರಲ್ಲಿ ಗೋಪಾಲನು ಮನೆಯೊಳಕ್ಕೆ ಬಂದು 'ತಾತಾಜಿ! ಆ ಕೋಟ್ಯಾಧೀಶನು ಸತ್ತು ಹೋಗಿಲ್ಲವಂತೆ! ಏನೊ ಕಾರ್ಯಾಂತರದಿಂದ ಮುಂಬಯಿಯನ್ನು ಬಿಟ್ಟವನು ಇನ್ನು ಕೆಲವು ದಿನಗಳಲ್ಲಿಯೇ ಮುಂಬಯಿಗೆ ಬಂದು ತಲಪುವನಂತೆ. ಅವನ ಸೊಲಿಸಿಟರು ಆ ವಿಷಯವನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಅವನ ಆಗಮನಕ್ಕೆ ಸರಿಯಾಗಿ ಅವನ ಮಲಬಾರಹಿಲ್ಲಿನ ಬಂಗಲೆಯನ್ನು ಸಜ್ಜುಗೊಳಿಸುವ ಕೆಲಸಕ್ಕೆ ಕೈಹಚ್ಚಿದೆ ಎಂದೂ ತಿಳಿಸುತ್ತಾರೆ. ಆ ವಿಮಲೆಯ ಸೌಭಾಗ್ಯವೆನ್ನಬೇಕು. ಅವಳು ಹೇಗೂ ಆ ಜಬ್ಬನನ್ನು ತನ್ನ ಪದರಿನಲ್ಲಿ ಹಾಕಿಕೊಳ್ಳದೆ ಇರುವುದಿಲ್ಲ. 'ಅಲ್ಲಲ್ಲಿಯ ಸೊಲ್ಲು' ಎಂಬ ಶಿರನಾಮೆಯಲ್ಲಿ ಮುಂಬಯಿಯ ದಿವಾಳಿ ಖೋರರೆಲ್ಲ ಆತನ ಆಗಮನದಿಂದ ತಮ್ಮ ಸ್ಥಿತಿ ಹೇಗೆ ಮಾರ್ಪಟ್ಟೀತು ಎಂದು ಎಣಿಕೆಹಾಕುತ್ತಲಿದ್ದಾರಂತೆ. ವ್ಯಾಪಾರಿವರ್ಗದಲ್ಲಿ ಒಂದು ಕಡೆ ಆತನ ಭಯ, ಇನ್ನೊಂದು ಕಡೆ ಆತನು ಬರುವುದರಿಂದ ವ್ಯಾಪಾರಕ್ಕೆ ಸಿಗುವ ಪುಷ್ಟಿ ಇವುಗಳ ಕಲಹವು ನಡೆದಿದೆಯಂತೆ! ಅವನು ಬಂದೊಡನೆ ಕೊಡುವ ಟೀಪಾರ್ಟಿಗೆ ಹೋಗುವುದಕ್ಕೆ ಎಷ್ಟೊ ಸಮಾಜಸ್ತಂಬಗಳಾದ ಸ್ತ್ರೀಯರು ಹೊಸ ವಜ್ರದ ಹತ್ಕುಡುಕು, ಇತ್ಯಾದಿ ಚಿನ್ನಾಭರಣ ಉಡಿಗೆ ತೊಡಿಗೆಗಳನ್ನು ತರಿಸುವ ತವಕದಲ್ಲಿದ್ದಾರಂತೆ!'

**ಸೇಟಜೀ:**— ಈ ಕೋಟ್ಯಾಧೀಶರ ಹಣವು ತಾನಾಗಿಯೆ ಜೇಡನಂತೆ ಅಸಂಖ್ಯ ಮರಿಗಳನ್ನು ಇಡುತ್ತಿದ್ದರೆ ಅವರೇನು ಮಾಡಬೇಕು, ಪಾಪ!

**ಗೋಪಾಲ:**—(ತುಸು ಹೊತ್ತು ಯೋಚಿಸಿ) ಶಿಕ್ಷಣ ಮತ್ತು ಸಾಹಿತ್ಯದ ಅಭಿವೃದ್ಧಿಯ ಕಡೆಗೆ ಅವರು ಪ್ರೋತ್ಸಾಹ ಕೊಡಬಹುದು. ಆದರೆ ಯಾರಿಗೆ ಶಿಕ್ಷಣ ಹೊಂದಲಿಕ್ಕೆ ಪ್ರಯಾಸ ಬೀಳಲಿಲ್ಲವೋ ಅಂಥವರು ಅಪೂರ್ಣ ಶಿಕ್ಷಿತರಾಗುತ್ತಾರೆ. ಬೇರೆ ಯಾವ ವಸ್ತುಗಳೂ ಬೆಲೆ ಕೊಡದಿದ್ದರೆ ಸಿಗುವುದಿಲ್ಲ. ಆಗ ಬೆಲೆ ಕೊಡದೆ ಶಿಕ್ಷಣ ಸಿಕ್ಕಿದರೆ ಅದರ ಬೆಲೆ ತಾನಾಗಿಯೇ ತಗ್ಗುತ್ತದೆ. ಎಂಡ್ರೂ ಕಾರ್ನೆಗಿಯಂಥವರು ಪರೋಪಕಾರ ಮಾಡುತ್ತೇವೆಂದು ಭಾವಿಸಿ ದ್ರವ್ಯಸಹಾಯವನ್ನು ವಿಶ್ವವಿದ್ಯಾಲಯಗಳಿಗೆ ಒದಗಿಸಿಕೊಟ್ಟು ನಿಜವಾಗಿಯೂ ಅಪಕಾರ ಮಾಡುತ್ತಾರೆ. ಯಾಕಂದರೆ

ತನ್ನ ಪ್ರಯತ್ನದ ಮೇಲೆ ಆಧರಿಸಿ ತನ್ನ ಸ್ವಂತ ಶಕ್ತಿಯನ್ನು ಬೆಳೆಯಿಸುವ ಹವ್ಯಾಸಕ್ಕೆ ಜನರು ಹಿಂದೆ ಸರಿಯುತ್ತಾರೆ. ಅವರ ಸ್ವಾಭಾವಿಕ ಶಕ್ತಿಯೇ ಕುಗ್ಗಿಹೋಗುತ್ತದೆ. ಬೆಲೆಕೊಡದೆ ಸಿಗುವ ವಸ್ತುವಿಗೆ ಯಾರೂ ಮಹತ್ವ ಕೊಡುವುದಿಲ್ಲ. ಅಂಥ ದಾನವು ಆತ್ಮಪ್ರತಿಷ್ಠೆಯ ಪ್ರದರ್ಶನಕ್ಕಾಗಿಯೇ! ಭಗವಂತನಿಗೂ ಕೂಡಾ ನಾವು ಒಳಕ್ಕೆ ಸೇದುವ ಶುದ್ಧ ಗಾಳಿಗೋಸ್ಕರ ಬೆಲೆ ತೆರಬೇಕಾಗಿರುತ್ತದೆ. ಬೆಲೆ ತೆರದೆ ನಾವು ಸೃಷ್ಟಿಯೊಳಗಿಂದ ಯಾವು ದನ್ನಾದರೂ ಕಸುಕೊಂಡರೆ ಅದರ ಬೆಲೆಯನ್ನು ಚಕ್ರಬಡ್ಡಿಯಿಂದ ಎಣಿಸಿ ಆತನಿಗೆ ಕೊಡಬೇಕಾಗುತ್ತದೆ. ಆತನಲ್ಲಿ ಆ ವಿಷಯದಲ್ಲಿ ರಿಯಾ ಯಿತಿಯೇ ಇಲ್ಲ.

**ಸೇಟಜೀ:**—ಹಾಗಿದ್ದರೆ ಪಾಪಿಗಳೆನ್ನಿಸುವ ಆ ಶ್ರೀಮಂತರು ತಮ್ಮ ಧನವನ್ನು ಹೇಗೆ ವಿನಿಯೋಗಿಸಬೇಕು ಎನ್ನುವಿರಿ? ಈಗ ನಿಮ್ಮ ಕೈಗೆ ದೈವ ವಶಾತ್ ಹೇರಳ ಹಣ ಬಂತೆಂದು ಭಾವಿಸಿರಿ. ಅದನ್ನು ಹೇಗೆ ಉಪಯೋಗಿ ಸುವಿರಿ? ಖಲೀಪ ಹಾರೂನ ಅಲರಷೀದನಂತೆ ಗುಪ್ತಸಂಚಾರ ಮಾಡಿ ಯಾರ್‍ಯಾರಿಗೆ ಯಾವ್ಯಾವ ರೀತಿಯ ದ್ರವ್ಯಸಹಾಯ ಸಿಗಬೇಕು, ಬಡ ಜನರ ಉದ್ಧಾರಕ್ಕೆ ನಿಜವಾಗಿ ಬೇಕಾದ ಸೌಕರ್ಯಗಳು ಯಾವವು, ಅವನ್ನು ಹೇಗೆ ಒದಗಿಸಿಕೊಡಬೇಕು ಎಂಬದನ್ನು ವಿಚಾರಿಸಿ ಅದಕ್ಕೆ ಹಣವನ್ನು ಗುಪ್ತ ದಾನ ಮಾಡಲಿರುವಿರಾ?

**ಗೋಪಾಲ:**—'ಹೌದು, ಹಾಗೆಯೇ ಸರಿ. ಬಲಕೈಯಿಂದ ಇತ್ತ ದಾನದ ಸಮಾಚಾರ ಎಡಕೈಗೆ ತಿಳಿಯಬಾರದು ಎಂಬಂತೆ ಗೋಪ್ಯವಾಗಿರ ಬೇಕು. ಸಿಕ್ಕಿದವರಿಗೆ ದಾನಧರ್ಮಮಾಡುವುದೆಂದರೆ ಅಪಾತ್ರದಾನ. ದಾನಕೊಡುವವನಿಗೆ ದೇಶದಲ್ಲಿ ಕೀರ್ತಿ ಸಿಗುವುದಕ್ಕೆ ಮಾತ್ರ ಕಾರಣವಾಗು ತ್ತದೆ. ಬಡವನ ವೇಷದಿಂದ ದಾನ ಬೇಡುವವರಲ್ಲಿ ಎಷ್ಟು ಜನ ಹಣವನ್ನು ಕಟ್ಟಿಟ್ಟು ವಿಪರೀತ ಬಡ್ಡಿಗೆ ಇತರರಿಗೆ ಸಾಲಕೊಡುತ್ತಾರೆಂದು ನಿಮಗೆ ತಿಳಿಯುವುದೇ? ಮುಂಬಯಿಯಲ್ಲಿ ಮುಂಬಾದೇವಿ ದೇವಸ್ಥಾನದ ಬಳಿ ಯಲ್ಲಿ ಒಬ್ಬ ಕುರುಡ ಭಿಕ್ಷು ಕುಳಿತುಕೊಳ್ಳುತಿದ್ದನು. ದೇವಸ್ಥಾನಕ್ಕೆ ಬರುವವರೆಲ್ಲರೂ ಕಾಸುದುಗ್ಗಾಣಿ ಅವನಿಗೆ ಕೊಡುತಿದ್ದರು. ಅವನು ಅಂಗವಿಹೀನನು, ದುಡಿತಕ್ಕೆ ಶಕ್ತಿ ಇಲ್ಲ ಎಂದು ಹಲವರ ಅಭಿಪ್ರಾಯ.

ನಾನು ಇಲ್ಲಿ ಬರುವ ಕೆಲವು ದಿನಗಳ ಹಿಂದೆ ಅವನು ಸತ್ತುಹೋದನು. ಅವನಿಗೆ ಯಾರೂ ನೆಂಟರಿಷ್ಟರು ಇರಲಿಲ್ಲ. ಸರಕಾರದವರು ಅವನ ಹೆಣ ವನ್ನು ಪರೀಕ್ಷಿಸುವಾಗ ಅವನ ಅಂಗಿಯ ಒಳಕಿಸೆಯಲ್ಲಿ ನೂರು ರೂಪಾ ಯಿಯ 5 ನೋಟುಗಳು ಇದ್ದವು. (ಚಕಿತನಾಗಿ ಗೋಪಾಲನ ಕಡೆಗೆ ಸೇಟಜಿಯು ನೋಡುತಿದ್ದು ತನ್ನ ಮರಣಕಾಲದಲ್ಲಿಯೂ ಇದೇ ಸ್ಥಿತಿ ಬರು ವುದೇ ಎಂದು ಯೋಚಿಸಿದನು.) ಇನ್ನು ಕೆಲವು ಭಿಕ್ಷುಗಳು ತೋಟಿಗಳಿಗೆ, ರಸ್ತೆಗುಡಿಸುವವರಿಗೆ ಸೇಕಡಾ 25ರ ದರದಲ್ಲಿ ಸಾಲಕೊಡುತ್ತಾರೆ. ಇಂಥ ವರಿಗೆ ದಾನ ಕೊಟ್ಟರೆ ಫಲವೇನು?' ಹೀಗೆಂದು ಚರ್ಚಿಸುತ್ತ ಹೊತ್ತುಕಳೆದು ಕತ್ತಲಾದೊಡನೆ ಗೋಪಾಲನು ತನ್ನ ಬಿಡಾರಕ್ಕೆ ಹೋದನು. ಈ ಮಾತು ಗಳು ಸೇಟಜಿಯ ಮನಸ್ಸಿನಲ್ಲಿಯೇ ಕುದಿಯುತಿದ್ದುವು.

ಹೀಗಾಗಿ ರಾತ್ರೆ ರಾಧೆಯು ಮಲಗಿದ ಮೇಲೆ ಸೇಟಜೀಯು ತನ್ನ ಕೋಣೆಯಲ್ಲಿ ಎದ್ದು ಕುಳಿತು ದೀಪ ಹಚ್ಚಿ ತನ್ನ ವಕೀಲನಿಗೆ ವೀಲಿ ನೊಂದಿಗೆ ಬರೆದು ಇಟ್ಟ ಪತ್ರಕ್ಕೆ ಕೆಲವು ಸೂಚನೆಗಳನ್ನು ಕೂಡಿಸಿ ಬರೆ ದನು. ತನ್ನ ತುಂಡಂಗಿಯ ಒಳಕಿಸೆಯ ಹೊಲಿಗೆಯನ್ನು ಬಿಚ್ಚಿ ಆ ನೋಟುಗಳನ್ನು ಒಂದು ಲಕೋಟೆಯಲ್ಲಿ ಹಾಕಿ ಅದರೊಂದಿಗೆ ವೀಲನ್ನೂ ತನಗೆ ಖರ್ಚಿಗಾಗಿ ಶಾಂತಿಯನು ಕೊಟ್ಟ ಹಣವಿಟ್ಟ ಸಣ್ಣ ಚೀಲವನ್ನೂ ಒಟ್ಟಿಗೆ ಕಟ್ಟಿ, ಒಂದು ದೊಡ್ಡ ಲಕೋಟೆಯೊಳಗೆ ಇಟ್ಟು ಮುದ್ರೆ ಮಾಡಿ, ಅದನ್ನು ತನ್ನ ಸೊಲಿಸಿಟರನ ವಿಳಾಸಕ್ಕೆ ಬರೆದು, ಅದನ್ನು ಇನ್ನೊಂದು ದೊಡ್ಡ ಲಕೋಟೆಯಲ್ಲಿಟ್ಟು, ಅದರ ಮೇಲೆ ಜಹಾಂಗೀರನ ಗುಮಾಸ್ತನ ಹೆಸರು ಮತ್ತು ವಿಳಾಸವನ್ನು ಬರೆದು ತನ್ನ ಅಂಗಿಯ ಒಳಕಿಸೆಯಲ್ಲಿಟ್ಟು ಅದನ್ನು ಹಾಗೆಯೇ ತನ್ನ ಕೋಣೆಯ ಕಪಾಟಿನೊಳಗಿಟ್ಟು ಬೀಗಹಾಕಿ ದನು. ಆ ಮೇಲೆ 'ನಾನು ಈ ಲೋಕದಲ್ಲಿ ಮಾಡತಕ್ಕ ಕೆಲಸವೆಲ್ಲ ಮುಗಿಯಿತು, ಹೇಗೂ ಇರಲಿ, ನಾನು ಸಂಗ್ರಹಿಸಿಟ್ಟ ಧನದಿಂದ ಲೋಕ ಕ್ಕಾದರೂ ಪ್ರಯೋಜನವಾಗುವ ಹಾಗೆ ದೇವರು ಮಾಡಲಿ' ಎಂದು ದೇವರನ್ನು ಪ್ರಾರ್ಥಿಸುತ್ತ ನಿದ್ದೆಹೋದನು.

---

## ೨೧ನೆ ಅಧ್ಯಾಯ

## ಸೇಟಜಿಯ ನಿರ್ಯಾಣ

ಬೇಸಿಗೆ ಕಾಲದ ಕೊನೆಯ ಸಮಯವು ಸಮೀಪಿಸಿತ್ತು. ಹಗಲಲ್ಲಿ ಸೂರ್ಯನ ಪ್ರಖರವಾದ ಕಿರಣಗಳು ನೆಲವನ್ನೆಲ್ಲ ಸುಡುತಿದ್ದರೂ ಸಾಯಂ ಕಾಲದಲ್ಲಿ ಸೂರ್ಯನ ಅಸ್ತಮಾನವು ಕಡಲದಂಡೆಯಲ್ಲಿ ನಿಂತು ನೋಡು ವವರಿಗೆ ತುಂಬಾ ಸಂತೋಷಕೊಡುತಿತ್ತು. ಸೇಟಜಿಯು ಕಡಲದಂಡೆ ಯಲ್ಲಿದ್ದ ಬಂಡೆಕಲ್ಲಿಗೆ ಒರಗಿ ಕುಳಿತು ಸೂರ್ಯಾಸ್ತಮಯವನ್ನು ನಿರೀಕ್ಷಿಸು ತಿದ್ದನು. ಅಂತೆಯೇ ತನ್ನ ಜೀವನದ ಸಂಧ್ಯಾಕಾಲವೂ ಸಮೀಪಿಸಿತು ಎಂದು ಅವನು ಒಂದೊಂದು ಸಲ ವ್ಯಸನಪಡುತಿದ್ದನು. ನಿಷ್ಕಾಮಪ್ರೇಮದ ಪ್ರವಾಹದಲ್ಲಿ ಮಿಂದ ಅವನಿಗೆ ಈಗ ಇದೇ ಸ್ವರ್ಗವಲ್ಲವೇ ಎಂಬಂತೆ ಭಾಸವಾಗುತಿತ್ತು. ಒಂದೊಂದು ಸಲ 'ಹಿಂದಿನ ಜನ್ಮದಲ್ಲಿ ನಾನು, 'ಈ ಜ್ಞಾತಜನ್ಮವನ್ನು ನೀಗಿಸಿ ಅಜ್ಞಾತವಾದ ಇನ್ನೊಂದು ಜನ್ಮಕ್ಕೆ ಯಾತಕ್ಕೆ ಕಳುಹಿಸುವೆ? ಅಲ್ಲಿ ಏನು ಕಷ್ಟಗಳು ಬರುವವೆಂದು ನಾನು ಅರಿಯೆ!' ಎಂದು ದೇವರನ್ನು ದೂರಿರಬಹುದು. ಆದರೂ ದೇವರು ನನ್ನ ಅನುಮತಿ ಯಿಲ್ಲದೆ ನನ್ನನ್ನು ಈ ಜನ್ಮಕ್ಕೆ ದೂಡಿದನು. ಏತಕ್ಕೆ? ಒಂದು ನೂತನ ಪಾಠವನ್ನು ಕಲಿಯಲಿಕ್ಕೆ. ಈ ಜನ್ಮದಲ್ಲಿ ನಿಜವಾಗಿ ನಾನು ಕಲಿತದ್ದೂ ಅದೇ. 'ಪ್ರಕೃತಿಯ ನಿಯಮಗಳಲ್ಲಿ ದ್ರವ್ಯಾರ್ಜನೆ ಎಂಬದು ಅತಿ ಕ್ಷುಲ್ಲಕ ವಿಷಯ. ದ್ರವ್ಯವು ನಾಶವಾಗತಕ್ಕ ವಸ್ತು. ಅದನ್ನು ಸಂಗ್ರಹಿಸಿದವನೂ ತೀರಾ ಬಡವನಾದವನೂ ಹೆಣವಾದ ಮೇಲೆ ಒಂದೇ ರೀತಿಯ ಬಿದಿರಿನ ಪಲ್ಲಕಿಯಲ್ಲಿ ಮೈಯಲ್ಪಡುತ್ತಾರೆ. ಧನಿಕನು ತನ್ನ ಹಣವನ್ನೆಲ್ಲ ಇಲ್ಲೆ ಬಿಟ್ಟುಹೋಗುತ್ತಾನೆ. ತನ್ನೊಂದಿಗೆ ಕೊಂಡುಹೋಗಲಾರನು. ಆದರೂ ಅದರ ಸಂಗ್ರಹಕ್ಕೆ ಎಷ್ಟು ಪ್ರಯತ್ನ! ಎಷ್ಟು ಸಾಹಸ! ಈ ದ್ರವ್ಯಾ ಕಾಂಕ್ಷೆಯು ಎಷ್ಟು ಮತ್ಸರ, ಎಷ್ಟು ಅನೀತಿ, ದುರ್ನಡತೆಗಳಿಗೆ ಎಡೆ ಕೊಡುತ್ತದೆ!' ಎಂಬ ಪಾಠವನ್ನು ಕಲಿತೆನು. ಹೀಗಿದ್ದುದರಿಂದ ಮುಂದಿನ ಜನ್ಮದಲ್ಲಿ ನಾನು ಮೇಲಿನ ವರ್ಗಕ್ಕೆ ಸೇರುವೆನೇ?' ಎಂದು ಅವನು ವಿಚಾರಮಾಡುತಿದ್ದನು. ಮತ್ತು ಆ ವಿಷಯಗಳನ್ನು ತನ್ನ ಬಳಿಗೆ ಬಂದವ

ರೊಡನೆಯೂ ಚರ್ಚಿಸುತಿದ್ದನು. ಒಂದು ದಿನ ಯಾವನೊ ಒಬ್ಬ ರಾಜನನ್ನು ವಿಲಾಯತಿಯಲ್ಲಿ ಅರಾಜಕ ಪಕ್ಷದವನು ಕೊಂದನು ಎಂಬ ವಿಷಯವನ್ನು ಪತ್ರಿಕೆಯಿಂದ ಓದಿ ಒಬ್ಬರು ಹೇಳಿದರು. ಸೇಟಜಿಯು ಆ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಲಿಲ್ಲ. ಆದರೆ ಎಳೆ ರಕ್ತದ ಗೋಪಾಲನು ಮಾತ್ರ ಬಾಯಿಯ ಬೀಗ ತೆಗೆದು ನಾಲಗೆ ಹರಿದಾಡಿಸತೊಡಗಿದನು. 'ಅರಸರು ತಮ್ಮ ವಿಚಿತ್ರರೀತಿಯ ಸುಖಸೌಕರ್ಯಗಳಿಗೆ ನೀರಿನಂತೆ ಹಣವನ್ನು ವೆಚ್ಚಮಾಡುವಾಗ ತಮ್ಮ ಪ್ರಜೆಗಳ ಹಿತಕ್ಕಾಗಿ—ದಾರಿದ್ರ್ಯಪೀಡಿತರಾಗಿ ದಿವಾರಾತ್ರೆ ನರಳುತ್ತಿರುವವರ ಹಿತಕ್ಕಾಗಿ ಯಾಕೆ ಅದನ್ನು ವೆಚ್ಚಮಾಡಲಾರರು? ಈ ರೀತಿಯಲ್ಲಿ ಒಂದು ಕಡೆಯಲ್ಲಿ ಬಡತನದ ದಳ್ಳುರಿಯು ವ್ಯಾಪಿಸುವಾಗ ಇನ್ನೊಂದು ಕಡೆಯಲ್ಲಿ ಕುಬೇರನ ಸಂಪತ್ತಿದ್ದರೂ ಆ ದಳ್ಳುರಿ ಲೋಕವನ್ನೆ ಸುಡದೆ ನೊಂದಿಹೋಗುವುದೇ? ಲೋಕದಲ್ಲಿ ಅನುಕರಣಶಕ್ತಿಯೇ ಮಹತ್ವದ್ದು. ಅದು ಒಳ್ಳೆ ದಾರಿಯನ್ನು ಅನುಸರಿಸಿದರೆ ಶುಭವಾಗುತ್ತದೆ. ಕೆಟ್ಟ ದಾರಿಯನ್ನು ಹಿಡಿದರೆ ಅಶುಭವಾಗುತ್ತದೆ. ಆದ್ದರಿಂದ ಅದರ ಭಾರವು ಮಾರ್ಗದರ್ಶಕರ ಮೇಲೆ ಹೊಂದಿರುತ್ತದೆ. ಒಂದು ಕಾಲದಲ್ಲಿ ಮಹಾಪುರುಷರ ಸಾಹಸಗಳನ್ನು ವರ್ಣಿಸಿ, ಅವರ ಧ್ಯೇಯವನ್ನು ಕೈಕೊಳ್ಳಲು ಯತ್ನಿಸುತಿದ್ದರು. ಈಗಲಾದರೊ ಕ್ಷುಲ್ಲಕವಿಷಯಗಳ ವರ್ಣನೆಯೆ ಹೆಚ್ಚು. ಎಲ್ಲಿ ನೋಡಿದರಲ್ಲಿ ಅಲ್ಪವಿಷಯಗಳಿಗೆ ಮಹತ್ವ. ಈ ರೀತಿಯ ಮನೋವೃತ್ತಿಗಳ ಪರಿವರ್ತನೆಯೆ ಲೋಕಕಲ್ಯಾಣಕ್ಕೆ ಬಾಧಕಕರವಾಗಿದೆ. ದರಿದ್ರರ ಮನಸ್ಸನ್ನು ಕಲುಷಿತವಾಗಿ ಮಾಡಿ ಅವರಲ್ಲಿ ನಿರಾಸೆ, ಅರಾಜಕತ್ವದ ಬೀಜಗಳನ್ನು ಬಿತ್ತುತ್ತದೆ.' ಈ ರೀತಿಯ ಭಾಷಣವು ಅಲ್ಲಿ ಕುಳಿತವರಲ್ಲಿ ಒಂದು ಬಗೆಯ ಉದ್ರೇಕವನ್ನು ಮಾಡುತಿತ್ತು. 'ಗೋಪಾಲರಾಯರೇ! ನಿಮ್ಮ ಕೈಯಲ್ಲಿ ಹೇರಳ ದುಡ್ಡಿದ್ದರೆ ನೀವು ಹೇಗೆ ವಿನಿಯೋಗಿಸುತಿದ್ದಿರಿ?' ಎಂಬ ಪ್ರಶ್ನೆಗೆ ಗೋಪಾಲನು 'ಅದನ್ನು ಈಗ ಹೇಳಲಾರೆ. ಆದರೆ ಪರೋಪಕಾರಕ್ಕಾಗಿಯೆ ವಿನಿಯೋಗಿಸುತಿದ್ದೆನು' ಎಂದು ಹೇಳುತಿದ್ದನು.

ಅಷ್ಟು ಮಾತುಗಳು ನಡೆಯುವಷ್ಟರಲ್ಲಿ ಸೂರ್ಯನು ಅಸ್ತಮಿಸುತಿದ್ದನು. ಆ ಕಡೆಗೆನೆ ಚಕಿತನಾಗಿ ನೋಡುತ್ತಿದ್ದ ಸೇಟಜಿಯು 'ಇನ್ನೊಂದು

ಉಪಯುವನ್ನು ನೋಡುವ ಭಾಗ್ಯವು ನನಗೆ ಉಂಟೊ ಇಲ್ಲವೊ?' ಎಂಬಂತೆ ವ್ಯಾಕುಲದಿಂದ ತುಂಬಿದ್ದನು. ತನ್ನ ಶಕ್ತಿಯು ದಿನೆ ದಿನೆ ಕುಂದುತ್ತಲಿದೆ, ಯಮುನ ಕರೆಯು ಬರಲಿಕ್ಕೆ ದೂರವಿಲ್ಲ ಎಂಬಂತೆ ಅವನ ಮನಸ್ಸು ಕಳವಳದಿಂದ ತುಂಬಿತ್ತು. ಕತ್ತಲಾದುದರಿಂದ ಗೋಪಾಲನು ಅವನ ಕೈ ಬಲವಾಗಿ ಹಿಡಿದು ಆತನನ್ನು ಮನೆಗೆ ಮುಟ್ಟಿಸಿ ತನ್ನ ಬಿಡಾರವನ್ನು ಸೇರಿದನು.

ಸೇಟಜಿಗೆ ತಾನು ಅಪೂರ್ವ ರೀತಿಯಲ್ಲಿ ಅಶಕ್ತನಾಗಿದ್ದಂತೆ ಕಂಡಿತು. ಒಂದಿಷ್ಟು ಬಿಸಿ ಹಾಲನ್ನು ಬಾಯಿಗೆ ಎತ್ತಿದನು. ಆದರೆ ಅದನ್ನು ನುಂಗುವ ಶಕ್ತಿಯಿರಲಿಲ್ಲ. ರಾಧೆಯನ್ನು ಕರೆದು 'ತಾಯಿ! ನನಗೆ ಇಂದೇನೊ ದೇಹದಲ್ಲಿ ಬಹಳ ಅಶಕ್ತಿ ಇದೆ. ನಾಳೆ ಸೂರ್ಯೋದಯವನ್ನು ಕಾಣುವೆನೊ ಇಲ್ಲವೊ ಎಂಬ ಸಂದೇಹ ಬರುತ್ತದೆ. ನನ್ನ ಬಳಿಯಲ್ಲಿಯೆ ಇರು!' ಎಂದು ಅವಳ ಕೈಯನ್ನು ತನ್ನ ಕೈಯಲ್ಲಿ ಹಿಡಿದು ಅಡ್ಡಾದನು. ಅವನ ನಾಯಿಯು ಏನೊ ವಿಶೇಷ ರೀತಿಯಿಂದ ಆಚೆ ಈಚೆ ಮೂಸುತ್ತ, ಏನೊ ಕಳವಳವನ್ನು ಸೂಚಿಸುತ್ತ, ಒಮ್ಮೆ ಅವನ ಕೈಯನ್ನು ನೆಕ್ಕುತ್ತಲೂ ಒಮ್ಮೆ ರಾಧೆಯ ಕೈಯನ್ನು ನೆಕ್ಕುತ್ತಲೂ ಸಣ್ಣ ಸ್ವರದಿಂದ 'ಕುಂಯಿ ಕುಂಯಿ' ಎನ್ನುತಿತ್ತು. ದೇಹದಲ್ಲಿ ಅಶಕ್ತನಾದರೂ ಸೇಟಜಿಯ ಮೆದುಳಿನ ಶಕ್ತಿ ಕುಂದಿರಲಿಲ್ಲ. ಅವನ ಜೀವಕಾಲದ ಹಿಂದಿನ ಚಿತ್ರಗಳೆಲ್ಲ ಸಿನೆಮಾ ಫಿಲ್ಮಿನಂತೆ ಒಂದೊಂದಾಗಿ ಅವನ ಮನಸ್ಸಿನ ಪಟದಲ್ಲಿ ಕ್ರಮವಾಗಿ ಏಳುತಲಿದ್ದುವು. ಆಗ 'ಈ ದ್ರವ್ಯಸಂಗ್ರಹಕ್ಕೆ ನನ್ನ ಜೀವಕಾಲದ ಅಧಿಕಾಂಶವನ್ನು ವ್ಯಯಿಸುವ ಬದಲಾಗಿ ಎಲ್ಲಾದರೂ ನಿರ್ಜನವಾದ ಕಾಡುಗುಡ್ಡಗಳಲ್ಲಿ ವಾಸಮಾಡುತಿದ್ದರೆ ಶ್ರೀಭಗವಂತನ ಚಿಂತನೆಯಾದರೂ ಸಾಂಗವಾಗಿ ನಡೆಯುತಲಿತ್ತಲ್ಲ! ಆದರೆ ಈಗ ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು? ನನಗೆ ಈಗ ಹೀಗೆ ನನ್ನ ಜೀವನಕಾಲವು ನಿರರ್ಥಕವಾಯಿತಲ್ಲ! ಎಂದು ವ್ಯಾಕುಲವಾಗುತ್ತಿದೆ. ಆದರೂ ತಮ್ಮ ಮನೋಶಾಂತಿ, ಗೌರವ, ದಯೆ, ಸಹಾನುಭೂತಿ, ಅನುತಾಪಗಳನ್ನೆಲ್ಲ ಭದ್ರವಾಗಿ ಮುಚ್ಚಿಟ್ಟು ಅಸಂಖ್ಯಜನರು ಈ ಕ್ಷಣಿಕಸುಖದಾಯಕವಾದ, ರಸ್ತೆಯ ಧೂಳಿನಂತೆ ಲಘುವಾದ, ಹುಲ್ಲಿನ ಬೆಂಕಿಯಂತೆ ಫಕ್ಕನೆ ಬೆಳಗಿ ಮಾಯವಾಗುವ ದ್ರವ

ಸಂಗ್ರಹದ ಕಡೆಗೆ ನಿರತರಾಗಿರುವುದು ಚೋದ್ಯವಲ್ಲವೆ? ಮನುಷ್ಯನು ಏನು ಸಂಗ್ರಹಿಸಿಟ್ಟಿದ್ದಾನೆ ಎಂಬದನ್ನು ಲಕ್ಷಿಸುವ ಬದಲಾಗಿ ಆತನು ಎಂಥ ಗುಣ ಗಳುಳ್ಳವನು ಎಂಬದರಿಂದಲೇ ಭಗವಂತನು ಮನುಷ್ಯನ ತುಲನೆಮಾಡು ತ್ತಾನೆ. ಈ ಸೃಷ್ಟಿನಿಯಮವು ಲೋಕದ ನ್ಯಾಯಪರಿಪಾಲನೆಯ ಕ್ರಮಕ್ಕೆ ಶೀರಾ ವಿರುದ್ಧವಾಗಿದೆ. ಸಾಕಾರವು ನಿರಾಕಾರವನ್ನು ಅಳೆಯಲಾರದು. ನಾವು ಈ ಲೋಕದಲ್ಲಿ ಜನರಿಗೆ ಅವರವರ ಸ್ಥಾನಗಳಿಗೆ ತಕ್ಕಂತೆ ಹೆಚ್ಚು ಕಡಿಮೆ ಗೌರವವನ್ನು ತೋರಿಸಬಹುದು. ಆದರೆ ದೇವರ ಸಾನ್ನಿಧ್ಯದಲ್ಲಿ ಒಬ್ಬನು ಶ್ರೀಮಂತನು, ಇನ್ನೊಬ್ಬನು ದರಿದ್ರನು, ಮೂರನೆಯವನು ರಾಜ ಕುಲದವನು ಎಂಬ ಭೇದಗಳೇ ಇಲ್ಲ. ಅವನು ಆತ್ಮಗಳನ್ನು ಒರೆಕಲ್ಲಿಗೆ ಹಚ್ಚಿ, ಶೋಧೆ, ಪರೀಕ್ಷೆಮಾಡುತ್ತಾನೆ. ಜೀವಾತ್ಮನು ಪರಮಾತ್ಮನ ಒಂದು ಅಂಶ; ಆತನಿಂದ ಹೊರಟು ತನ್ನ ಕಾರ್ಯ ಮುಗಿದ ಮೇಲೆ ಪುನಃ ಆತ ನನ್ನು ಸೇರಿ ಐಕ್ಯವಾಗುತ್ತಾನೆ. ಅವನು ಬೇರೆ ಕವಚಗಳಲ್ಲಿ ಸೇರಿದಾಗ ಮಾತ್ರ ಅವನ ಲೀಲೆ ಬೇರೆ, ಕಷ್ಟಸಂಕಷ್ಟಗಳು ಬೇರೆ. ಅವುಗಳನ್ನೆಲ್ಲ ಹೊಂದುವಾಗ ಯಾವಾಗ ಪಾಪಲೇಪವನ್ನು ತ್ಯಜಿಸಿ ಆತನು ಪರಿಶುದ್ಧ ನಾಗುತ್ತಾನೊ ಆಗ ಕೀಳುಲೋಹ ಬೆರೆತ ಚಿನ್ನವನ್ನು ರಾಸಾಯನಿಕ ದ್ರವ ಪದಾರ್ಥಗಳಲ್ಲಿ ಹಾಕಿದಾಗ ಕೀಳುಲೋಹಗಳನ್ನು ತ್ಯಜಿಸಿ ಅಚ್ಚ ಪುತ್ಥಳಿ ಚಿನ್ನವಾದಂತೆ ಆಗಿ ಚಿನ್ನದಲ್ಲಿ ಬೆರೆತುಕೊಳ್ಳುತ್ತಾನೆ. ಆದರೆ ಪಾಪದ ಲಾಂಛನವು ತಗಲಿದರೆ ಆ ಲಾಂಛನವನ್ನು ಕಳೆದುಕೊಳ್ಳುವುದಕ್ಕೆ ಆತನಿಗೆ ಕಠಿಣ ರಾಸಾಯನಿಕ ದ್ರವಪದಾರ್ಥಗಳ ಉರಿಯೂ ಶಾಕವೂ ಬೇಕೆ ಬೇಕು. ಆದರೆ ಸಮಾಜದಲ್ಲಿ ಈ ವಿಚಾರವು ಎಷ್ಟರ ಮಟ್ಟಿಗೆ ದೃಷ್ಟಿಪಥಕ್ಕೆ ಬರುತ್ತದೆ! ಯಾವನೊಬ್ಬನಿಂದ ತನಗೆ ಎಷ್ಟು ಪ್ರಯೋಜನವಿದೆ, ಅಥವಾ ಅವನಲ್ಲಿ ಎಷ್ಟು ಸಂಪತ್ತು ಇದೆ, ಎಂಬದೇ ಸಮಾಜದಲ್ಲಿ ವ್ಯಕ್ತಿಯನ್ನು ಅಳೆಯುವ ಮಾನ. ಹಾಗಿದ್ದರೂ ಸೃಷ್ಟಿನಿಯಮವು ಅಲಂಘ್ಯವಾಗಿ ತನ್ನ ಕಠೋರ ಶಾಸನವನ್ನು ನಡಿಸಿಯೆ ಬಿಡುತ್ತದೆ.

'ಐಹಿಕದ ರಾಜ್ಯಸಂಪದವೆಲ್ಲ ಮಾಯೆಯಿಂ
ಜನಿಸುವುದು ಮಾಯೆಯಲ್ಲಡಗುವುದು, ಪರಮಾತ್ಮ

ನಧೀನವೀ ಮಾಯೆ!'
ಕಾಲಚಕ್ರದಲಿ ಚಿತ್ರಿಸಿದ ಚಕ್ರಾಧಿಪ
ತ್ಯಗಳ ಗಣನೆಯಂ ಮಾಡಬಲ್ಲವರುಂಟೇ; ಕಾ
ಲಕಾಲಕೆ ತೋರಿ ಸಂಕಲ್ಪ ಕಾರ್ಯವ ಮಾಡಿ
ಮುಳುಗುವುವು; ವಿಶ್ವವದು ಮುಂದು ಮುಂದಕೆ ದೈವ
ದಾಜ್ಞೆಯಲಿ ಬೆಳೆಯುವುದು. ಅದರೊಳಗೆ ಮಾನವಗೆ
ಗೋಚರಿಪುದತ್ಯಲ್ಪವಲ್ಲದೇಂ ಪಿರಿದುಂಟೆ
ಶೋಕದಿಂ ಫಲವಿಲ್ಲ. ಜನದಂತೆ ಜನಪದವು
ನೀತಿಯಂ ಬಿಟ್ಟಂದು ದುರ್ಗತಿಗೆ ಪಕ್ಕಾಗಿ
ಬೀಳುವುದು.

**(ನಾಗರಿಕ)**

ನಾನಾದರೊ ಈ ದ್ರವ್ಯಸಂಚಯದ ಸಾಧನೆಯಲ್ಲಿ ಮುಳುಗಿ ಏಳು ತಿದ್ದು ಕೊನೆಗೆ ಸರ್ವಪರಿತ್ಯಾಗ ಮಾಡಿ ಬಂದುದರಿಂದ 'ನಿಷ್ಕಾಮಪ್ರೇಮ ವೆಂದರೇನು, ಅಂಥ ಪ್ರೇಮವೊಂದುಂಟೇ' ಎಂದು ಪರೀಕ್ಷಿಸಿದ್ದಾಯಿತು; 'ದೇವರೇ ಪ್ರೇಮ, ಪ್ರೇಮವೇ ದೇವರು' ಎಂಬ ಮಾತು ದಿಟವೆಂದು ಮನ ಗಂಡದ್ದಾಯಿತು. ವಿಮಲೆಯಂಥ ಕಾಗೆಬಂಗಾರಕ್ಕೆ ಮರುಳಾಗಿದ್ದು ಈಗ ಕಣ್ದೆರೆದ ಗೋಪಾಲನಿಗೆ ನಿಜವಾದ ಪುತ್ಥಳಿ ಚಿನ್ನವನ್ನು ಕೈಸೇರುವಂತೆ ಮಾಡಿ ಆತನ ಸುಖಕ್ಕೆ ದಾರಿ ಮಾಡಿಕೊಟ್ಟೆನು. ಇದೆಲ್ಲ ದೈವಸಂಕಲ್ಪ ವಲ್ಲದೆ ಅಲ್ಪನಾದ ನನ್ನಿಂದಾದುದೇನು? ಸಾಧ್ಯವಿದ್ದರೆ ದೇವರ ಆಸ್ತಿಕ್ಯ ವನ್ನು ನಂಬುವೆನು ಎಂದು ನನ್ನ ಗೆಳೆಯ ಜಹಾಂಗೀರನಿಗೆ ನಮ್ಮ ಸಂಭಾ ಷಣೆಯ ಕೊನೆಯಲ್ಲಿ ನಾನು ಹೇಳಿದ್ದೆ. ಅದೇ ನಿದರ್ಶನಕ್ಕೆ ಬಂತಲ್ಲ! ಯಃಕಶ್ಚಿತ್ ಸ್ತ್ರೀಯೊಬ್ಬಳಲ್ಲಿ ಈ ಬಗೆಯ ನಿಷ್ಕಾಮಪ್ರೇಮವಿದ್ದರೆ ಆ ಭಗ ವಂತನಲ್ಲಿ ಸೇರಿಕೊಂಡಿರುವ ಪ್ರೇಮವು ಎಷ್ಟಿರಬೇಕು?' ಹೀಗೆ ಯೋಚಿ ಸುತ್ತಾ ಇದ್ದಾಗ ಆತನಿಗೆ ನಿದ್ದೆ ಹತ್ತಿತು.

ನಡುರಾತ್ರೆ ಆತನು ಫಕ್ಕನೆ ಎದ್ದು 'ತಾಯಿ, ರಾಧಾ!' ಎಂದು ಗದ್ಗದ ಸ್ವರದಿಂದ ಕರೆದನು. ಅವಳು ಅವನ ಅಂದಿನ ಸ್ಥಿತಿಯನ್ನು ಕಂಡು

ಏನೋ ವಿಪರೀತಾವಸ್ಥೆಯ ಕುರುಹು ಎಂದು ನೆನಸಿ ನಿದ್ದೆ ಮಾಡಿದ್ದಿಲ್ಲ. ಅವಳು ಕೂಡಲೇ ಓಡಿ ಬಂದು 'ಏನಪ್ಪಾ ಯಾತಕ್ಕೆ ಕರೆದೆ? ಗಂಟಲು ಆರುತ್ತದೆಯೇ' ಎಂದು ಆತನನ್ನು ಎತ್ತಿ ಕುಳ್ಳಿರಿಸಲು ಯತ್ನಿಸಿದಳು. ಆಗ ಆತನ ದೃಷ್ಟಿ ಮಂದವಾಗುತ್ತ ಬಂದಿತ್ತು. ಅವನು ಅಸ್ಪಷ್ಟ ಸ್ವರದಿಂದ 'ನೀನು ಎಲ್ಲಿರುವೆ? ಶ್ವಾಸ ಎಳೆಯುವುದಕ್ಕೆ ಗಾಳಿ ಸಾಲದು, ಕಿಟಿಕಿಯ ಬಾಗಿಲನ್ನು ತೆರೆ' ಎಂದನು. ಅವಳು ಅವನನ್ನು ಗೋಡೆಗೆ ಒತ್ತಾಗಿ ಲೋಡನ್ನು ಇಟ್ಟು ಅದಕ್ಕೆ ಒರಗಿಸಿ ಕುಳ್ಳಿರಿಸಿ ಕಿಟಿಕಿಯ ಬಾಗಿಲನ್ನು ತೆರೆದಳು.

ಆಗ ಸೇಟಜಿಯು ಅವಳ ಕೈಯನ್ನು ಹಿಡಿದು 'ನಾನು ಇನ್ನು ಉಳಿಯಲಾರೆ. ನನ್ನ ಅಂತ್ಯಕಾಲವು ಸಮೀಪವಾಯಿತು. ನನ್ನ ಕಿಸೆಯಲ್ಲಿರುವ ಲಕೋಟೆಯನ್ನು ಅದರ ವಿಳಾಸಕ್ಕೆ ನೀನೊಬ್ಬಳೆ ಹೋಗಿ ಮುಟ್ಟಿಸುವೆ ಎಂದು ಭಾಷೆಕೊಡುವೆಯಾ?' ಎಂದನು. ಅವಳು ಕಣ್ಣೀರು ಮಾಡುತ್ತ ಹಾಗೆಯೆ ಮಾತುಕೊಟ್ಟಳು. ಅಷ್ಟರಲ್ಲಿ ಅವನ ನಾಯಿಯು ಅವನ ಹಾಸಿಗೆಯ ಬಳಿಗೆ ಓಡಿ ಬಂದು ಸಣ್ಣ ಸ್ವರದಿಂದ ಬಗುಳುತ್ತ ಆತನ ಕೈಯನ್ನು ನೆಕ್ಕುತಿತ್ತು. 'ಓಹೊ ನಿನ್ನನ್ನು—ನಾನು ಬಿಟ್ಟುಹೋಗುವೆನೆಂದು ಹೆದರಿಕೆಯೊ! ನನಗಿಂತಲೂ ಚೆನ್ನಾಗಿ ಸಾಕುವವಳು ಇದ್ದಾಳೆ. ಇನ್ನು ಹಂಬಲು ಬೇಡ' ಎಂದು ಎಡದ ಕೈಯನ್ನು ಅದರ ತಲೆಯ ಮೇಲಿಟ್ಟು ಬಲದ ಕೈಯಿಂದ ರಾಧೆಯ ಕೈಯನ್ನು ಹಿಡಿದು 'ನನ್ನ ಪ್ರಾಣ—ಹಾರಿ ಹೋಗುವ—ವರೆಗೆ—ಇಲ್ಲಿಯೆ ಇರು' ಎಂದು ಹೇಳಿದನು. ಅಷ್ಟರಲ್ಲಿ ಊರ್ಧ್ವಶ್ವಾಸಗಳು ತೊಡಗಿದವು. ರಾಮನಾಮವನ್ನು ಮೆಲ್ಲಗೆ ಜಪಿಸುತಿದ್ದ ಹಾಗೆ ಅವನ ಆತ್ಮವು ದೇಹವನ್ನು ಬಿಟ್ಟು ಪರಂಧಾಮಕ್ಕೆ ಹೋಯಿತು.

---

## ೩೩ನೆ ಅಧ್ಯಾಯ

## ವಿಲ್ಲಿನ ಪರಿಣಾಮ

ಮರುದಿನ ಬೆಳಗ್ಗೆ ಸೇಟಜಿಯ ಮರಣದ ವಾರ್ತೆಯು ಊರಲ್ಲೆಲ್ಲ ಹಬ್ಬಿತು. ಊರವರೆಲ್ಲರೂ ತಂಡತಂಡವಾಗಿ ಅಲ್ಲಿಗೆ ಬಂದರು. ಆತನು ಶಾಂತಚಿತ್ತನಾಗಿ ಮಲಗಿದಂತೆ ತೋರುತಿತ್ತು. ಸುಬ್ಬಾಭಟ್ಟನ ಹೆಂಡತಿಯು 'ನಾನು ನಿನ್ನೆಯೆ ಏನೊ ಕೆಟ್ಟ ವರ್ತಮಾನ ಬರುತ್ತದೆಂದು ಹಾರೈಸಿದೆ. ನನ್ನ ಎಡಕಣ್ಣು ಏಕೊ ಮಿಟುಕುತಿತ್ತು. ಬಲಭುಜವು ಅದುರುತಿತ್ತು' ಎಂದು ಓಡಿ ಓಡಿ ಬಂದು ಹೇಳಿದಳು. ಹೇಗೂ ಊರವರೆಲ್ಲ ಸೇರಿ ಆತನ ಊರ್ಧ್ವದೈಹಿಕವನ್ನು ಮುಗಿಸಿದರು. ಸುಬ್ಬಾಭಟ್ಟನು ತನ್ನ ಮಾತಿನಂತೆ ಬೇಕಾದಷ್ಟು ಕಟ್ಟಿಗೆಯನ್ನೂ ಗಂಧದ ಕೊರಡುಗಳನ್ನೂ ಕರ್ಪೂರವನ್ನೂ ಕೊಟ್ಟನು. ಹೇಗೂ ಸೇಟಜಿಯ ಇಹಲೋಕದ ಯಾತ್ರೆಯು ಮುಗಿಯಿತು. ತನ್ನ ತಂದೆಯೋಪಾದಿಯಲ್ಲಿ ಆತನನ್ನು ನೋಡಿಕೊಳ್ಳುತಿದ್ದ ರಾಧೆಗೆ ಮಾತ್ರ ಏನೇನೂ ಸಮಾಧಾನವಾಗಲಿಲ್ಲ. ಅವಳೊಬ್ಬಳೆ ಇರುವುದು ಅವಳಿಗೆ ಅಸಹನೀಯವಾಯಿತು. ಸುಬ್ಬಾಭಟ್ಟನ ಹೆಂಡತಿಯು ಹತ್ತು ದಿನಗಳ ವರೆಗೆ ಅಲ್ಲಿ ಬಂದು ಇರಲು ಒಪ್ಪಿದಳು. ಅನಂತರ ಗೋಪಾಲನು 'ಇನ್ನು ನೀನು ಒಂಟಿಯಾಗಿರುವುದು ಉಚಿತವಲ್ಲ, ಈ ಕಾಲದಲ್ಲಿ ನಾನು ಕೇಳುವುದು ನ್ಯಾಯವಲ್ಲವೆಂದರೂ ನಮ್ಮ ವಿವಾಹವು ಬೇಗನೆ ಆಗುವುದಕ್ಕೆ ನೀನು ಸಮ್ಮತಿಯನ್ನು ಕೊಡುವುದು ಯುಕ್ತ' ಎಂದು ಹೇಳಿದನು. ರಾಧೆಯೂ ಒಪ್ಪಿದಳು. ಅನಂತರ ರಾಧೆಯು ತಾನು ಮುದುಕನಿಗೆ ಕೊಟ್ಟಿರುವ ಮಾತಿನ ಪ್ರಸ್ತಾಪವೆತ್ತಿದಳು. ಅವರಿಬ್ಬರು ಆತನ ಕಿಸೆಯಲ್ಲಿರುವ ಮುದ್ರೆ ಹಾಕಿದ ಲಕ್ಕೋಟೆಯನ್ನು ತೆಗೆದು ವಿಳಾಸವನ್ನು ನೋಡಿದರು. 'ಮುಂಬೈ' ಎಂದು ಇದ್ದುದರಿಂದ 'ನೀನೊಬ್ಬಳೆ ಅಷ್ಟು ದೂರ ಹೋಗಬಲ್ಲೆಯಾ?' ಎಂದು ಗೋಪಾಲನು ಕೇಳಿದನು. ಆಗ ಅವಳು 'ನಾನು ಕೊಟ್ಟ ಮಾತನ್ನು ಮೀರಲಾರೆ. ನಾನೇನೂ ಸಣ್ಣ ಹುಡುಗಿಯಲ್ಲ. ಒಮ್ಮೆ ರೈಲ್ವೆ ಸ್ಟೇಶನ್ ವರೆಗೆ ಹೋದರೆ ಆ ಮೇಲೆ ಏನೂ ಭೀತಿಯಿಲ್ಲ' ಎಂದಳು. ಗೋಪಾಲನು ಅವಳನ್ನು ಸಮೀಪದ ಸ್ಟೇಶನಿಗೆ ಮುಟ್ಟಿಸಿ ಹೆಂಗಸರ ಗಾಡಿಯಲ್ಲಿ ಕುಳ್ಳಿರಿಸಿ ಹಿಂತಿರುಗಿದನು.

ರಾಧೆಯು ಇದುವರೆಗೆ ಮುಂಬೈ ಪಟ್ಟಣವನ್ನು ನೋಡಿರಲಿಲ್ಲ. ಅಲ್ಲಿ ಇಳಿದಾಗ ಒಮ್ಮೆಗೆ ಅವಳಿಗೆ ತುಸು ಗಾಬರಿಯಾಯಿತು. ಕಡೆಗೆ ರೈಲ್ವೆ ಕೂಲಿಯೊಬ್ಬನಿಗೆ ಇನಾಂ ಕೊಟ್ಟು, ಆತನಿಂದ ಬಾಡಿಗೆಯ ಒಂದು ವಿಕ್ಟೋರಿಯುವನ್ನು ಕರೆಯಿಸಿ ಅದರಲ್ಲಿ ಕುಳಿತು, ಲಕ್ಕೋಟೆಯಲ್ಲಿ ಕೊಟ್ಟಿರುವ ವಿಳಾಸಕ್ಕೆ ಹೋದಳು. ಅದು ಐದು ಅಂತಸ್ಥಿನ ದೊಡ್ಡ ಕಟ್ಟಡ. ಅಲ್ಲಿ ಇಳಿದು ಹೈಡ್ರೊಲಿಕ್ ಲಿಫ್ಟಿನವನೊಡನೆ 'ಈ ವಿಳಾಸದವರು ಇಲ್ಲಿ ಇದ್ದಾರೆಯೇ?' ಎಂದು ಕೇಳಿದಳು. ಅವನಿಗೆ ಅದು ಜಹಾಂಗೀರನ ಗುಮಾಸ್ತನ ಹೆಸರೆಂದು ತಿಳಿದು, 'ನಾಲ್ಕನೆ ಅಂತಸ್ಥಿನ ಐದನೆ ಕೋಣೆಗೆ ಹೋಗಿ ಬಾಗಿಲು ತಟ್ಟಿರಿ. ಆಗ ನೀವು ವಿಳಾಸದಾರರನ್ನು ಕಾಣಬಹುದು' ಎಂದನು. ಹಾಗೆಯೇ ಅವಳು ಮಾಡಿದಳು. ಆಗ ಅಲ್ಲಿ ಬಾಗಿಲು ಕಾಯುತಿದ್ದ ಒಬ್ಬ ಹುಡುಗನು ಫಕ್ಕನೆ ಬಾಗಿಲು ತೆರೆದು 'ಏನು ಬಂದಿರಿ?' ಎಂದನು. 'ಈ ವಿಳಾಸದಾರರನ್ನು ಕಾಣುವುದಕ್ಕೆ!' ಎಂದಳು. ಆಗ ಅವನು ಆ ಲಕ್ಕೋಟೆಯನ್ನು ಅವಳ ಕೈಯಿಂದ ಇಸುಕೊಂಡು ಒಳಕ್ಕೆ ಹೋದನು. ಅಲ್ಲಿ ಹೊರಕೋಣೆಯಲ್ಲಿ ಒಂದು ಕುರ್ಚಿಯಲ್ಲಿ ಅವಳು ಕುಳಿತು ತುಸು ಸಮಯ ಕಾದಳು. ಅಷ್ಟರಲ್ಲಿ ಒಳಗಿಂದ ಒಬ್ಬ ಮುದುಕನು ಬಾಗಿಲು ತೆರೆದು 'ಈ ಲಕ್ಕೋಟೆಯನ್ನು ತಂದವರು ನೀವೇ ಏನು?' ಎಂದು ಪ್ರಶ್ನಿಸಿದನು. 'ಹೌದು' ಎಂದು ಅವಳು ಉತ್ತರವಿತ್ತಳು.

ಆಗ ಆತನು 'ಇದರ ಒಳಗಿನ ಲಕ್ಕೋಟೆಯು ನಮ್ಮ ಸಾಹೇಬರ ವಿಳಾಸಕ್ಕೆ ಇದೆ. ಅವರಿಗೆ ತೋರಿಸುವಷ್ಟರ ವರೆಗೆ ತುಸು ಹೊತ್ತು ಕಾಯುವಿರಾ?' ಎಂದನು.

**ರಾಧೆ:**—ನನಗೆ ಅವರನ್ನು ಕಾಣುವ ಅಗತ್ಯವಿಲ್ಲ. ನನ್ನಲ್ಲಿ ಇತ್ತಲಾಗೆ ಒಬ್ಬ ಬಡ ವೃದ್ಧನು ಬಂದು ಉಳಿದಿದ್ದನು. ಅವನು ಕೊಂಚ ದಿನಗಳ ಹಿಂದೆ ಸತ್ತುಹೋದನು. ಅವನ ಪ್ರಾಣ ಹಾರಿಹೋಗುವ ಮುಂಚೆ ಆತನು ಈ ಲಕ್ಕೋಟೆಯನ್ನು ವಿಳಾಸದಾರರಿಗೆ ತಲಪಿಸಬೇಕೆಂದು ನನ್ನೊಡನೆ ಕೇಳಿಕೊಂಡಿದ್ದನು. ನಾನೂ ಅವನಿಗೆ ಭಾಷೆ ಕೊಟ್ಟಿದ್ದೆ. ಆ ವಿಳಾಸದಾರರು ನೀವಾಗಿದ್ದರೆ ಲಕ್ಕೋಟೆಯು ನಿಮಗೆ ತಲಪಿತಲ್ಲ! ಇನ್ನೂ ನಾನಿಲ್ಲಿರಬೇಕಾದ ಕೆಲಸವಿಲ್ಲ' ಎಂದಳು.

ಆಗ ಆ ಮುದುಕ ಗುಮಾಸ್ತನು 'ಹಾಗಲ್ಲಮ್ಮಾ! ನನ್ನ ಲಕ್ಕೋಟಿಯೊಳಗಿನ ಮಲ್ಫೂಫ ನಮ್ಮ ಧನಿಯ ವಿಳಾಸಕ್ಕೆ ಇತ್ತು. ಅದನ್ನು ಅವರ ಬಳಿಗೆ ಕಳುಹಿಸಿದ್ದೇನೆ. ಅವರು ಇಲ್ಲಿಯೇ ಐದನೆ ಅಂತಸ್ಥಿನಲ್ಲಿದ್ದಾರೆ. ಅವರ ಉತ್ತರ ಸಿಗುವ ವರೆಗೆ ಸ್ವಲ್ಪ ಕಾಯಿರಿ, ಅಂದೆ.'

ಅಷ್ಟರೊಳಗೆ ಆ ಹುಡುಗನು ಓಡಿ ಬಂದು 'ಅಮ್ಮ! ನೀವು ಸೊಲಿಸಿಟರ ಸಾಹೇಬರ ಆಫಿಸಿಗೆ ಬರಬೇಕಂತೆ!' ಎಂದನು. 'ಹೋಗೋಣ ಅಮ್ಮಾ! ಅವರನ್ನು ಕಂಡು ಹೋಗಿರಿ' ಎಂದು ಮುದುಕನು ಅವಳನ್ನು ಮೇಲಿನ ಅಂತಸ್ಥಿಗೆ ಕರೆದುಕೊಂಡು ಆತನ ಧನಿಯ ಆಫೀಸು ಕೋಣೆಯೊಳಗೆ ಬಿಟ್ಟನು.

ಅಲ್ಲಿ ದೊಡ್ಡದೊಂದು ತಿರುಗುವ ಕುರ್ಚಿಯಲ್ಲಿ ಜಹಾಂಗೀರನು ಕುಳಿತಿದ್ದನು. ಅವನು ತನ್ನೆದುರಿನ ಒಂದು ಕುರ್ಚಿಯಲ್ಲಿ ಅವಳನ್ನು ಕುಳ್ಳಿರ ಹೇಳಿ 'ನೀವು ಈ ಕಾಗದದಲ್ಲಿ ತಂದ ವರ್ತಮಾನ ಅತೀ ದುಃಖಕರವಾದದ್ದು. ನನ್ನ ಮುದಿ ಗೆಳೆಯನು ನಿಮ್ಮಲ್ಲಿಯೇ ತೀರಿಕೊಂಡರೇ? ಅವರ ಆಗಮನವನ್ನು ಹಾರೈಸಿ ನಾವು ದಿನ ಎಣಿಕೆ ಹಾಕುತಲಿದ್ದೆವು.' ಎಂದನು.

**ರಾಧೆ:**—ಸ್ವಾಮೀ! ಇದರಲ್ಲೇನೊ ಪ್ರಮಾದವಿರಬೇಕು. ನಾನು ತಂದ ಕಾಗದವು ನಾನು ಈಗಲೇ ಕಂಡ ಮುದುಕರಿಗೆ! ನಿಮಗಲ್ಲ. ನಮ್ಮಲ್ಲಿ ಸತ್ತುಹೋದ ಮುದುಕನಿಗೆ ನಿಮ್ಮ ಸ್ನೇಹಿತನಾಗುವ ಪುಣ್ಯವೆಲ್ಲಿ? ಆತನು ತೀರಾ ಬಡವನು!

**ಜಹಾಂಗೀರ:**—ನೀವು ಈಗ ಕಂಡ ಮುದುಕನು ನನ್ನ ಮುಖ್ಯ ಗುಮಾಸ್ತನು. ಆತನಿಗೆ ಬರೆದ ಲಕ್ಕೋಟಿಯಲ್ಲಿ ಅಡಕವಾದ ಮಲ್ಫೂಫ ನನ್ನ ವಿಳಾಸಕ್ಕಿತ್ತು. ಅದನ್ನು ಒಡೆದು ನೋಡಿದಾಗ ಅವರು ನಮ್ಮನ್ನು ಬಿಟ್ಟು ಹೋದನಂತರ ಅವರಿಗೆ ಉಂಟಾದ ಕಷ್ಟಸುಖಗಳ ವಿವರವನ್ನು ಬರೆದಿರುವರು. ಅವರೇ ನಮ್ಮ ಮುಂಬಯಿ ಪಟ್ಟಣದಲ್ಲಿ ಸುಪ್ರಖ್ಯಾತರಾದ ಜಗಜೀವನದಾಸ ಸೇಟಜಿ.

**ರಾಧೆ:**—ಯಾರು? ಕೋಟ್ಯಾಧೀಶನಾದ ಜಗಜೀವನದಾಸ ಸೇಟಜಿ! **ನೀವು** ಯಾರ ವಿಷಯವನ್ನೊ ಮಾತಾಡುತ್ತೀರಿ? ನಮ್ಮಲ್ಲಿ ಸತ್ತ ಮುದುಕನು ತೀರಾ ಕಂಗಾಲು ಸ್ಥಿತಿಯಲ್ಲಿ ಮಾರ್ಗದ ಬದಿಯಲ್ಲಿ ಕಣ್ಣುಕತ್ತಲೆ ಬಂದು ಬಿದ್ದಿದ್ದನು. ಆತನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗಿ ಶುಶ್ರೂಷೆಮಾಡಿದೆನು. ಆತನು ಇತ್ತಲಾಗೆ ಕೆಲವು ದಿನಗಳ ಹಿಂದೆ ಕಾಲವಾದನು.

**ಜಹಾಂಗೀರ:**—'ಹಾಗಲ್ಲವಮ್ಮಾ! ಈ ಪತ್ರವನ್ನು ಓದಿದರೆ ನಿಮ್ಮಲ್ಲಿ ಮಡಿದ ಮುದುಕನು ಅವರೇ ಎಂದು ಗೊತ್ತಾಗುವುದು' ಎಂದು ಆ ಪತ್ರವನ್ನು ಅವಳ ಕೈಯಲ್ಲಿ ಕೊಟ್ಟು ಜಹಾಂಗೀರನು ಕೋಣೆಯ ಹೊರಕ್ಕೆ ಹೋದನು. ರಾಧೆಯು ಸಾದ್ಯಂತವಾಗಿ ಪತ್ರವನ್ನು ಓದಿದಳು. ಅವಳ ಕಣ್ಣುಗಳಲ್ಲಿ ನೀರು ಹರಿಯತೊಡಗಿತು. ಅಷ್ಟರಲ್ಲಿ ಜಹಾಂಗೀರನು ಒಳಕ್ಕೆ ಬಂದನು. ರಾಧೆಯ ಕೈಗಳು ಆ ಪತ್ರವನ್ನು ಹಿಂತಿರುಗಿ ಜಹಾಂಗೀರನ ಕೈಯಲ್ಲಿ ಕೊಡುವಾಗ ನಡುಗುತಿದ್ದುವು. ತುಟಿಗಳು ಕಂಪಿಸುತಿದ್ದುವು. ಜಹಾಂಗೀರನನ್ನು ಕಂಡೊಡನೆ 'ನಿಮ್ಮ ಗೆಳೆಯರು ನನ್ನೊಡನೆ ಏತಕ್ಕೆ ಸುಳ್ಳು ಹೇಳಿದರು? ಅವರು ನನ್ನನ್ನು ಮೋಸಗೊಳಿಸುವ ಉದ್ದೇಶವೇನು?' ಎಂದು ಪ್ರಶ್ನಿಸಿದಳು.

ಆಗ ಜಹಾಂಗೀರನು ತನ್ನ ಗೆಳೆಯನಲ್ಲಿ ಉಂಟಾದ ವೈರಾಗ್ಯದ ಸ್ಥಿತಿಯನ್ನು ವಿವರಿಸಿ, 'ಅವರು ನಿಷ್ಕಾಮಪ್ರೇಮವೆಂಬುದು ಈ ಲೋಕದಲ್ಲಿ ಉಂಟೇ ಎಂದು ನೋಡುವುದಕ್ಕಾಗಿ ವೇಷಪಲ್ಲಟಮಾಡಿದರೆಂದೂ ನಿಮ್ಮಲ್ಲಿ ಅಂಥ ಪ್ರೇಮವು ಇತ್ತೆಂದೂ ಹೇಳಿರುವರಲ್ಲ! ಧನಿಕರಾದರೂ ಅವರ ಸುತ್ತಮುತ್ತಲೂ ಅಂಥ ಪ್ರೇಮದ ಅಭಾವವಿತ್ತು. ಅವರ ಹೆಂಡತಿಮಕ್ಕಳು ಮೊದಲೇ ತೀರಿಹೋಗಿದ್ದರು. ಎಲ್ಲಿ ನೋಡಿದರೂ ಮರೆಮೋಸ, ಡಂಭಾಚಾರ, ಠಕ್ಕುಠೌಳಿಕಗಳೇ ಕವಿದುಕೊಂಡಿರುವುದರಿಂದ ಪ್ರೇಮವಿಲ್ಲದ ಮನೆಯು ಸುಡುಗಾಡೆಂದು ಭಾವಿಸಿ ಕುಬೇರಪುತ್ರರಾದ ಅವರು ಎಲ್ಲವನ್ನು ತೊರೆದು ಪ್ರೇಮವನ್ನು ಯಾಚಿಸಿ ಅಲೆದಾಡಿದರು. ಅದು ಕೊನೆಗೆ ಒಂದು ಹಳ್ಳಿಯಲ್ಲಿ ಸಿಕ್ಕಿ, ತಾನು ಅಪೂರ್ವ ಸುಖಶಾಂತಿಗಳನ್ನು ಹೊಂದಿದ

ರೆಂದು ಬರೆಯುತ್ತಾರಲ್ಲ! ನಿಷ್ಕಾಮಪ್ರೇಮವನ್ನು ಹುಡುಕಬೇಕಾದರೆ ಅವರು ಗುಪ್ತವೇಷದಿಂದ ಸಂಚಾರಮಾಡಬೇಕಾಯಿತು. ಅಷ್ಟೆ! ಈಗ ಅವರು ಮಾಡಿದ ಮೃತ್ಯುಪತ್ರವನ್ನು (ವೀಲನ್ನು) ಓದಬೇಕಾಗಿದೆ. ಅದರಲ್ಲಿ ತನ್ನ ಸಕಲ ಸಂಪತ್ತನ್ನು ನಿಮಗೆ ಮತ್ತು ನಿಮ್ಮೊಡನೆ ವಿವಾಹಮಾಡಿಕೊಳ್ಳಲಿಳಸುವ ಯುವಕನಿಗೆ ಮುಕ್ತಹಸ್ತದಿಂದ ಒಪ್ಪಿಸಿರುವರು. ಇಗೊಳ್ಳಿ, ಆ ಪತ್ರದೊಂದಿಗೆ ಇದ್ದ ವೀಲು. ಅದು ಕಾಯಿದೆಗೆ ಸರಿಯಾದ ರೀತಿಯಲ್ಲಿ ಬರೆದಿದೆ; ನಿರಾಕ್ಷೇಪಕರ ರೀತಿಯಲ್ಲಿ ಬರೆದಿದೆ. ಅದನ್ನು ಕೋರ್ಟಿನಲ್ಲಿ ಹಾಜರುಪಡಿಸಿ ಸಿಂಧುಮಾಡಿಸಬೇಕೆಂದು ನನಗೆ ತಿಳಿಸಿದ್ದಾರೆ'—ಎನ್ನುವಷ್ಟರಲ್ಲಿ ರಾಧೆಯು ಆಶ್ಚರ್ಯದಿಂದ ದಿಕ್ಕುಕಾಣದೆ ಕಣ್ಣುಕತ್ತಲೆ ಬಂದಂತಾಗಿ ಕುರ್ಚಿಯಲ್ಲೆ ಒರಗಿಬಿಟ್ಟಳು. ಜಹಾಂಗೀರನು ಕೂಡಲೇ ಶುದ್ಧನೀರನ್ನು ತರಿಸಿ ಅವಳ ಕಣ್ಣುಗಳಿಗೆ ಹಚ್ಚಿ ಕುಡಿಯಲಿಕ್ಕೆ ಒಂದಿಷ್ಟನ್ನು ಕೊಟ್ಟನು. ಅವಳು ಚೇತರಿಸಿಕೊಂಡಳು. ಆ ಮೇಲೆ ಅವಳಿಗೆ ಒಂದಿಷ್ಟು ಚಾ ತರಿಸಿ 'ಅಮ್ಮಾ! ನೀವು ಬಹಳ ಗಾಬರಿಯಾದಂತಿದೆ. ಅಂಥ ಭಯವೇನೂ ಇಲ್ಲ. ನ್ಯಾಯವಾಗಿ ಸೇಟಜಿಯವರು ಕೊಟ್ಟದ್ದನ್ನು ನೀವು ಸ್ವೀಕಾರಮಾಡುವುದರಲ್ಲಿ ತಪ್ಪೇನೂ ಇಲ್ಲ. ಅವರಿಗೆ ಬೇರೆ ವಾರಿಸುದಾರರೇ ಇಲ್ಲ. ನೀವು ಸ್ವೀಕಾರಮಾಡದಿದ್ದರೆ ಈ ಸರ್ವಾಧಿ ಸಂಪತ್ತು ಸರಕಾರದ ಬೊಕ್ಕಸಕ್ಕೆ ಸೇರುವುದು ಖಂಡಿತ.'

**ರಾಧೆ:**—'ಸಾಹೇಬರೆ! ನಾನು ತೀರಾ ಬಡವಳು. ಅಂಥ ಸಂಪತ್ತಿಗೆ ಆಶಿಸುವುದಿಲ್ಲ. ಏನೂ ಹಕ್ಕುಸಂಬಂಧವಿಲ್ಲದ ಒಬ್ಬ ಸ್ತ್ರೀಗೆ ತನ್ನ ಸಂಪತ್ತನ್ನು ದಾನ ಕೊಟ್ಟರೆಂದರೆ ಅಸೂಯಾಪರರಾದ ಜನರು ಏನು ಅಂದಾರು? ದಮ್ಮಯ್ಯ! ಅಷ್ಟೊಂದು ನನ್ನ ಹೆಸರಿಗೆ ಕಳಂಕವನ್ನು ಹಚ್ಚಬೇಡಿ. ನಾನು ದಾರಿದ್ರ್ಯದಲ್ಲಿ ಹುಟ್ಟಿ ಬೆಳೆದವಳು. ದಾರಿದ್ರ್ಯದಲ್ಲಿಯೆ ಇದ್ದು ಕಾಲಕಳೆಯಲು ನನಗೆ ಏನೇನೂ ಅಸಾಧ್ಯವಲ್ಲ. ಆದುದರಿಂದ ಈ ವೀಲನ್ನು ದಯಮಾಡಿ ಹರಿದು ಬಿಸಾಡಿರಿ. ಆ ಸಂಪತ್ತೂ ನನಗೆ ಬೇಡ, ಅದರ ಸುಖದುಃಖಗಳನ್ನು ನಾನು ಯಾಚಿಸುವುದಿಲ್ಲ.' ಎಂದು ನೆಲದ ಮೇಲೆ ಬಿದ್ದು ಜಹಾಂಗೀರನ ಪಾದಗಳನ್ನು ಗಟ್ಟಿಯಾಗಿ ಹಿಡಿದು ಅಳತೊಡಗಿದಳು.

ಜಹಾಂಗೀರನಿಗೆ ಬಲು ಕಷ್ಟಕ್ಕೆ ಇಟ್ಟಿತು. ಕೊನೆಗೆ 'ಈ ವಿಷಯದಲ್ಲಿ ನಿಮ್ಮನ್ನು ವಿವಾಹಮಾಡಿಕೊಳ್ಳುವವನ ಅಭಿಮತವನ್ನು ಪಡೆಯಬೇಡವೇ?' ಎಂದನು. ಅದಕ್ಕೆ ರಾಧೆಯು:—'ಅವರು ನನ್ನ ಮಾತನ್ನು ಅಲ್ಲಗಳೆಯರು. ನಮ್ಮಿಬ್ಬರ ಅಭಿಮತಗಳಲ್ಲಿ ಏನೇನೂ ವ್ಯತ್ಯಾಸವಿಲ್ಲ!'

**ಜಹಾಂಗೀರ:**—'ಇಲ್ಲಿ ನಿಮಗೆನೆ ಬರೆದಿಟ್ಟ ಇನ್ನೊಂದು ಪತ್ರವಿದೆ. ಅದನ್ನೊಮ್ಮೆ ಓದಿಕೊಳ್ಳಿರಿ. ಅದರಲ್ಲಿ ಎಲ್ಲವೂ ಸ್ಪಷ್ಟವಾದೀತು' ಎಂದು ರಾಧೆಯ ವಿಳಾಸಕ್ಕೆ ಬರೆದಿದ್ದ ಪತ್ರವನ್ನು ಅವಳ ಕೈಗೆ ಒಪ್ಪಿಸಿದನು.

ಅದರ ಮುದ್ರೆಯೊಡೆದು ನೋಡಿದಾಗ

ಅದರಲ್ಲಿ ಹೀಗಿತ್ತು:—

ನನ್ನ ವೀಲಿನಲ್ಲಿ ನನ್ನ ಸಂಪತ್ತನ್ನು ನಿನಗೆ ಕೊಡಲು ನಿರ್ಣಯಿಸುವಾಗ ನಾನು ಚೆನ್ನಾಗಿ ಆಲೋಚಿಸಿದ್ದೇನೆ. ನನಗೆ ಮಕ್ಕಳು ಮರಿಯಾರೂ ಇಲ್ಲ. ಇದ್ದಾಗಲೂ ನನಗೆ ಸುಖಶಾಂತಿಗಳು ಇದ್ದಿಲ್ಲ. ಅಂಥ ಅಪೂರ್ವ ಶಾಂತಿಸುಖಗಳನ್ನು ನಿನ್ನ ಬಡ ಮನೆಯಲ್ಲಿ ಪಡೆದೆ. ನೀನು ಪೂರ್ವಜನ್ಮದಲ್ಲಿ ನನ್ನ ಮಗಳಾಗಿದ್ದಿರಬೇಕು. ಅಲ್ಲಿ ನನ್ನಿಂದ ಪಡೆದ ಪ್ರೀತಿಯ ಸಾಲವನ್ನು ಈ ಜನ್ಮದಲ್ಲಿ ತೆತ್ತು ಪೂರೈಸಿದೆಯೊ ಎನಿಸುತ್ತದೆ. ನಿನ್ನಲ್ಲಿ ದ್ರವ್ಯಾಕಾಂಕ್ಷೆಯೂ ಲವಲೇಶವಾದರೂ ಇಲ್ಲ. ನಿನ್ನ ಪತಿಯಾಗುವವನ ಮಾನಸಿಕಸ್ಥಿತಿಯೂ ಅದೇ ಇದೆ. ಆದ್ದರಿಂದ ನನ್ನ ಸಂಪತ್ತು—ನಾನು ಕೊಪ್ಪರಿಗೆಯ ಮೇಲೆ ಮಲಗಿದ ಕೃಷ್ಣಸರ್ಪನಂತೆ ಕಾದಿಟ್ಟಂತಿರುವ ಸಕಲ ಸಂಪತ್ತು—ನಿಮ್ಮಿಂದ ಅನವ್ಯಯವಾಗಲಾರದು, ಜನೋಪಕಾರಕ್ಕೆ, ಬಡಜನರ ಉದ್ಧಾರಕ್ಕೆ ವಿನಿಯೋಗಿಸಲ್ಪಡುವುದು ಎಂದು ನನಗೆ ಭರವಸೆಯಿದೆ. ಈಗ ನನ್ನ ಸಂಪತ್ತಿನಲ್ಲಿ ಕೆಲವು ಉಂಬಳಿಗಳನ್ನು ಕೊಡತಕ್ಕದ್ದಿತ್ತು. ಅವನ್ನು ಬರೆದರೆ ನಾನು ಯಾರು ಎಂದು ಹೊರಬಿದ್ದೀತು ಎಂಬದರಿಂದ ಆ ವಿಚಾರಗಳನ್ನು ನಿನಗೆ ಬರೆದ ಪತ್ರದಲ್ಲಿ ಕಾಣಿಸಿದ್ದೇನೆ. ನನ್ನ ಗೆಳೆಯನೂ ನನ್ನ ಸೊಲಿಸಿಟರನೂ ಆದ ಜಹಾಂಗೀರ ಅರ್ದೆಸೀರರಿಗೆ ನನ್ನ ಸಂಪತ್ತಿನಿಂದ ಒಂದು ಲಕ್ಷ ರೂಪಾಯಿ ನನ್ನ ಸ್ಮಾರಕವಾಗಿ ದಾನಮಾಡು. ಇನ್ನು ನನ್ನ ವಿಶ್ವಾಸದ ಭಯ್ಯಾನೊಬ್ಬನಿದ್ದಾನೆ. ಅವನಿಗೆ 5000, ಉಳಿದವರಿಗೆಲ್ಲ—ಈ ಪಟ್ಟಿಯಲ್ಲಿ ಹೆಸರು ಕಾಣಿಸಿದವರಿಗೆಲ್ಲ—ಅದರಲ್ಲಿ ನಮೂದಿಸಿದಂತೆ ದಾನ ಕೊಡು. ಖಾನಾವಳಿಯ

ಗಂಗೂ ಬಾಯಿಗೆ 1000, ಭಿಕುಪಂಡಿತನಿಗೆ 1000—ಇವನ ಪತ್ತೆ ಖಾನಾವಳಿಯ ಗಂಗವ್ವನಿಂದ ತಿಳಿಯಬಹುದು—2000 ರೂಪಾಯಿ ನಿನ್ನ ಊರಿನ ಗುಂಡುಬುವಾನಿಗೆ ನನ್ನ ಚಿಕಿತ್ಸೆ ಮಾಡಿದ್ದಕ್ಕಾಗಿ ಪ್ರತಿಫಲ ಕೊಡಬೇಕು; ನನ್ನಿಂದ ಒಂದು ಕಾಸು ಕೂಡಾ ಹಾರೈಸದೆ ಆತನು ನನ್ನ ಜೀವ ಉಳಿಸಲು ಶತಪ್ರಯತ್ನ ಮಾಡಿದ್ದಾನೆ. ನನ್ನ ಒಳಅಂಗಿ ಕಿಸೆಯ ಲ್ಲಿದ್ದ 500 ರೂಪಾಯಿಯ ನೋಟುಗಳನ್ನು ತತ್ಕಾಲದ ಖರ್ಚಿಗೆ ನಿನಗೆ ಒಪ್ಪಿಸಲು ಜಹಾಂಗೀರನಿಗೆ ಬರೆದಿದ್ದೇನೆ. ನಿರಾಧಾರಿಯೆಂದು ಭಾವಿಸಿ ನನಗೆ ಸಹಾಯಕ್ಕಾಗಿ ತಾಂತಿಯನೂ ಅವನ ಗೆಳೆಯರೂ ಎತ್ತಿದ ವಂತಿಗೆ ಯನ್ನು ಒಂದು ಲಕ್ಕೋಟೆಯಲ್ಲಿ ಪ್ರತ್ಯೇಕವಿರಿಸಿದ್ದೇನೆ. ಅದು ಸಾವಿರ ಮಿಲ್ಲಿಯ ಧನಕ್ಕಿಂತ ನನ್ನ ದೃಷ್ಟಿಯಲ್ಲಿ ಅಮೌಲ್ಯವಾದುದು. ಅದನ್ನು ಚಿನ್ನದ ಕರಡಿಗೆಯಲ್ಲಿರಿಸಿ ನೀನು ದಿನಂಪ್ರತಿ ಪೂಜೆಮಾಡುವ ದೇವರ ಕೋಣೆಯಲ್ಲಿ ಇಟ್ಟು ನನ್ನ ಸ್ಮಾರಕವಾಗಿ ನೆನಸಿಕೊ. ನಿನ್ನ ಆಸ್ತಿಯ ಆಡಳಿತವನ್ನು ಜಹಾಂಗೀರನಿಗೆ ಒಪ್ಪಿಸಿಬಿಡು. ಆತನು ಎಲ್ಲವನ್ನೂ ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳುವನು. ಇನ್ನು ನಿನಗೆ ನಾನು ಬರೆಯು ವುದಿಷ್ಟೆ. ನನಗೂ ನಿನಗೂ ಇನ್ನೊಮ್ಮೆ ಜನ್ಮ ಬರುವುದಿದ್ದರೆ ನೀನು ನನ್ನ ಮಗಳಾಗಿ ಹುಟ್ಟು ಎಂದು ದೇವರನ್ನು ಪ್ರಾರ್ಥಿಸಿ ನಿನಗೆ ಹರಸಿದ್ದೇನೆ.

**ಜೀವನದಾಸ**

ಈ ಪತ್ರವನ್ನು ರಾಧೆಯು ಜಹಾಂಗೀರನ ಕೈಗೆ ಒಪ್ಪಿಸಿದಳು. ಅವನಿಗೂ ಅದನ್ನು ಓದಿದಾಗ ಕಣ್ಣುಗಳು ಒದ್ದೆಯಾದುವು. 'ನನ್ನ ಗೆಳೆ ಯನು ವಿಮರ್ಶಾತ್ಮಕ ಬುದ್ಧಿಯುಳ್ಳವನು. ಆತನು ಹೇರಳ ಧನಸಂಪತ್ತಿಗೆ ಒಡೆಯನಾಗಿದ್ದರೂ ಒಂದೇ ಒಂದು ಕಾಸನ್ನಾದರೂ ಅನ್ಯಾಯದಿಂದ ಸಂಪಾದಿಸಿಲ್ಲ. ಹೀಗಾಗಿ ಆತನಿಗೆ ಸಮಾಜದಲ್ಲಿ ಸಿಕ್ಕಿದ ಗೌರವವು ನ್ಯಾಯವಾದದ್ದೇ ಇತ್ತು. ನಿಷ್ಕಾಮಪ್ರೇಮವೆಂಬದು ಎಲ್ಲಾದರೂ ಇದೆಯೋ ಎಂದು ಹುಡುಕಿ ಹೋದವನಿಗೆ ಕೊನೆಯ ಕಾಲದಲ್ಲಿ ಸುಖಶಾಂತಿಯನ್ನು ದಯೆಪಾಲಿಸಿದ ನೀನೇ ಧನ್ಯಳು! ಇನ್ನು ಸಂದೇಹ ಬೇಡ. ನಿನಗೆ ಇಷ್ಟ ವಿದ್ದರೆ ನಿನ್ನ ವ್ಯವಹಾರಗಳನ್ನೆಲ್ಲ ಸೇಟಜೀಯು ನಿರೀಕ್ಷಿಸಿದಂತೆ ನಾನೇ ನೋಡಿಕೊಳ್ಳುವೆನು. ನಿನ್ನನ್ನು ನನ್ನ ಸ್ವಂತ ಪುತ್ರಿಯಂತೆ ನೋಡಿಕೊಳ್ಳು ವೆನು' ಎಂದನು.

ಈ ವಿಚಾರಗಳನ್ನೆಲ್ಲ ಮಥಿಸಿ ರಾಧೆಯು 'ಸಾಹೇಬರೇ! ನೀವೇ ನನ್ನ ವೈವಾಟುಗಳನ್ನು ನೋಡಿರಿ. ನನ್ನಲ್ಲಿ ಪುತ್ರವಾತ್ಸಲ್ಯವನ್ನು ಇಡಿರಿ. ಈಗ ಒಂದು ಕೆಲಸವಿದೆ. ಮನುಷ್ಯಾವಸ್ಥೆಯು ಅಸ್ಥಿರ. ಇಲ್ಲಿಂದ ನನ್ನ ಮನೆಗೆ ಮುಟ್ಟುವ ಮುಂಚೆ ನನಗೆ ಏನಾದರೂ ಅಪಾಯ ಬಂದರೆ ಸೇಟಜಿಯ ಕೋರಿಕೆಯು ಈಡೇರಲಾರದು. ನಾನೆಷ್ಟಾದರೂ ಅಬಲೆ. ಆದ್ದರಿಂದ ಈಗಲೇ ಈ ಹೆಸರಿಗೆ ಅದನ್ನೆಲ್ಲ ವೀಲು ಬರೆದು ನಿಮ್ಮ ಬಳಿಯಲ್ಲಿಟ್ಟುಕೊಳ್ಳಿರಿ' ಎಂದಳು.

ಜಹಾಂಗೀರನು ಸಮ್ಮತಿಸಿ ಹಾಗೆಯೇ ಬರೆದು ಅವಳ ಸಹಿಯನ್ನು ಪಡೆದು ಸಾಕ್ಷಿ ಹಾಕಿಸಿ ತನ್ನ ಕಬ್ಬಿಣದ ಸೇಫಿನಲ್ಲಿರಿಸಿದನು. ಆ ಮೇಲೆ ರಾಧೆಗೆ ಒಂದು ಬ್ರಾಹ್ಮಣ ಖಾನಾವಳಿಯಲ್ಲಿ ಊಟಮಾಡಿಸಿ, ಸೇಟಜಿಯು ಅವಳಿಗೆ ಬರೆದಿದ್ದ ಕಾಗದವನ್ನು ಅವಳ ಕೈಗೆ ಒಪ್ಪಿಸಿಕೊಟ್ಟು, ತನ್ನ ಮೋಟರಿನಲ್ಲಿ ಸ್ಟೇಷನ್ನಿಗೆ ಮುಟ್ಟಿಸಿದನು. ಅವಳು ಮೂರನೆ ಕ್ಲಾಸಿನ ಸ್ತ್ರೀಯರ ಬಂಡಿಯಲ್ಲಿಯೇ ಕುಳಿತುಕೊಳ್ಳುವೆನೆಂದು ಹಟತೊಟ್ಟಳು. ಹೇಗೂ ರೈಲು ಹತ್ತಿ ತನ್ನ ಮನೆಕಡೆಗೆ ಹೊರಟಳು.

---

## ೨೩ನೆ ಅಧ್ಯಾಯ

## ಉಪಸಂಹಾರ

ಮರುದಿನ ಸಾಯಂಕಾಲ ನಾಲ್ಕು ಗಂಟೆಗೆ ರಾಧೆಯು ತನ್ನ ಊರ ಬಳಿಯ ಸ್ಟೇಷನ್ನಿನಲ್ಲಿ ಇಳಿದಳು. ಗೋಪಾಲನು ಅವಳನ್ನು ಸ್ಟೇಷನ್ನಿನಲ್ಲಿ ಕಾದಿದ್ದನು. ಅವಳನ್ನು ಕಂಡಾಗ ಅವಳ ಮುಖ ತೀರಾ ವಿವರ್ಣವಾಗಿತ್ತು. ಪ್ರಯಾಣದ ದಣುವೆಂದು ಭಾವಿಸಿ, ಅವನು 'ನೀನು ಹೋದ ಕೆಲಸವೆಲ್ಲ ಸಾಂಗವಾಗಿ ನೆರವೇರಿತೇ?' ಎಂದು ಪ್ರಶ್ನಿಸಿದನು.

'ಅದರಲ್ಲಿ ನಿಮ್ಮ ಅಭಿಪ್ರಾಯ ತಿಳಿಯಬೇಕಾಗಿದೆ. ಮನೆಗೆ ಹೋದ ಮೇಲೆ ಪ್ರಸ್ತಾಪಿಸುವೆನು' ಎಂದು ರಾಧೆಯು ಸುಮ್ಮಗಾದಳು. ಹೇಗೂ ಮನೆಯನ್ನು ಮುಟ್ಟಿದರು. ಆ ಮೇಲೆ ರಾಧೆಯು ಸೇಟಜಿಯ ವೀಲಿನ ಸಮಾಚಾರವನ್ನು ಹೇಳಿ ತನಗೆ ಸೇಟಜಿಯು ಬರೆದ ಕಾಗದವನ್ನು ಗೋಪಾಲನ ಕೈಗೆ ಇತ್ತಳು.

ಅದನ್ನು ಓದಿದೊಡನೆ ಗೋಪಾಲನು ತನ್ನ ತಲೆಯನ್ನು ಬಾಗಿಸಿ, ಕೈಗಳ ನಡುವೆ ಇರಿಸಿ, ನೆಲವನ್ನು ನೋಡುತ್ತ ತುಸು ಹೊತ್ತು ಯೋಚಿಸುತ್ತ ಕುಳಿತನು. ಕೊನೆಗೆ ಮುಖದ ಮೇಲೆ ವ್ಯಾಕುಲ—ಹೃದಯಭೇದಕ ಸ್ವರ ದಿಂದ 'ರಾಧಾ! ನಮ್ಮಿಬ್ಬರ ಋಣಾನುಬಂಧವು ಇಲ್ಲಿಗೆ ತೀರಿತು. ನಾನು ಕೋಟ್ಯಾಧೀಶನ ಸಾಕುಮಗಳ ಅಶನಾರ್ಥಿಯಾಗಿ ಜೀವಿಸಲಾರೆನು. ನನ್ನ ಪುಸ್ತಕ ಇನ್ನೂ ಮುಗಿಯಲಿಲ್ಲ. ಅದನ್ನು ಮುಗಿಸುವ ಆಸೆಯು ನಿರಾಸೆಯಾಯಿತು. ಹೇಗೂ ನಾನು ಇನ್ನೂ ಇಲ್ಲಿರಲಾರೆನು. ನಾಳೆ ಬೆಳಿಗ್ಗೆ ಈ ಊರನ್ನು ಬಿಟ್ಟು ಎಲ್ಲಿಗಾದರೂ ಹೋಗುವೆನು.' ಎಂದು ಹೇಳಿದನು.

ರಾಧೆಯ ಹೃದಯು ಬಿರಿದಂತಾಯಿತು. ಅವಳ ಕಣ್ಣುಗಳಿಂದ ನೀರು ಸುರಿಯುತಿತ್ತು. ಆದರೂ ಅದನ್ನು ಲೆಕ್ಕಿಸದೆ ಗೋಪಾಲನು ಹೊರಗೆ ಬೀದಿಗಿಳಿದು ನೇರಾಗಿ ಕಡಲದಂಡೆಗೆ ಹೋದನು. ರಾಧೆಗೆ ದಿಕ್ಕು ತೋರ ಲಿಲ್ಲ. 'ಈ ಮುದುಕನು ನನ್ನ ಪ್ರಣಯಭಾಜನನಾದವನನ್ನು ನನಗೆ ಸಂಪಾದಿಸಿಕೊಟ್ಟರೂ ಈ ವೀಲಿನ ದೆಸೆಯಿಂದ ಉಪಕಾರ ಮಾಡುವ ಬದಲಾಗಿ ಅಪಕಾರಮಾಡಿದಂತಾಯಿತಲ್ಲ! ಗೋಪಾಲನು ತುಸು ಉದಾ ರತ್ವನನ್ನು ತಳೆಯಬಹುದಿತ್ತು. ಇದೆಲ್ಲ ನನ್ನ ದುರ್ದಶೆ. ಇನ್ನು ನನಗೆ ಈ ಲೋಕದಲ್ಲಿ ಏನು ಆಸೆ ಉಳಿದಿದೆ? ಇನ್ನು ಆತ್ಮತ್ಯಾಗವೇ ನನಗೆ ಗತಿ' ಎಂದು ಯೋಚಿಸುತ್ತಾ ಬಾಗಿಲಿಗೆ ಬೀಗ ಹಾಕಿ, ನೇರಾಗಿ ಕಡಲಿನಲ್ಲಿ ಚಾಚಿರುವ ಬಂಡೆಯ ಕಡೆಗೆ ಹೋಗಿ, ಅದನ್ನು ಹತ್ತಿ, ಅಲ್ಲಿಂದ ನೂರಾರು ಅಡಿ ಕೆಳಗೆ ಅಲೆಗಳು ಬಂಡೆಗೆ ಅಪ್ಪಳಿಸುತ್ತಿರುವುದನ್ನು ನೋಡುತ್ತ ಅಸ್ತಮಿಸುವ ಸೂರ್ಯನನ್ನು ನೋಡುತ್ತ ದೇವರನ್ನು ಧ್ಯಾನಿಸುತ್ತ ನಿಂತಳು. ಆ ಮೇಲೆ 'ಈ ನಿಷ್ಪ್ರಯೋಜನವಾದ ದೇಹವನ್ನು, ಸಾಗರರಾಜನೆ, ನಿನಗೆ ಸಮರ್ಪಿಸುವೆನು. ಅನಾಥೆಯಾದ ನನಗೆ ನೀನೆ ತಾಯಿ, ನೀನೆ ತಂದೆ. ನಿನ್ನ ವಕ್ಷಸ್ಥಳದಲ್ಲಿ ನನಗೆ ಸ್ಥಳ ಕೊಡು' ಎಂದು ಕೆಳಕ್ಕೆ ದುಮುಕುವು ದಕ್ಕೆ ಕೈಗಳನ್ನು ಹಿಂದೆ ತೂಗಿದಳು. ಅಷ್ಟರಲ್ಲಿ 'ತಡೆ ತಡೆ! ಅಂಥ ಸಾಹಸ ಮಾಡಬೇಡ!' ಎಂದು ಯಾರೊ ಅವಳನ್ನು ಹಿಡಿದೆಳೆದಂತಾಯಿತು.

ಹಿಂತಿರುಗಿ ನೋಡಿದರೆ ಗೋಪಾಲ. 'ನನ್ನನ್ನು ಏತಕ್ಕೆ ತಡೆದಿರಿ? ಈ ಕಡಲಲ್ಲಿಯಾದರೂ ಸುಖನಿದ್ರೆ ಮಾಡುವುದು ನಿಮಗೆ ಅಸಮ್ಮತಿಯೇ?' ಎಂದು ಹೇಳಿ ಅತ್ತಳು. ಆಗ ಆತನು ನನಗೆ ನಿನ್ನ ಮನೋದಾರ್ಢ್ಯವು ಗೊತ್ತಾಗಲಿಲ್ಲ. ಇಂಥ ಸಾಹಸಕ್ಕೆ ಹೋಗಬೇಡ. ನನಗೂ ಶಾಂತಿಯಿಲ್ಲ; ಕಳವಳವಾಗಿದೆ. ಅರಿಯದೆ ಬಿರುನುಡಿಗಳನ್ನು ನುಡಿದ ನನ್ನನ್ನು ಕ್ಷಮಿಸು. ನಿನ್ನ ಜೀವ ಉಳಿಯುವುದೆಂದರೆ ನನ್ನ ಜೀವದಾನ ಕೊಟ್ಟ ಹಾಗೆ ಎಂದು ಅವಳನ್ನು ಸಮದಾಯಿಸಿ ಬಂಡೆಯ ಕಲ್ಲಿನ ಕಿರು ದಾರಿಯ ಮೆಟ್ಟಲುಗಳಿಂದ ನಿಧಾನವಾಗಿ ಕೆಳಕ್ಕೆ ಇಳಿಸಿದನು. ಅವರಿಬ್ಬರು ದಂಡೆಯ ಮೇಲೆ ಹೆಜ್ಜೆ ಇಡುತ್ತ ಮುಂದಿನ ವಿಷಯವನ್ನು ಚರ್ಚಿಸಿದರು. ಆಗ 'ಮುಂಬಯಿಯಿಂದ ಬರುವಾಗಲೇ ನಾನು ನಿಮ್ಮ ಹೆಸರಿನಲ್ಲಿ ವೀಲು ಮಾಡಿದ್ದೇನೆ' ಎಂದು ರಾಧೆಯು ತಿಳಿಸಿದಳು. 'ಹೇಗಿದ್ದರೂ ಸೇಟಜಿಯ ದ್ರವ್ಯವನ್ನು ಪರಹಿತಕ್ಕಾಗಿ ನಾವು ವಿನಿಯೋಗಿಸ ಬೇಕು, ಅವರ ಮುತ್ತಾಲಿಕರಾಗಿ—ಮ್ಹಾಲಿಕರಾಗಿ ಅಲ್ಲ—ನಾವು ಆ ಧನ ವನ್ನು ಬಡವರ ಉದ್ಧಾರಕ್ಕಾಗಿ ವಿನಿಯೋಗಿಸಬೇಕು' ಎಂದು ನಿರ್ಧಾರ ಮಾಡಿ ಹಿಂತಿರುಗಿದರು. ರಾಧೆಯನ್ನು ಅವಳ ಮನೆಗೆ ಮುಟ್ಟಿಸಿದನಂತರ ಗೋಪಾಲನು ತನ್ನ ಬಿಡಾರಕ್ಕೆ ಹಿಂತಿರುಗಿದನು.

* * * * *

ಇನ್ನು ಉಳಿದ ಕಥೆ ಸ್ವಲ್ಪವೇ. ಗೋಪಾಲ ಮತ್ತು ರಾಧೆಗೆ ಪ್ರೌಢ ವಿವಾಹದ ಎಕ್ಟಿನ ಮೇರೆಗೆ ವಿವಾಹವಾಯಿತು. ಸೇಟಜಿಯ ಟ್ರಸ್ಟಿಗಳೆಂಬಂತೆ ಆ ಸಂಪತ್ತಿನ ವಿನಿಯೋಗಕ್ಕೆ ಅವರು ಕೈಹಚ್ಚಿದರು. ರಾಧೆಯ ತಂದೆಯು ಅವಳ ಜಾತಕದಲ್ಲಿ ಕಂಡ ಭವಿಷ್ಯವು ವಿಚಿತ್ರರೀತಿಯಿಂದ ರೂಪುಗೊಂಡಿತು.

